# ಉಮಾ-ಶಶಿ

[ಸಾಮಾಜಿಕ ನಾಟಕ]

ಚಿ. ಸದಾಶಿವಯ್ಯ
ದೇಶೀಯ ವಿದ್ಯಾಶಾಲಾ - ಬೆಂಗಳೂರು ೪.

ಪ್ರಕಾಶಕರು
ಆನಂದ್ ಬ್ರದರ್ಸ್,
ಕೆಂಪೇಗೌಡರಸ್ತೆ, ಬೆಂಗಳೂರು ೨

೧೯೫೨ ಬೆಂಗಳೂರು.

ಈ ಶತಮಾನದ ಆದಿಯಲ್ಲಿ
ಕನ್ನಡ ರಂಗಭೂಮಿಯ ಸೇವೆಗಾಗಿ
ಸಹಸ್ರಾರು ರೂಪಾಯಿಗಳ ವೆಚ್ಚವನ್ನು ಗಮನಿಸಿದೆ

**" ಪರ್ಣಪುರೀ ಕರ್ಣಾಟಕ ನಾಟಕ ಸಭೆ "**

ಯನ್ನು ಸ್ಥಾಪಿಸಿ ದುಡಿದ

ನನ್ನ ತಾತ

**ಚಿಟ್ಟನಹಳ್ಳಿ ನಂಜುಡಯ್ಯನವರು**
(ಸಭೆಯ ಸಂಸ್ಥಾಪಕರು)

ನನ್ನ ತಂದೆ

**ಚಿಟ್ಟನಹಳ್ಳಿ ಶ್ರೀಕಂಠಯ್ಯನವರು**
(ಸಭೆಯ ಪ್ರಮುಖ ಸ್ತ್ರೀ ಪಾತ್ರಧಾರಿಗಳು)

ನನ್ನ ಚಿಕ್ಕ ತಂದೆ

**ಚಿಟ್ಟನಹಳ್ಳಿ ಚಂದ್ರಶೇಖರಯ್ಯನವರು**
(ಸಭೆಯ ಪ್ರಮುಖ ಪುರುಷ ಪಾತ್ರಧಾರಿಗಳು)

ಮತ್ತೂ

**ಮೋಟಗಾನಹಳ್ಳಿ ಮಹಾದೇವಶಾಸ್ತ್ರಿಗಳು**
(ಸಭೆಯ ವ್ಯವಸ್ಥಾಪಕರು)

ಈ ನಾಲ್ವರು ಹಿರಿಯರ ಸೇವೆಯ ಮಧುರಸ್ಮರಣೆಗಾಗಿ
ಈ ನಾಟಕವನ್ನು ಕಿರಿಯಕಾಣಿಕೆಯಾಗಿ ಅರ್ಪಿಸಿದ್ದೇನೆ.

ನಂದನ ಸಂವತ್ಸರ
ಆಶ್ವಯುಜ ಶುಕ್ಲಪಕ್ಷ
ವಿಜಯ ದಶಮಿ .

**—ಸದಾಶಿವ**

# ಪಾ ತ್ರ ಗ ಳು .

| | | |
|---|---|---|
| ಈಶ್ವರಯ್ಯ | ... | ಹಳ್ಳಿಯಲ್ಲಿದ್ದ ತನ್ನ ಅಲ್ಪಸ್ವಲ್ಪ ಆಸ್ತಿಯನ್ನೆಲ್ಲಾ ಮಾರಿ ಮಗನನ್ನೋದಿಸಿ, ಈಗ ಪಟ್ಟಣಕ್ಕ ಬಂದು ನೆಲಸಿರುವ ಕುಟುಂಬಿ. |
| ಭಾಗಮ್ಮ | .... | ಈಶ್ವರಯ್ಯನ ಹೆಂಡತಿ |
| ಶಶಿಕುಮಾರ್ | .... | ಈ ದಂಪತಿಗಳ ಏಕಮಾತ್ರ ಪುತ್ರ |
| ಅನಂತು | .. | ಶಶಿಯ ಆಪ್ತಮಿತ್ರ |
| ಸುಮಾ | .... | ಅನಂತುವಿನ ತಂಗಿ, ಶಶಿಯ ಇಂಗಿತವನ್ನರಿತು ಅದರಂತೆ ಅವನನ್ನೇ ಪತಿಯೆಂದು ಮನಸಾರ ವರಿಸಿ, ಮುಂದೆ ಅವನು ಬೇರೆಯವರನ್ನು ಮದುವೆ ಯಾದರೂ ತನಗೇನೋ ಆತನೇ ಪತಿಯೆಂದು ತ್ರಿಕರಣಪೂರ್ವಕವಾಗಿ ನಂಬಿ ನಿಂತ ಮಹಾಸತಿ |
| ಗೋಪೀನಾಥರಾವ್ | .... | ತುಂಕೂರಿನ ಶ್ರೀಮಂತ ಜಮೀನ್‌ದಾರ್ |
| ಸರಸ್ವತಮ್ಮ | .... | ಗೋಪೀನಾಥರಾಯನ ಹೆಂಡತಿ |
| ಉಮಾ | .... | ಈ ದಂಪತಿಗಳ ಸರ್ವಸ್ವಳಾದ ಏಕಮಾತ್ರ ಪುತ್ರಿ, ಹುಟ್ಟನಿಂದ ಹೆಳವಿ, ತನ್ನನ್ನು ಕೈ ಹಿಡಿದು ತಾಳೀ ಕಟ್ಟಿದ ಶಶಿಯ ಭವಿಷ್ಯಕ್ಕಾಗಿ, ಮೋಸಕ್ಕೆ ಬಲಿಯಾಗಿ ಪ್ರಾಣತ್ಯಾಗ ಮಾಡಿದ ಮಹಾಸತಿ |
| ನಾಗೇಂದ್ರರಾವ್ | .... | ಸರ್ಕಾರಿ ಅಧಿಕಾರಿ |
| ರಮಾ | .. | ಈತನ ಏಕ ಮಾತ್ರ ಪುತ್ರಿ ವಿದ್ಯಾವತಿ ತಂದೆಯ ಬಲವಂತಕ್ಕ, ಪರಿಸ್ಥಿತಿಯ ಮುಗ್ಗಟಿಗೆ ಸೋತು, ಬುದ್ಧಿಭ್ರಮಣೆಯಾದ ಶಶಿಯನ್ನು ಮದುವೆಯಾಗಿಬಿಟ್ಟು, ನಂತರ ಅವನು ಹೇಗಿದ್ದರೂ ಆತನೇ ತನ್ನ ಜೀವನಸರ್ವಸ್ವ ವೆಂದರಿತು, ತಂದೆಯನ್ನೇ ತೊರೆದು ಅವನ ಸೇವೆಗೆ ಮೀಸಲಾಗಿ ನಿಂತ ಮಹಾಸತಿ |
| ದಾಸ | ... | ಗೋಪೀನಾಥರಾಯನ ಮನೆಯ ವೃದ್ಧ ಸೇವಕ |
| ವಿಷಕಂಠಯ್ಯ | .... | ಈಶ್ವರಯ್ಯನ ಗೆಳೆಯ. ಯಾವ ಕೆಲಸಕ್ಕೂ ಹೇಸದ ನೀಚ ಸ್ವಾರ್ಥಿ. |

# ನಾಟಕಕಾರನ ನಾಲ್ಕು ಮಾತುಗಳು



ಮೈಸೂರಿನ ಮೂರನೆ ಯುದ್ಧದ ಹಿನ್ನೆಲೆಯಲ್ಲಿ, ಶಿವಮೊಗ್ಗೆಯ ಬಳಿ ಮೃತನಾದ ಪತಿಯ ದೇಹದೊಂದಿಗೆ ಸಹಗಮನಮಾಡಿ ಸತಿಯಾದ ಹರಿಕಾರನೊಬ್ಬನ ಹೆಂಡತಿಯ ಸ್ಥೈರ್ಯ, ಸಡಗರ, ಮನೋದಾರ್ಢ್ಯಗಳನ್ನು ಆಶ್ಚರ್ಯ ಮೆಚ್ಚುಗೆಯಿಂದ ಚಿತ್ರಿಸಿರುವ ಲೆಫ್ಟಿನೆಂಟ್ ಮೂರ್ ಸಾಹೇಬನ ವರ್ಣನೆಯನ್ನು ಆಶ್ರಯಿಸಿ, ಎಂಟು ವರುಷದ ಹಿಂದೆ ನಾನು ಕಥೆಯನ್ನು ಬರೆಯುತ್ತಿದ್ದಾಗ, " ಕೇವಲ ಸಹಗಮನ ಮಾಡಿ ಗಂಡನೊಂದಿಗೆ ಪ್ರಾಣತ್ಯಾಗ ಮಾಡಬಲ್ಲವಳು ಮಾತ್ರ ಮಹಾಸತಿಯೇ? ಗಂಡನಿಗಾಗಿ ಬದುಕಿ ಬಲಿಯಾಗುವವಳು ಮಹಾಸತಿಯಲ್ಲವೇ? ಅಥವಾ ಸಮಾಜದ ದೃಷ್ಟಿಯಂತೆ ತಾಳಿ ಕಟ್ಟಿಸಿಕೊಳ್ಳದಿದ್ದರೂ, ತಾನೇ ಮನಸಾರೆ ವರಿಸಿದ ಗಂಡನಿಗಾಗಿ ಏಕಮನಸ್ಕಳಾಗಿ ನಿಲ್ಲುವ ಕನ್ಯೆಯು ಮಹಾಸತಿಯಲ್ಲವೇ?" ಹೀಗೆಂಬ ಯೋಚನೆಗಳು ಮನಸ್ಸಿನಲ್ಲಿ ಮೊಳೆತು, ಕಾಲಕ್ರಮೇಣ ರೂಪುಗೊಂಡು ಈ ನಾಟಕದ ಕಥಾಭಿತ್ತಿಯಾದುವು. ಆರೇಳುವರ್ಷಗಳ ಕೆಳಗೆ ನನ್ನ ಗೆಳೆಯರಾದ ಆರ್ ಎನ್ ಕೃಪಾ, ಬಿ ಎಸ್‌ಸಿ, ಬಿ ಇ, ಮತ್ತೂ ಸಿ ಜಯವಿದ್ಯ, ಬಿ ಎಸ್‌ಸಿ, ಬಿ ಇ, ಇವರುಗಳು ನಾಟಕದ ಕಥೆಯನ್ನು ಕೇಳಿ, ಅದನ್ನು ಬರೆದೇಬಿಡಬೇಕೆಂದೂ ಆದಷ್ಟು ಜಾಗ್ರತೆ ರಂಗಭೂಮಿಗೆ ತರಬೇಕೆಂದೂ ಸಂಕಲ್ಪಿಸಿ ಮೊದಲನೇ ದೃಶ್ಯವನ್ನು ಬರೆದುಕೊಂಡರು ಅದು ಬಹು ದೀರ್ಘವಾಯಿತಲ್ಲದೆ ಚಿಕ್ಕಟ್ಟಾಗಿದ್ದಂತೆ ಕಂಡುಬರಲಿಲ್ಲ. ಮುಂದೆ ಒದೆರಡು ವರುಷಗಳ ತರುವಾಯ ಒಂದು ಸಿನೆಮಾ ಕಂಪೆನಿಯವರು ಕಥೆಗಾಗಿ ಬಂದಿದ್ದಾಗ ನನ್ನ ಕೆಲವು ಮಿತ್ರರ ಸಲಹೆಯಂತೆ ಈ ಕಥೆಯನ್ನು ಹೇಳಿದೆ. ಅವರು ಮೆಚ್ಚಿಕೆಯನ್ನು ತೋರಿಸಿ ಅದನ್ನು ತೆಗೆದುಕೊಳ್ಳಲು ಒಪ್ಪಿದರು. ಆದರೆ ಇತರ ವ್ಯವಹಾರದಲ್ಲಿ ತೊಡಕುಂಟಾದ ಕಾರಣ, ನಾನು ಇದನ್ನು ಬರೆದು ಕೊಡಲಾಗದೇ ಹೋಯಿತು. ಇದಾದ ಕೆಲವು ದಿವಸಗಳಲ್ಲೇ ಇದನ್ನು ಕಥಾರೂಪದಲ್ಲೇ ಬರೆಯಲಾರಂಭಿಸಿ ಸುಮಾರು ಇನ್ನೂರ

ಪುಟಗಳಲ್ಲಿ ಅರ್ಧದಷ್ಟು ಕಥೆಯನ್ನು ರೂಪಿಸಿದ್ದೆ. ಈ ವೇಳಗೆ ನನ್ನ ಹಳಯ ಗೆಳೆಯರಾದ ಮನೋಹರ ಗ್ರಂಥಮಾಲೆಯ ಜಿ. ಬಿ. ಜೋಶಿಯವರು ಭೇಟಿಯಾದರು-ಪ್ರಸಂಗ ವಶಾತ್ ಈ ಕಥೆಯನ್ನು ಅವರಲ್ಲಿ ಹೇಳಬೇಕಾಗಿ ಬಂದಿತು. ಅವರು ಕಡೆಯವರೆಗೂ ಕೇಳಿ "ಕಥೆಯು ನಾಟಕಕ್ಕೆ ಬಹು ಸೊಗಸಾಗಿ ಒಗ್ಗುತ್ತದೆ. ಇದನ್ನು ನಾಟಕವನ್ನಾಗೇ ಏಕೆ ಬರೆಯಬಾರದು ?" ಎಂದರು. ನಾನು ನಾಟಕ ಪ್ರಕಾಶನವು ಕಷ್ಟವಾದದ್ದೆಂದೆನಲು "ನಾನಿಲ್ಲವೇ? ನೀವು ನಾಟಕವಾಗಿಯೇ ಬರೆಯಿರಿ" ಎಂದು ಪ್ರೋತ್ಸಾಹಿಸಿದರು ಈಚೆಗೆ ಆನಂದ್ ಬ್ರದರ್ಸ್ ಸಂಸ್ಥೆಯರೂ ಸಹ "ನಾಟಕವನ್ನೇ ಬರೆಯಿರಿ"ಂದು ಆಶ್ವಾಸನವಿತ್ತು, ಇಷ್ಟು ದೊಡ್ಡದಾದರೂ ಅದನ್ನು ಕೇವಲ ಅಭಿಮಾನದಿಂದ ಮುದ್ರಿಸಿ ಪ್ರಕಾಶನ ಮಾಡಿದ್ದಾರೆ ಇದರ ಹಸ್ತ ಪ್ರತಿಯನ್ನು ಸಿದ್ಧಗೊಳಿಸುವುದರಲ್ಲಿ ಗೆಳೆಯರಾದ ವೈ. ವಿ ರಾಮದಾಸ್, ಬಿ ಎಸ್ ಸಿ, ಬಿ ಇ, ಯವರು ತಮ್ಮ ಅಮೂಲ್ಯವಾದ ಸಮಯವನ್ನು ಕೊಟ್ಟು ಸಹಕರಿಸಿದ್ದಾರೆ ನನ್ನ ಈ ಎಲ್ಲಾ ಮಾನ್ಯಗೆಳೆಯರಿಗೂ ನಾನು ಬಹು ಋಣಿಯಾಗಿದ್ದೇನೆ ವ್ಯಾಪಾರ ದೃಷ್ಟಿಯಿಂದ ಶೀಘ್ರ ಪ್ರತಿಫಲಕಾರಿಯಲ್ಲದಿದ್ದರೂ ನನ್ನಿಂದ ನಾಟಕಗಳನ್ನು ಬರೆಸಿ, ಪ್ರೇಮದಿಂದ ಪ್ರಕಾಶನಮಾಡಿ ರಂಗಭೂಮಿಯ ಜೀವಾಳವಾದ ಕೃತಿಸಂಪತ್ತನ್ನು ಹೆಚ್ಚಿಸಲು ನೆರವಾಗುತ್ತಿರುವ ನನ್ನ ಪ್ರಕಾಶಕರಿಗಂತೂ ನಾನು ಬಹಳ ಕೃತಜ್ಞನಾಗಿದ್ದೇನೆ.

**ಚಿ. ಸದಾಶಿವಯ್ಯ,**
ಬೆಂಗಳೂರು.

॥ ಶ್ರೀ ಗುರುಭ್ಯೋನಮಃ ॥

# ಶಶಿ

## ಅಂಕ ೧ - ಪ್ರವೇಶ ೧

[ಈಶ್ವರಯ್ಯನ ಮನೆಯ ನಡುಮನೆ. ಒಂಬಡಿಯ ಬಾಗಿಲು ಅರೆ ತೆರೆದಿದೆ. ಬಲ ಪಾರ್ಶ್ವದಲ್ಲಿ ಒಂದಕ್ಕೆ ಒಂದು ಸೋಫಾ, ಪಕ್ಕದಲ್ಲಿ ಒಂದು ಕುರ್ಚಿ ಇವೆ. ಎಡ ಪಾರ್ಶ್ವದಲ್ಲಿ ಮೂಲೆಗೆ ಒಂದು ಮೇಜೂ, ಅದರ ಪಕ್ಕದಲ್ಲಿ ಮತ್ತೆರಡು ಕುರ್ಚಿಗಳೂ ಇವೆ. ಸೋಫಾದ ಮೇಲೆ ಹೊರಗಡೆಗೆ ಹೊರಡಲನುಕೂಲವಾಗಿ ಉಡುಪನ್ನು ಧರಿಸಿ ನಲವತ್ತೆಂಟು ವರ್ಷದ ಈಶ್ವರಯ್ಯನು ಕುಳಿತಿದ್ದಾನೆ. ಮುಖ ಆತಂಕದಿಂದ ಗಂಟುಬಿದ್ದಿದೆ. ತಿದ್ದಿದ ಕುಡಿಮೀಸೆಯು ಅವನ ಹಠಸಾಧನೆಯ ಕೆಚ್ಚು ತೋರುತ್ತಿದೆ. ಪಕ್ಕದ ಕುರ್ಚಿಯಲ್ಲಿ ಮೂವತ್ತೈದು ವರ್ಷದ ವಿಷಕಂಠಯ್ಯನು ಈಶ್ವರಯ್ಯನನ್ನು ಸಮಾಧಾನಪಡಿಸಲು ಅಂಗಲಾಚುತ್ತಿರುವಂತೆ ಕೈಚಾಚಿ ಕುಳಿತಿದ್ದಾನೆ. ಅವನ ಮುಖದಲ್ಲಿ ನೀಚಸ್ವಾರ್ಥವು ತುಂಬಿ ತುಳುಕಾಡುತ್ತಿದೆ. ಬೆಳಿಗ್ಗೆ ಒಂಭತ್ತೂವರೆ ಘಂಟೆಯ ಸಮಯ]

**ಈಶ್ವರಯ್ಯ :**— ಇಲ್ಲಾ ವಿಷಕಂಠಯ್ಯ ! ನಿನ್ನ ಸೂಚನೇನ ನಾನು ಒಂದು ಬಾರಿಯಲ್ಲ, ಹತ್ತು ಬಾರಿಯಲ್ಲ, ನೂರಾರು ಬಾರಿ ಮಗುಚಿ, ತಿರುಪಿ, ಮೆಲಕು ಹಾಕಿ ನೋಡಿದೆ, ಅಷ್ಟು ಸಾಧುವಾಗಿ ಕಾಣಿಸಲಿಲ್ಲ

**ವಿಷಕಂಠಯ್ಯ:**— ನಾನು ತಮ್ಮ ನಲುವಾಗಿ, ಇಷ್ಟೊಂದು ಅಲೆದಾಡಿ ಹುಡುಕಿ ಬಂದು ಹೇಳುತಾ ಇದ್ದೇನೆಯೇ ಹೊರತೂ, ಇದರಲ್ಲಿ ನನಗೀಗ ಬೇಕಾದ್ದೇನಿದೆ ಅಲ್ಲದೇ ಇದರಲ್ಲಿ ಹುಡುಗನ ಭವಿಷ್ಯಕ್ಕೆ ತೊಂದರೆಯಾಗೋ ಅಂಥ ಸಂಗತಿ ಏನಿದೆ ? ಅಪ್ಪಣೆ ಕೊಡಿಸಿ ಅಲ್ಲದೆ ನನಗ ನಿಮ್ಮ ಶಶಿ ಏನಾದರೂ ಶತೃವೋ, ಇಲ್ಲ ಆ ಹುಡುಗಿಯ ತಂದೆ ಸಾವುಕಾರ್ ಗೋಪೀನಾಥರಾವ್ ನಮ್ಮ ಚಿಕ್ಕಪ್ಪನ ಮಗನೋ !

**ಈಶ್ವರಯ್ಯ :**— ಹಾಗಲ್ಲ, ಹಾಗಲ್ಲ, ನೀನು ಹೇಳೋದು ನನ್ನ ಮನಸ್ಸಿಗೇನೋ ಒಂದೊಂದುಸಲ ' ಸರಿಯೇ ? ಏಕಾಗಬಾರದು ? ' ಅನ್ನಿಸುತ್ತೆ ಆದರೆ ಹೊರಗಿನ ನೆಂಟರಿಷ್ಟರ ದೃಷ್ಟಿಯಲ್ಲಿ ಮಹಾಪರಾಧವಾಗಿ ಕಾಣಿಸುತ್ತೆ

**ವಿಷಕಂಠಯ್ಯ :—** ಹಾಗದರೆ ನೀವು ಇದುವರೆಗೂ ಊರಿನ ಗದ್ದೆ ಮನೇನೆಲ್ಲಾ ಮಾರಿಬಿಟ್ಟು ಸಹಸ್ರಾರು ರೂಪಾಯಿ ಹುಡುಗನ ವಿದ್ಯಾಭ್ಯಾಸಕ್ಕೆ ಖರ್ಚುಮಾಡಿ ಎಂ ಎ. ಪಾಸ್ ಮಾಡಿಸಿದ್ದೀರಲ್ಲಾ, ಈ ಹಣವೆಲ್ಲಾ ನಾಳೇ ಚಿರೋಟಿ ಗದುಕಿ ' ಫೈಯ್ಯೀ 'ಂತ ಜೊಗೊಳೀಕೆ ಬರೋ ಆ ನೆಂಟರಿಷ್ಟರೇನಾದರೂ ಚಂದಹಾಕಿ ಸೇರಿಸಿಕೊಡುತಾರೇನೋ ನೋಡೋಣ ಈಶ್ವರಯ್ಯನೋರೇ! ನೀವು ಹಿರಿಯರು. ತಿಳಿದೋರು. ಜಗತ್ತು ದುಡ್ಡನ್ನು ಗೌರವಿಸುತ್ತೇ ಹೊರತು ದಾಕ್ಷಿಣ್ಯಾನಲ್ಲ ನೀವು ಬರಿಗೈಯಾಗಿ ಕೂತರೆ ಮದುವೆಗೆ ಬಂದು, ಮೆದ್ದು, ಮೆಲಕು ಹಾಕಿ, ತಿಂದು ತೇಗಿ, ಸಿಕ್ಕಿದ್ದನ್ನು ದೋಚಿಕೊಂಡು ಹೇಗೋ ಆ ನೆಂಟರಿಷ್ಟರೇ ಇಲ್ಲಸಲ್ಲದ ಮಾತುಗಳಿಂದ ಪರಿಹಾಸ್ಯಮಾಡಿ ಕೇಕೇಹಾಕಿಕೊಂಡು ನಗುತಾರ

ಹೆಂಡತಿ ಮಕ್ಕಳ ಪ್ರೇಮಕ್ಕಾದರೂ ನಾವು ವ್ಯವಹಾರದಲ್ಲಿ ಜಾಣತನ ಇಟ್ಟುಕೊಳ್ಳಬೇಕು ಅಲ್ಲದೇ ನೀವು ಅಂಥಾ ಕ್ರಿಮಿನಲ್ ಅಫೆನ್ಸ್ ಏನು ಮಾಡುತಿರೋದು? ಯಾರೂ ಮದುವೆಯಾಗದಿರೋ ಹುಡುಗಿಯ ಕನ್ಯಾಸೆರೆ ಬಿಡಿಸಿದ ಪುಣ್ಯ ಸಂಪಾದನೆ ಮಾಡಿಕೊಳ್ಳೋದು. ನ್ಯಾಯಾನ್ಯಾಯ್ಯ ನೋಡದೆ ಆ ಹುಡುಗಿ ಅಪ್ಪ ಕೂಡಿಟ್ಟಿರೋ 'ಅನ್ಯಾಯಾರ್ಜಿತಂ ವಿತ್ತಂ'ನಲ್ಲಿ ನಿಮ್ಮ ಪಾಲು ತಗೊಂಡು ನಿಮ್ಮ ಮಗನ ಭವಿಷ್ಯಾನ ಗಟ್ಟಿಮಾಡೋದು ಕೆಲವು ಕಾಲಾನಂತರ ಸಲಕ್ಷಣವಾದ ಹೆಣ್ಣೊಂದನ್ನು ದೊಡ್ಡ ಕಡೇ ನೋಡಿ, ಹುಡುಗೀನೂ ವಿದ್ಯಾವಂತೆಯಾಗಿ ವರನಾಮ್ಯ ಚೆನ್ನಾಗಿದ್ದರೆ, ಅವನಪ್ಪನಿಂದಲೂವೆ, ನೀವು ಬಸಿದು ಬರಿಗೈಆಗಿರೋ ಸಹಸ್ರಾರು ರೂಪಾಯಿನಲ್ಲಿ ಅರ್ಧಮುಕ್ಕಾಲಾದರೂ ಮೇಕ್ಅಪ್ ಮಾಡಿ ನಿಮ್ಮ ಮಗನಿಗೊಂದು ಆಸ್ತಿ ಮಾಡಿ ಹಾಕೋದು ಅದೂಕೂಡ ಬರೀ ಆ ಹುಡುಗಿ ಸುಖಕ್ಕಲ್ಲದೇ ಎಲ್ಲಾ ನೀವೇ ಅದನ್ನೆಲ್ಲಾ ಉಂಡು ಉಟ್ಟು ಮುಗಿಸಿಬಿಡುತೀರೋ! ನೋಡೀ! ನನ್ನ ಅಭಿಪ್ರಾಯ ಇಷ್ಟೆ ಹುಡುಗನ ವಿದ್ಯಾಭ್ಯಾಸಕ್ಕಾಗಿ ನೀವು ಕಳೆದುಕೊಂಡಿರೋ ಗದ್ದೆ, ಮನೆ ಮತ್ತೆ ನಿಮ್ಮದಾಗಬೇಕು ಹುಡುಗನ ಭವಿಷ್ಯಕ್ಕೆ ನೆಮ್ಮದಿಯಾಗಿ ಒಂದು ಗಂಟಾಗಬೇಕು

**ಈಶ್ವರಯ್ಯ :—** ನೀನು ಹೇಳೋ ಆರ್ಗ್ಯುಮೆಂಟ್ ಕೇಳೋಕೆ ಲಾಜಿಕಲ್ಲಾಗಿವೆ ಆದರೆ ವಂಶಕ್ಕೆ ಒಬ್ಬ ಮಗ ದೇವತೆಗಳ ಪಿತೃಗಳ ಸನ್ನಿಧಿಯಲ್ಲಿ

ಆ ಮಗನಿಗೆ ಒಂದು ಹೆಳವಿ ಹೆಣ್ಣನ್ನು ತಂದು ಪಾಣಿಗ್ರಹಣಮಾಡಿಸೋ ಸಂಕಲ್ಪಾನ ಯಾವ ಕಲ್ಲು ಮನಸ್ಸಿನಿಂದ ಮಾಡಲಿ ?

**ವಿಷಕಂಠಯ್ಯ :—** ಆ ಹೆಳವಿ ಹುಡುಗಿ ನಿಮ್ಮ ಸೊಸೆಯಾಗಲೀ ಅನ್ನೋ ದೃಷ್ಟಿಯಿಂದ ನೀವು ಸಂಕಲ್ಪ ಮಾಡೋದು ಕಷ್ಟ ಆದರೆ ಇದು ಕೇವಲ ಒಂದು ನಾಟಕಮಾತ್ರ ಗೋಪೀನಾಥರಾವ್‌ಗೆ ತೀರಿದೇ ತನ್ನ ಮಗಳು ಯಾರಿಗೂ ಹೆಂಡತಿಯಾಗಿ ಬಾಳಲಾರಳು ಅನ್ನೋದು! ಆದರೆ ಅವನಿಗೆ ಅದೊಂದೇ ಹುಡುಗಿ. ಹತ್ತಿರ ಯಥೇಷ್ಟವಾಗಿ ಹಣವಿದೆ. ಹುಡುಗೀಗೆ ಆಯಸ್ಸು ಅಷ್ಟು ಕಾಣಲಿಲ್ಲ ಏಕೆಂದರೆ ಕಾಲಿಲ್ಲದಿರುವುದರ ಜೊತೆಗೆ ಅದೇ ಕೊರಗಿನಲ್ಲೇ ಮೆತ್ತಗಾಗುತ್ತಾ ಇದೆ ಹುಡುಗೀಗೇ ಮದುವೇಂತ ಆಗಿಬಿಟ್ಟರೆ ಸಾಕು, ಅದಕ್ಕೋಸ್ಕರ ಎಷ್ಟೋ ಸಹಸ್ರ ರೂಪಾಯಿ ಖರ್ಚಾದರೂ ಚಿಂತೆಯಿಲ್ಲಾಂತ ಆ ಗೋಪೀನಾಥರಾವ್ ಮತ್ತಾ ಸರಸ್ವತಮ್ಮ ಎರಡನೇದಾಗಿ ನಿಮ್ಮಮನೆಗೆ 'ಭಾಗ್ಯಲಕ್ಷ್ಮಿ' ಅಂಥ ಸರಸ್ವತೀಸ್ವರೂಪದ ಗೌರಮ್ಮನಂಥ ಸೊಸೇನ ತಂದ-ಕೊಡೋಹೊಣೆ ನನ್ನದಾಗಿರಲಿ ಆಗಲೂ ನೀವು ಬರೀ ಬೊಗಸೇಲಿ ಬರದಹಾಗೆ ಕನಿಷ್ಠಪಕ್ಷ ಒಂದು ಬೋಗನೆ ಸವರನ್ನಾದರೂ ನಿಮ್ಮ ಕೈಯಿಗೆ ಬೀಳೋಹಾಗೆ ಮಾಡುತ್ತೇನೆ ನಿಮಗೆಯಾಕೆ ಅದರ ಯೋಚನೆ ಮೊದಲನೇದು ಯಾವುದೋ ಧರ್ಮಕಾರ್ಯ ಅಂದುಕೊಳ್ಳಿ ಎರಡನೇದೇ ನಿಜವಾದಲಗ್ನ ಈ ಮಧ್ಯೆ ಕೆಲವು ತಿಂಗಳ ಬಿಡುವು ಅಷ್ಟೆ

**ಈಶ್ವರಯ್ಯ :—** ನೀನು ಹೇಳೋದೇನೋ ಸರಿಯೆ ಆಡಿಕೊಳ್ಳೋ ಜನ ಹೇಗೂ ಆಡಿಕೊಳ್ಳುತ್ತಾರೆ ಆದರೆ ಹೆಳವಿ ಹುಡುಗೀ ಕೊರಳಿಗೆ ತಾಳಿಕಟ್ಟೊಂತ ನಮ್ಮ ಶಶೀಗೆ ನಾನು ಯಾವ ಬಾಯಿಂದ ಹೇಳಲಿ ? ಅಲ್ಲದೆ ಮುಂದೆ ಭಾಗೂನ ಈ ವ್ಯವಹಾರಕ್ಕೆ ಒಪ್ಪಿಸೋದು ಹ್ಯಾಗೆ ?

**ವಿಷಕಂಠಯ್ಯ .—** ಈಶ್ವರಯ್ಯನೋರೆ ! ನಮ್ಮ ಕರ್ನಾಟಕರ ಮನೆಗಳಲ್ಲಿ ನಿಮ್ಮಹಾಗೆ ಯೋಚನೆಗೆ ಅವಕಾಶವೇ ಇಲ್ಲ ಮನೆಗೆ ತಂದೆಯೇ ಯಜಮಾನ ಮನೆಯ ಸಮಸ್ತರೂ ಅವನ ಆಡಳಿತಕ್ಕೆ ಒಳಪಟ್ಟಿರಬೇಕು ಎಲ್ಲರ ಯೋಗಕ್ಷೇಮಾನೂ ಸಮಷ್ಟಿ ದೃಷ್ಟಿಯಿಂದ ಅವನು ಮಾತ್ರ ತಿಳಿಯಬಲ್ಲ. ಈ ಡೆಮಾಕ್ರಸಿಯು ಹತ್ತು ದಾರಿಗಳಲ್ಲಿ ಹತ್ತಿದರೆ ಊರು ಸೇರೋಕಾದೀತೇ ಸ್ವಾಮೀ !

**ಈಶ್ವರಯ್ಯ :**— ನಾನು ಹೇಳಿದ ಮಾತನ್ನ ನನ್ನ ಹೆಂಡತಿ ಮಗ ತೆಗೆದು ಹಾಕುತಾರೇಂತ ಅಲ್ಲ, ಆದರೆ.. ...

**ವಿಷಕಂಠಯ್ಯ** ·— ತೆಗೆದು ಹಾಕಿದರೆ ಅವರು ಹೆಂಡತಿ ಮಗನೇ....

**ಈಶ್ವರಯ್ಯ** — ನನಗೇನೇ ಒಂದು ತರಹವಾಗಿ ..

**ವಿಷಕಂಠಯ್ಯ** ·— ನಿಮ್ಮ ಹಾಗಿದ್ದುಕೊಂಡು ವ ನೇನೂ ಆಲೋಕೆ ಸಾಧ್ಯವಿಲ್ಲ, ರಾಜ್ಯಾನಂತೂ ಆಳಿದ ಹಾಗೇ !

**ಈಶ್ವರಯ್ಯ** — ಹಾಗಲ್ಲ, ವಿಷಕಂಠಯ್ಯ ಹೊಟ್ಟೇಲಿ ಹುಟ್ಟಿದ ಮಗನಿಗೆ ನಾವು ಎರಡು ಮದುವೆಗಳ ಸಂಕಲ್ಪ ಹೇಗೆ ಮಾಡೋದು ಅಂತ ಯೋಚನೆ.

**ವಿಷಕಂಠಯ್ಯ** — ನೀವು ಸಂಕಲ್ಪ ಯಾಕೆ ಮಾಡಬೇಕು ಒಂದು ಧರ್ಮದ ಕೆಲಸ ಹುಡುಗನಿಗೂ ಸ್ಪಷ್ಟವಾಗಿ ಪ್ಲಾನ್‌ನೆಲ್ಲಾ ಹೇಳಿ ಬಿಡು ವುದು ಕೈಗೊಂದು ಐದೋ ಆರೋ ಸಾವಿರ ಹಾಕಿಸಿಕೊಂಡು ಆ ಗೋಪೀನಾದ ರಾಯನ ಪಾಪದ ಪುಂಜೀ ಭಾರಾನ ಸ್ವಲ್ಪ ಮಟ್ಟಿಗೆ ಇಳಿಸಿ, ಆ ಹೆಳವಿ ಹುಡುಗಿ ಕೊರಳಿಗೊಂದು ಕರಿಮಣಿಸರ ಕಟ್ಟಿಸಿ, ಅವರ ಮನಸ್ಸಿಗೂ ನೆಮ್ಮದಿ ಉಂಟುಮಾಡಿ, ಕೆಲವು ತಿಂಗಳನಂತರ ಗೃಹಕೃತ್ಯಕ್ಕಾಗಿ ನೆಟ್ಟಗಿರೋ ಲಕ್ಷಣವಂತೇನ ಸೊಸೆಯಾಗಿತರೋದು ಅಲ್ಲೊಂದು ಏಳೆಂಟು ಸಾವಿರ ಸೇರಿಸಿ, ಮಗ ಸೊಸೇಗೆ ಮುಂದಕ್ಕನುಕೂಲಮಾಡಿ ಕೊಡೋದು ಇಷ್ಟಕ್ಕೆ ಸಂಕಲ್ಪಮಾಡಿದರೆ ಸಾಕು

**ಈಶ್ವರಯ್ಯ** — ಈಗ ಶಶಿಯ ವಿದ್ಯಾಭ್ಯಾಸಕ್ಕೇಂತ ಅವನು ತುಮಕೂರಿನ ಹೈಸ್ಕೂಲಿಗೆ ಸೇರಿದಾರಭ್ಯ ಇದುವರೆಗೂ ಪುಸ್ತಕಗಳು, ಫೀಸ್ ಊಟ ಹೋಟಲು ಹಾಸ್ಟಲ್ ಚಾರ್ಜುಗಳು ಎಲ್ಲಾಸೇರಿ ಮೂರುಸಾವಿರದ ಎಂಟ ನೂರು ಚಿಲ್ರೆ ರೂಪಾಯಿಗಳಾಗಿವೆ. ಈ ವರ್ಷವಂತೂ ನಾವೇ ಹಳ್ಳಿ ಬಿಟ್ಟು ಬಿಟ್ಟು ಇಲ್ಲಿಗೆ ಬಂದುಬಿಟ್ಟಿವಲ್ಲ ಈಗ ನೀನು ಎರಡನೇದು ಯಾವುದೋ ಹೆಣ್ಣು ಹೇಳಿದೆಯಲ್ಲಾ, ಲಕ್ಷಣವಾದ ವಿದ್ಯಾವತಿಯಾದ ಹುಡುಗಿ, ಅವಳನ್ನೇ ಗೊತ್ತುಮಾಡಿ, ಅವಳ ತಂದೆಯಿಂದ ನ್ಯಾಯವಾದ ವರದಕ್ಷಿಣೇಂತಾಲೇ ಒಂದೈದುಸಾವಿರ ರೂಪಾಯಿ ತಗೊಂಡು, ಏಕೆ ಸುಮ್ಮ

ನೀರಬಾರದು? ಆ ದುಡ್ಡಿನಲ್ಲಿ ನಮ್ಮ ಮೂರುವರೆ ಎಕರೆ ಮಾನ್ಯದ ಗದ್ದೇನೂ, ನಮ್ಮ ಆ ತೋಟ್ಟೇ ಮನೇನೂ ಬಿಡಿಸಿಕೊಂಡುಬಿಡಬಹುದಲ್ಲ! ಅಲ್ಲವೇ ...

**ವಿಷಕಂಠಯ್ಯ** — ನಾನು ಬೇಡಾಂದೆನೇ ಸ್ವಾಮಿ ಜೊತೆಗೆ ಇನ್ನೂ ಒಂದೈದು ಸಾವಿರ ರೂಪಾಯಿ ಅನಾಯಾಸವಾಗಿ ಬರೋ ಹಾಗಿರುವಾಗ ಆ ಲಕ್ಷ್ಮೀನ ಯಾಕೆ ಎಡಗಾಲಿನಿಂದ ಒದೀತೀರಿ? ಇದೇನು ವಿವೇಕವೇ? ನಿಮ್ಮ ಶಶಿ ಅಂಥ ಒಬ್ಬ ಗಂಡು ಮಗ ನನಗಿದ್ದಿದ್ದರೆ ಈ ಸಮಯದಲ್ಲಿ ಮೂರು ಮಹಡಿ ಮನೆ ಕಟ್ಟಿ, ಜೋಡಿ ಕುದುರೆ ಸಾರೋಟು ಇಟ್ಟುಬಿಡುತ್ತಿದ್ದೆ. ನನ್ನ ಅದೃಷ್ಟಕ್ಕೆ ನನಗೊಂದು ಹೆಣ್ಣು ಹುಟ್ಟಿ ಕೂತಿದೆ ಅದಕ್ಕೊಂದು ಗಂಡು ನೋಡಿ ಮದುವೇಂತ ಮಾಡಿಬಿಟ್ಟರೆ, ನನ್ನ ಈ ಜನ್ಮದ ಗೃಹಸ್ಥಾಶ್ರಮ ಸಿದ್ಧಿಸಿದ ಹಾಗಾಯ್ತು.

**ಈಶ್ವರಯ್ಯ** — ಹೌದು ಮಗ ವಿದ್ಯಾವಂತನಾಗಿದ್ದಾನೆ ಈಗ ಸ್ವಲ್ಪ ಹೊತ್ತಿಗೆ ಅವನು ಎಂ ಎ ಪ್ಯಾಸಾದ್ದೂ ತಿಳಿಯುತ್ತೆ ಅದಕ್ಕೋಸ್ಕರವೇ ಅಂಥ ವಿದ್ಯಾವಂತನಿಗೆ ಇಂಥಾ ವ್ಯಾಪಾರದ ಬಾಬತ್ತು ವ್ಯವಹಾರಾನ ಹ್ಯಾಗೆ ತಿಳಿಸೋದು? ಅವನು ಒಪ್ಪದೇ ಹೋದರೆ ಅಥವಾ ಸಿಟ್ಟಾಗಿ ಎದುರು ಬಿದ್ದರೆ, ಇಲ್ಲ ಮನೆಬಿಟ್ಟು ಹೊರಟುಹೋಗಿಬಿಟ್ಟರೆ ... ..ಮುಂದೆ ಗತಿ?

**ವಿಷಕಂಠಯ್ಯ** — ಇದು ನಮಗೆ ಅರ್ಥವಾಗದ ಯಜಮಾನಿಕೆ ಈಶ್ವರಯ್ಯನೋರೆ ನೀವು ಹೇಳುವುದಕ್ಕೆ ಮುಂಚೆನೇ ಹೆದರಿದರೆ ಕೆಲಸ ಹಾದಹಾಗೇ ಆಯಿತು ಮುಂಚೆ ನಿಮ್ಮ ಮನಸ್ಸನ್ನು ಘಟ್ಟಿಮಾಡಿಕೊಳ್ಳಿ. ಎಲ್ಲಾ ಅವನ ಒಳ್ಳೇದಕ್ಕೆ ಮಾಡತಿರೋದು 'ಈ ಮನೆಗೆ ನಾನು ಯಜಮಾನ. ನನ್ನ ಹೆಂಡತಿ ಮಗ ನಾನು ಹೇಳಿದಹಾಗೇ ಕೇಳಬೇಕು' ಅನ್ನೋದನ್ನ ಸ್ಥಿರಮಾಡಿಕೊಳ್ಳಿ. ಪಾಪ ಭಾಗಮ್ಮನೋರು ನಿಮ್ಮ ಮಾತು ತೆಗೆದು ಹಾಕೋರಲ್ಲ. ಒಂದುವೇಳೆ ಏನಾದರೂ ಹೆಂಗಸು ಸಹಜವಾಗಿ ಹೇಳಿದರೆ ಅದಕ್ಕೆ ಸಮಾಧಾನ ಹೇಳಿದರಾಯಿತು. ಇನ್ನು 'ಶಶಿ' ಅವನು ಬೆಣ್ಣೆಯಂಥ ಹುಡುಗ ನೀವು ತಂದೆಯ ಅಧಿಕಾರದಿಂದ ಹೇಳಿದ ಮಾತನ್ನು ಕೇಳೇ ಕೇಳುತ್ತಾನೆ. ಕೇಳೇ ಕೇಳಬೇಕು. ಒಂದುವೇಳೆ ಹುಡುಗು ಬುದ್ಧಿಯಿಂದ ಏನಾದರೂ ತಲೆ ಕೊಡವಿದರೂ ಸಹ ನಿಮ್ಮ ಮರ್ಯಾದೆ ಯೋಗ್ಯತೆಗಾದರೂ

ಒಪ್ಪಲೇಬೇಕು. ಅದೆಲ್ಲಾ ನೀವು ಮಾತುಕತೇ ನಡೆಸೋ ಧೋರಣೇಲಿದೆ ಆಳಿದಹಾಗೆಲ್ಲಾ ಇದೆ ಗೃಹಕೃತ್ಯ, ವ್ಯವಹಾರ, ರಾಜ್ಯಭಾರ

**ಈಶ್ವರಯ್ಯ** .— ಹಾಗಾದರೆ ಒಂದು ಕೆಲಸ ಮಾಡೋಣ ಈಗ ನಿನ್ನ ಸಮಕ್ಷಮದಲ್ಲೇ ನನ್ನ ಹೆಂಡತಿಗೆ ಈ ಸಮಾಚಾರ ತಿಳಿಸುತ್ತೇನೆ. ಅವಳ ಅಭಿಪ್ರಾಯ ಹ್ಯಾಗಿದೆ ಅನ್ನೋದು ಗೊತ್ತಾಗುತ್ತೆ 'ಶಶಿ' ಮಾತು ಮುಂದೆ.

**ವಿಷಕಂಠಯ್ಯ** — ನೀವು ಹೇಳುತಿರೋದರಲ್ಲೇ ಕೆಲಸವಾದಹಾಗೇ ಇದೆ ಅಲ್ಲಾ ಈಶ್ವರಯ್ಯನೋರೆ! ಭಾಗಮ್ಮನೋರನ್ನು ಕರೆದು 'ನಾನು ಈ ರೀತಿ ತೀರ್ಮಾನಮಾಡಿ ನಿಶ್ಚಯಿಸಿದೇನೆ' ಅಂತ ತಿಳಿಸಿಬಿಡಿ ಅಷ್ಟೇ ನಾಳೇ ಕೆಲಸವಾದ ಮೇಲೆ ಅವರೇ ನಿಮ್ಮ ಏರ್ಪಾಟನ್ನು ಹಾಡಿ ಹೊಗಳು ತ್ತಾರೆ

**ಈಶ್ವರಯ್ಯ** — ಇರು ಹಾಗಾದರೆ ವಿಚಾರ ಪ್ರಾರಂಭ ಮಾಡೇ ಬಿಡೋಣ (ಗಡಿಯಾರ ನೋಡಿ) 'ಓ ಹೋ!' ಒಂಭತ್ತು ಘಂಟೆಗೆ ಇನ್ನು ಹತ್ತು ನಿಮಿಷವಿದೆ ಅಂದ ಹಾಗೆ ಇವತ್ತು ಗುಳಿಕಾಲ ಒಂಭತ್ತು ಘಂಟೆಗೇ ಮುಗಿದುಹೋಗುತ್ತೆ. ಹತ್ತೂವರೆಗೆ ರಾಹುಕಾಲ ಬೇರೆ ಆರಂಭವಾಗಿಬಿಡುತ್ತೆ ಈಗಲೇ ಲಗ್ನದ ವಿಚಾರ ಪ್ರಾರಂಭ ಮಾಡೋದು ಒಳ್ಳೇದು

**ವಿಷಕಂಠಯ್ಯ** — ನಿಮ್ಮ ಮನಸ್ಸೊಂದು ಘಟ್ಟಿಯಾಗಿದ್ದರೆ ಸಾಕು ಇಪ್ಪತ್ತುನಾಲ್ಕು ಘಂಟೆಗಳೂ ಗುಳಿಕ ಕಾಲವೇ

**ಈಶ್ವರಯ್ಯ** — ಭಾಗ್ಯ! ಲೇ ಭಾಗ್ಯಾ!!

[ಒಳಗಿನಿಂದ 'ಬಂದೇ', ಎಂಬ ಧ್ವನಿಯು ಹಿಂದೇ ಲಕ್ಷಣವಂತೆಯಾದ, ನಲವತ್ತು ವರ್ಷಗಳಾದರೂ ಯುವತಿಯಂತೆ ಕಾಣುತ್ತಿದ್ದ ಭಾಗಮ್ಮನು ಬಾಗಿಲ ಬಳಿಗೆ ಬರುವಳು. ಮುಖದಲ್ಲಿ ಶ್ರದ್ಧಾ ಪ್ರೇಮಗಳು ಸೂಸುತ್ತಿರುವುವು]

**ಭಾಗಮ್ಮ** — ಕರೆದರಾ?

**ಈಶ್ವರಯ್ಯ** — ಏನು ಅಡಿಗೇ ಕೆಲಸದಲ್ಲಿದ್ದೆಯೋ?

**ಭಾಗಮ್ಮ** :— ಅಡಿಗೆ ಎಲ್ಲಾ ಮುಗಿದ್ಹಿತ್ತು ಪೂಜೆಗೆ ಅಣಿ ಮಾಡಿ ಕೊಳ್ಳುತ್ತಾ ಇದ್ದೆ.

**ಈಶ್ವರಯ್ಯ** — ಅಂದಹಾಗೆ ಇವತ್ತು ಶುಕ್ರವಾರವಲ್ಲವೇ?

**ವಿಷಕಂಠಯ್ಯ .**— ಅಲ್ಲಾ, ಭಾಗಮ್ಮನೋರ ಹಸ್ತದಲ್ಲೇ ಯಜ್ಞೇಶ್ವರನ ವರವಿರಬೇಕು ನನ್ನ ಮನೇಲಿ ಒಂದು ಘಂಟೆ ಹೊಡೆದರೂ ಒಗ್ಗರಣೆ ಹಾಕಿರೊಲ್ಲ ನಮ್ಮೋಳು. ಇಲ್ಲಿ ಒಂಭತ್ತು ಘಂಟೇಗೇನೇ ಒಗ್ಗರಣೆ ರಡಿ

**ಈಶ್ವರಯ್ಯ** ·— ಅದಕ್ಕೆ ಕಾರಣವಿದೆ. ಗುರುವಾರ ಅವಳು ಒಪ್ಪತ್ತು ಊಟ ಮಾಡಿರುತ್ತಾಳೆ. ಅದೂ ಅಲ್ಲದೆ ಇವತ್ತು 'ಶಶಿ' ರಿಸಲ್ಟ್ ಬರೋ ಸಂಭ್ರಮದಲ್ಲಿ ಮೂವರೂ ಐದು ಘಂಟೆಗೇನೇ ಎದ್ದುಬಿಟ್ಟು ಸ್ನಾನಾದಿಗಳನ್ನು ಮುಗಿಸಿಬಿಟ್ಟೆವು

**ವಿಶಕಂಠಯ್ಯ** — ಹಾಗಾದರೆ ಪಾರಣೆ ಕಟ್ಟಲ ವಿಶೇಷವಾಗಿರಬೇಕು

**ಈಶ್ವರಯ್ಯ** — ಇದೇಂತ ಕಾಣುತ್ತೆ ಅದಕ್ಕೇ ನಿನ್ನೂ ಇಲ್ಲಿಗೇ ಬರಹೇಳಿದ್ದು

**ವಿಷಕಂಠಯ್ಯ** — ನೀವು ನನ್ನ ಯಾವಾಗ ಬರಹೇಳಿದಿರಿ ? ಅದೂ ಊಟಕ್ಕೆ ?

**ಈಶ್ವರಯ್ಯ** — ಮನೆಯೋನಾಗಿರೋ ನಿನಗೆ ಅಕ್ಷತೆಕೊಟ್ಟು ಬರ ಹೇಳಬೇಕೆ ? ಅನಿರೀಕ್ಷಿತವಾಗಿ ಬಂದಿರೋ ಅತಿಥಿ ದೇವರಿಗೆ ಸಮಾನ

**ವಿಷಕಂಠಯ್ಯ** — ಕೇಳಿದಿರಾ ಭಾಗಮ್ಮನೋರೇ ! ಈಶ್ವರಯ್ಯನೋರು ಹೇಗೆ ಮಾತಿಗೆ ಸಿಕ್ಕೋದಿಲ್ಲ

**ಭಾಗಮ್ಮ** — ಅವರು ಹೇಳಿದ್ದು ಅಕ್ಷರಸಹ ನಿಜ ನಾವು ಕರೀದೆ ಬರೋ ಅತಿಥಿಗಳು ದೇವರಿಗೆ ಸಮಾನ

**ವಿಷಕಂಠಯ್ಯ .**— ಹಾಗಾದರ ನೀವೂ ನನ್ನ ಇಲ್ಲೇ ಊಟಕ್ಕೇಳೂಂತೀರಾ ?

**ಭಾಗಮ್ಮ** — ನಿಮ್ಮನ್ನ ಹಾಗೇ ಮನೇಗೇ ಕಳಿಸೋರ್ಯಾರು ?

**ವಿಷಕಂಠಯ್ಯ .**— ಮನೇಲಿ ಹೇಳೀ ನಹ ಬಂದಿಲ್ಲವೇ ?

**ಈಶ್ವರಯ್ಯ** — ಶಶಿ ಬಂದಮೇಲೆ ಬೇಕಾದರೆ ಸೈಕಲ್ ಮೇಲೆ ಹೋಗಿ ಹೇಳಿಬಿಟ್ಟು ಬರುತ್ತಾನೆ

**ವಿಷಕಂಠಯ್ಯ** — ಅಂತು ಈಶ್ವರಯ್ಯನೋರು ನಿಜವಾಗಿ ಪುಣ್ಯವಂತರು ಅವರ ಮಾತೂಂತಂದರೆ ಕಣ್ಣಿಗೊತ್ತಿಕೊಳ್ಳೊ, ನೀವು, ತಲೇಲಿ

ಹೊತ್ತು ನಡೆಸೋ ರಾಮನಂಥ ಮಗ ಶಶಿ, ಹೀಗೆ ಸಂಸಾರ ಕೂಡಬೇಕಾದರೆ ಜನ್ಮಾಂತರದ ಸುಕೃತವಿರಬೇಕು.

**ಭಾಗಮ್ಮ** :—ನಿಮ್ಮನ್ನು ಬಿಟ್ಟುಕೊಂಡಿರಲ್ಲ ನಿಮ್ಮಂಥ ಆಪ್ತರಾದ ಸ್ನೇಹಿತರು ಸಿಕ್ಕೋದು ಸುಕೃತವಲ್ಲವೇ?

**ವಿಷಕಂಠಯ್ಯ** —ಅಯ್ಯೋ! ಸಂದೇನು ಮಹಾ. ಇಂಥಾ ಒಳ್ಳೆಯ ಸ್ವಭಾವದವರಿಗೆ ತಲೆಕೂದಲಿನಷ್ಟು ಸ್ನೇಹಿತರು ಮುತ್ತಿಗೊಂಡಾರು. ಆದರೆ ಈಶ್ವರಯ್ಯನೋರು ಹೊಸಸ್ನೇಹಕ್ಕೆ ಹೋಗೋರಲ್ಲ.

**ಈಶ್ವರಯ್ಯ** —ಭಾಗ್ಯ ! ಒಂಭತ್ತು ಘಂಟೆಗೆ ಗುಳಿಕಾಲ ಮುಗಿದು ಹೋಗುತ್ತೆ ಶಶಿ ಬಂದ ಮೇಲೆ ರಾಹುಕಾಲ ಪ್ರಾರಂಭವಾಗಿ ಬಿಡುತ್ತೆ. ಆಮೇಲೆ ವಿಷಕಂಠಯ್ಯ ತುಂಕೂರಿಗೆ ಹೊರಟುಬಿಡಬೇಕಂತೆ. ಅದಕ್ಕೋಸ್ಕರ ಈಗಲೇ ಮಾತು ಪ್ರಾರಂಭಮಾಡಿಬಿಟ್ಟರೋಣಾಂತ ನಿನ್ನ ಕೂಗಿದೆ

**ಭಾಗಮ್ಮ** —"ಶಶಿ" ಮದುವೇ ವಿಚಾರ ತಾನೇ ?

**ವಿಷಕಂಠಯ್ಯ** —ನೋಡಿದಿರಾ ಹೇಗೆ ಶೃತಿಸೇರಿದೆ?

**ಈಶ್ವರಯ್ಯ** —ಹೌದು, ಈಗ ವಿಷಕಂಠಯ್ಯ ತುಂಕೂರಿನ ಸಾಹುಕಾರ್ ಗೋಪೀನಾಥರಾಯರ ಮನೇಲಿ ಒಂದು ಹೆಣ್ಣು ನೋಡಿಕೊಂಡು ಬಂದಿದಾನೆ

**ಭಾಗಮ್ಮ** :—ಅವರ ಹೆಸರು ಕೇಳಿದೀನಿ ಆದರ ಶಾನೆ ದೊಡ್ಡ ಕಡೆಯಾಯಿತಲ್ಲವೇ?

**ವಿಷಕಂಠಯ್ಯ** —ಅವರನ್ನು ದೊಡ್ಡೋರು ಅಂತ ನಾವು ಕರೀತೀಪಿ ಅಷ್ಟ. ಅಲ್ಲದೇ ಎಂ ಎ ಮಾಡಿದ ಹುಡುಗನ ತಂದೆತಾಯಿಗಳು ನೀವು ದೊಡ್ಡೋರಲ್ಲವೆ. ಅವರ ಹತ್ತಿರ ನಗದು ದುಡ್ಡಿದ್ದರೆ ನಿಮ್ಮ ಹತ್ತಿರ ಅದರ ಸಹಸ್ರದಷ್ಟು ಬೆಲೆಯಾದ ವಿದ್ಯಾವಂತನಾದ ಪುತ್ರರತ್ನವಿಲ್ಲವೆ? ಆ ರತ್ನದ ಮುಂದೆ ಗೋಪೀನಾಥರಾಯನೇ ಅಲ್ಲ ಅವನ ಅಜ್ಜನೂ ಕೈ ಜೋಡಿಸಿ ನಿಲ್ಲಬೇಕು. ಅದು ಬಿಡಿ

**ಈಶ್ವರಯ್ಯ** .—ಆ ಹುಡುಗಿ ಹೆಸರು "ಉಮಾ" ಅಂತ. ಪಾರ್ವತೀ ಹೆಸರೇ ಆಯಿತು. ವಯಸ್ಸು ಹದಿನೈದು ತುಂಬಿ ಹದಿನಾರನೇದಂತೆ. ಜಾತ

ಕಾನುಕೂಲವಾಗಿದೆ. (ಜೇಬಿನಿಂದ ಫೋಟೋ ಒಂದನ್ನು ತೆಗೆದು ಹೆಂಡತಿಯ ಕೈಗೆ ಕೊಟ್ಟು) ಇಗೋ ಇದೇ ಹುಡುಗಿಯ ಫೋಟೋ. ಲಕ್ಷಣವಾಗೇನೋ ಇದೆ. ಮನೇಲಿ ಗವರ್ನೆಸ್ ಇಡಿಸಿ ಪಾಠ ಹೇಳಿಸಿ ಮೆಟ್ರಿಕ್ಯುಲೇಷನ್ ಪಾಸ್ ಮಾಡಿಸಿದ್ದಾರಂತೆ. ಸಂಗೀತ ಪಾಠ ಹೇಳಿಸಿದ್ದಾರಂತೆ. ಚೆನ್ನಾಗಿ ಹಾಡು ಹೇಳುತ್ತಂತೆ. ಸರಿ ಮಿಕ್ಕ ವಿಚಾರವೆಲ್ಲಾ ವಿಷಕಂಠಯ್ಯನಿಗೇ ಸೇರಿದ್ದು

**ವಿಷಕಂಠಯ್ಯ** :—ಯಾಕೆ ? ನಿಲ್ಲಿಸಿ ಬಿಟ್ಟಿರಲ್ಲಾ! ಅದನ್ನೂ ನೀವೇ ಹೇಳಿಬಿಡಿ

**ಈಶ್ವರಯ್ಯ** —ಗೋಪೀನಾಥರಾವ್ ನಮ್ಮ ನಿಯಮದಂತೆ ಮದುವೆ ಮಾಡಿಕೊಡುವುದರ ಜೊತೆಗೆ ವರೋಪಚಾರದ ಪಟ್ಟೀಲಿ ನಗದು ಐದುಸಾವಿರ ರೂಪಾಯಿ ಅಂತ ಸೇರಿಸಿದಾರಂತೆ

**ಭಾಗಮ್ಮ**.—ಹುಡಗ ಹುಡಿಗೀರು ಒಬ್ಬರನ್ನೊಬ್ಬರು ನೋಡಿ ಒಪ್ಪಿದ ಮೇಲೆ ನಾವು ಯಾವ ಮಾತಾಡಿದರೂ ಚೆನ್ನಾಗಿರುತ್ತೆ ಹುಡುಗಿ ಫೋಟೊ ವಲ್ಲೇನೋ ಚೆನ್ನಾಗಿದೆ ಶಶಿ ನೋಡಿ ಒಪ್ಪಲಿ ಆ ಮೇಲೆ ಮಾತಾಡೋಣಂತೆ. ಆ ಹುಡುಗ ರಿಜಲ್ಟ್ ನೋಡಿಕೊಂಡು ಒರೋಕೆ ಹೋಗಿದಾನೆ ವಾಪಸಾಗಿ ಕೆಲಸಕ್ಕೆ ಸೇರಿದಮೇಲೆ ಮದುವೆಯಾಗೋಣಾಂತ ಅವನ ಅಭಿಪ್ರಾಯ

**ಈಶ್ವರಯ್ಯ** —ಆ ಮಾತನ್ನು ಹಿಂದೇ ತೀರ್ಮಾನ ಮಾಡಿದ್ದೇವೆ ಎಂ. ಎ. ಪಾಸಾದಮೇಲೆ ಮದುವೆಯಾಗುತೀನೀಂತ ಒಪ್ಪಿದಾನೆ

**ಭಾಗಮ್ಮ** —ಆಗಲೇಳೀಂದರೆ ಇವತ್ತು ನಾಳೆ ಕಳೀಲಿ

**ವಿಷಕಂಠಯ್ಯ** ·—ಅಲ್ಲಾ ಭಾಗಮ್ಮನೋರೆ ಇವತ್ತು ಮದುವೆ ವಿಚಾರಪ್ರಸ್ತಾಪ ಮಾಡಿದಾಕ್ಷಣ ಮದುವೇ ಇವತ್ತೇ ನಡೆದುಹೋಯಿತೇ ನೋಡಿ. ಇವತ್ತು ನಾನು ತುಂಕೂರಿಗೆ ಹೋಗುತೀನಿ. ಹೋಗಬೇಕು. 'ಶಶಿ' ರಿಜಲ್ಟ್ ನೋಡಿಕೊಂಡು ಈವತ್ತೆ ಬರುತೀನೀಂತ ಅವರಿಗೆ ಮಾತು ಕೊಟ್ಟಿದೀನಿ. ಅವರು ದೊಡ್ಡಮನುಷ್ಯರು ಮಾತಿನ ಮೇಲೆ ಗಮನವಿರೋರು

**ಭಾಗಮ್ಮ** .—ಅಲ್ಲಾ ವಿಷಕಂಠಯ್ಯನೋರೆ ಹುಡುಗನಿಗೆ ಒಂದು ವಿಚಾರವೂ ಗೊತ್ತಿಲ್ಲ. ಹುಡುಗಿ ಹೆಸರು ಕುಲ ಗೋತ್ರ ಕೂಡ ಅವನಿಗೆ

ತಿಳೀದು ಅದರ ಮುಖಾನಂತೂ ಕಾಣೇಕಾಣ. ಅಂಥಾದ್ದರಲ್ಲಿ ಇದೇನು ತರಾತುರಿ ?

**ವಿಷಕಂಠಯ್ಯ :—** ಅಲ್ಲಮ್ಮ, ಹುಡುಗರಿಗೆ ಈ ದೊಡ್ಡ ವಿಚಾರ ವೆಲ್ಲಾ ಹೇಗೆ ತಿಳಿದೀತು. ಅವರ ಭವಿಷ್ಯಕ್ಕೆ ಸರಿಯಾದ ಏರ್ಪಾಟನ್ನು-ನಾವು ದೊಡ್ಡೋರೇ ಯೋಚನೆ ಮಾಡಿ ವ್ಯವಸ್ಥೆ ಮಾಡಬೇಕು. ಅವರನ್ನೆಲ್ಲಾ ಕೇಳ್ತಾ ಕೂತುಕೊಳ್ಳೋಕೆ ಆಗುತ್ತೆಯೇ ? ನನ್ನ ಮದುವೇಲಿ ನೋಡಿ ನಾನು ಹೆಣ್ಣು ನೋಡಿದ್ದೆನೇ ? ನಮ್ಮಪ್ಪ ಕತ್ತಿನಮೇಲೆ ಬಿದ್ದು ಹಸೇಮಣೇಗೆ ಎಳೆದುಕೊಂಡು ಹೋಗಿ ಕುಕ್ಕುಬಡಿದು ತಾಳಿ ಕಟ್ಟಿಸಲಿಲ್ಲವೇ? "ಹೆಣ್ಣು ಚೆನ್ನಿಲ್ಲ ನಾನೊಲ್ಲೆ'ಂ' ದದ್ದಕ್ಕೆ "ನಮಗೆ ಸೊಸೆ ಬೇಕು. ನಿನ್ನ ಸೂಳೆಗಾರಿಕೆಗೆ ಬೇಕಾದರ ಬೇರೆ ಹೆಣ್ಣು ನೋಡಿಕೊ ಆಮೇಲೆ" ಅಂತ ಗದರಿಸಿ ಬಾಯಿ ಮುಚ್ಚಿಸಿದ! ಈಗ ನಾವು ಗಂಡ ಹೆಂಡತಿ ಏನಾಗಿದೀವಿ ?

**ಭಾಗಮ್ಮ :—** ನಿಮ್ಮ ಸ್ನೇಹಿತರೇ ಹೇಳುತಿರುತಾರೆ ಕೇಳಿ

**ವಿಷಕಂಠಯ್ಯ :—** ಏನು ಈಶ್ವರಯ್ಯನೋರೇ ?

**ಈಶ್ವರಯ್ಯ :—** ಆ ಹಳೇಮಾತುಗಳನ್ನು ಬಿಡು ವಿಷಕಂಠಯ್ಯ ನೋಡು ಭಾಗ್ಯ ಈಗ ಗೋಪೀನಾಥರಾವ್ ೫ ಸಾವಿರ ರೂಪಾಯಿ ವರದಕ್ಷಿಣೆ ಕೊಟ್ಟು ಮಗಳನ್ನ ಮದುವೆ ಮಾಡಿಕೊಡುತಾನೆ ನಾನು ಇದುವರಗೂ ಶಶಿಯ ಓದಿಗಾಗಿ ಖರ್ಚುಮಾಡಿರೋ ದುಡ್ಡು ನನ್ನ ಕೈಗೆ ಹಿಂದಿರುಗಿ ಬಂದ ಹಾಗಾಗುತ್ತೆ.

**ಭಾಗಮ್ಮ :—** ಹಾಗಾದರ ನೀವು ಈ ವ್ಯಾಪಾರಕ್ಕೋಸ್ಕರ ಮಗನ್ನ ಓದಿಸಿದ ಹಾಗೆ ಕಾಣೊಲ್ಲವೇ?

**ಈಶ್ವರಯ್ಯ :—** ಏನಂದ ?

**ಭಾಗಮ್ಮ :—** ಈಗಯಾಕೀಮಾತು ಮತ್ತೆಯಾರೂ ೫ ಸಾ ವಿ ರ ರೂಪಾಯಿ ಕೊಟ್ಟು ಮಗಳನ್ನ ಮದುವೆ ಮಾಡಿಕೊಡೋರು ಸಿಕ್ಕದೇ ಹೋದರೆ ಈ ಹುಡುಗೀನೇ ಮಾಡಿಕೊಳ್ಳೋಣವಂತೆ. ನಾನು ಪೂಜೆಗೆ ಹೋಗುತ್ತೀನಿ..... ...ಎರಡು ಲೋಟ ಪಾನಕ ಮಾಡಲೆ ?

**ಈಶ್ವರಯ್ಯ :—** ನಿನ್ನ ಪಾನಕ ಯಾರಿಗೆ ಬೇಕು... ..ಅಲ್ಲಾ ನನ್ನ ವ್ಯಾಪಾರದೋನೂಂತಿಯಾ ?

**ಭಾಗಮ್ಮ :**— ಹಾಗಲ್ಲಾಂದರೆ ಶಶಿ ಓದಿಗೆ ನಾವಿಷ್ಟು ಖರ್ಚು ಮಾಡಿದೀವಿ, ಅದಕ್ಕೋಸ್ಕರ ಇಷ್ಟು ಸಾವಿರ ಕೊಡೀನ್ನೋದು ಯಾಕೆ? ಒಂದುವೇಳೆ ವರದಕ್ಷಿಣೆ ತಗೊಂಡೇತೀರಬೇಕು ಅಂತಿದ್ದರೆ ಶಶೀಗೆ ಒಪ್ಪಿಗೆ ಯಾದ ಹೆಣ್ಣಿನ ತಂದೆಯಿಂದ ಇಷ್ಟು ಸಾವಿರ ರೂಪಾಯಿ ಕೊಡಬೇಕೂಂತ ಷರತ್ತು ಮಾಡಿಕೊಂಡು ತಗೊಂಡರಾಯಿತು. ಹುಡುಗ ನಮ್ಮೋನಾಗಿರೋ ವರೆಗೂ ನಮಗೆ ವರದಕ್ಷಿಣೆ ಚಿಂತೆಯಾಕೆ? ಕೇಳಿದಷ್ಟು ಕೊಟ್ಟೇಕೊಡಬೇಕು

**ವಿಷಕಂಠಯ್ಯ :**— ಶಶಿ ಒಪ್ಪೋ ಹೆಣ್ಣಿನ ತಂದೆ ಹತ್ತಿರ ಸಾವಿರ ರೂಪಾಯೂ ಇಲ್ಲದೆ ಹೋದರೆ,.... .. ?

**ಭಾಗಮ್ಮ** — ಆ "ರೆ" ರಾಜ್ಯದ ಮಾತುಗಳು ಯಾಕೆ ಈಗ ಸುಮ್ಮ ಸುಮ್ಮನೆ ಮನಸ್ಸು ಖೈಂಯ್ಯಾಗುತ್ತೆ. ಸಂತೋಷವಾಗಿರೋಣ, ಅದರ ಕಾಲ ಬಂದಾಗ ಆ ಮಾತಾಡಿದರಾಯಿತು. ಬಂದೇ - ಪಾನಕ ತರುತೀನಿ

**ಈಶ್ವರಯ್ಯ :**— ಭಾಗ್ಯ !! ನೀನೇ ನನ್ನ ಮನಸ್ಸಿಗೆ ವಿರೋಧ ವಾಗಿರೊ ಹಾಗೆ ಕಾಣುತ್ತೆ. ಅಲ್ಲಾ, ಹುಡುಗರಿಗೆ ಅವರ ಮುಂದಿನ ಸುಖಕ್ಕೆ ಹಿರಿಯರಾದ ನಾವು ಸೇರಿ ಆಲೋಚಿಸಿ ತಿರ್ಮಾನಿಸಬೇಕೇ ಹೊರತು ವ್ಯವ ಹಾರದ ಜ್ಞಾನವೇ ಇಲ್ಲದ ಅವರಿಗೆ ಈ ವಿಚಾರವೆಲ್ಲಾ ಹೇಗೆ ತಿಳಿಯುತ್ತೆ ಅವನ ಸಲಹೆ ಕೇಳೋಕೆ?

**ವಿಷಕಂಠಯ್ಯ :**— ಹಾಗಲ್ಲ ಈಶ್ವರಯ್ಯನೋರೆ! ಭಾಗಮ್ಮನೋರು ಶಶಿ ವಿಚಾರದಲ್ಲಿ ನಾವು ಬೇರೆ - ಅವರು ಬೇರೆ, ನಮ್ಮ ಉದ್ದೇಶವೇ ಒಂದು— ಅವರ ಉದ್ದೇಶವೇ ಒಂದು ಅಂತ ತಿಳಿದುಕೊಂಡುಬಿಟ್ಟಿದಾರೆ ಅಲ್ಲವೇ ನಮ್ಮಾ?

**ಭಾಗಮ್ಮ :**— ಈಗ ಯಾಕೆ ಅದರ ಮಾತು ವಿಷಕಂಠಯ್ಯನೋರೇ? ಬಟಾಣಿಕಾಳು ಹುಳಿ, ತೆಂಗಿನಕಾಯಿ ಚಟ್ನಿ, ಹಾಗಲಕಾಯಿ ಗೊಜ್ಜು, ಹುಗ್ಗಿ ಪಾಯಸಮಾಡಿ, ಹಪ್ಪಳ ಸಂಡಿಗೆ ಕರಿದಿಟ್ಟಿದ್ದೇನೆ. ಬೇಗ ಪೂಜೆ ಮುಗಿಸಿ ಬಿಡುತೀನಿ ಅಷ್ಟು ಹೊತ್ತಿಗೆ ಶಶೀನೂ ಅವನ ಸ್ನೇಹಿತ ಅನಂತೂನೂ ಬಂದುಬಿಡುತಾರೆ. ಬಡಿಸಿಬಿಡುತೇನೆ ನೀವೂ ಸ್ವಲ್ಪ ಮಾತನಾಡುತಾ ಕೂತಿರಿ. ಬಂದೇ ಪಾನಕ ತರುತೇನೆ

(ಹೊರಡಲಿರುವಳು.)

**ಈಶ್ವರಯ್ಯ :—** ಭಾಗ್ಯ ! ನನ್ನ ಮಾತಿಗೆ ಜವಾಬೇ ಕೊಡದೆ ನಿನ್ನ ಮಾತನ್ನೇ ಆಡ್ತಾ ಇದೀಯಲ್ಲಾ. ನಾನೂ ವಿಷಕಂಠಯ್ಯ ಕೂತು ನೀನು ಕಾಯಿಚಿಟ್ನಿ ಮಾಡ್ತೀಯೋ ಇಲ್ಲವೋ, ಹಾಗಲಕಾಯಿಗೊಜ್ಜು ಮಾಡ್ತೀಯೋ ಇಲ್ವೋ, ಅಂತ ಕಾದು ಕೂತಿಲ್ಲ ಶಶಿ ಮದುವೆಗೆ ಏರ್ಪಾಟು ಮಾಡುತಾ ಇದೀವಿ ಮುಂದೆ ಅವನೂ ಅವನ ಹೆಂಡತೀನೂ ಸುಖವಾಗಿರಬೇಕಾದರೆ, ಅಗತ್ಯವಾಗಿರೋ ಹಣ, ಮನೆ, ಗದ್ದೆಗಳನ್ನು ಹ್ಯಾಗೆ ಜೋಡಿಸಿ ನಿಲ್ಲಿಸೋದು ಅಂತ ಯೋಚಿಸುತಾ ಇದೀನಿ

**ಭಾಗಮ್ಮ :—** ಹ್ಯಾಗೂ ಮನೆ ಮರ ಮಾರಿ ಓದಿಸಿದೀರಿ ಮುಂದೆ ಎಲ್ಲಾದರೂ ಕೆಲಸಕ್ಕೆ ಸೇರಿಕೊಂಡು ಅವನ ಸಂಸಾರ ಅವನು ಸುಖವಾಗಿ ನಡೆಸಿಕೊಳ್ಳುತಾನೇ

**ಈಶ್ವರಯ್ಯ :—** ಹಾಗಾದರೆ ಶಶಿ ಮದುವೆಯ ವಿಚಾರ ನಿನಗೆ ಬಿಟ್ಟು ಬಿಡಲೋ ? ಹೇಳಿಬಿಡು.

**ಭಾಗಮ್ಮ :—** ಇದೇನು ಹೀಗೆ ಮಾತನಾಡುತೀರ ? ಮನೆ ಯಜಮಾನಿಕೆ ನನ್ನ ಹೊಣೆಯೇ ಮದುವೆಯಾಗಬೇಕಾಗಿರೋ ಹುಡುಗನ್ನ ಕೇಳದೇ ನಾವು ನಾವೇನು ಮಾತಾಡಿದರೂ ಪ್ರಯೋಜನವಿಲ್ಲಾಂತ ಹೇಳಿದೆ ಅಷ್ಟೆ

**ಈಶ್ವರಯ್ಯ :—** ಕೇಳು ನನ್ನ ಕಡೇ ಮಾತು ಈ ಮನೆಗೆ ನಾನು ಯಜಮಾನ ನನ್ನ ಒಪ್ಪಿಗೆಯಂತೆ ಈ ಮನೇಲಿ ಕೆಲಸಗಳು ನಡೀಬೇಕು ಅದಕ್ಕೆ ಒಬ್ಬರನ್ನೂ ಕೇಳ್ತಾ ಕೂಡಬೇಕಾಗಿಲ್ಲ.

**ಭಾಗಮ್ಮ :—** ನಮ್ಮ ಮದುವೆಯಾದೀ ಇಪ್ಪತ್ತೈದು ವರ್ಷದಲ್ಲಿ ಒಂದು ದಿನ ಸಹಾ ನಿಮ್ಮ ಬಾಯಿಂದ ಇಂಥಾ ಮಾತು ಬಂದಿಲ್ಲ ಈ ದಿನ ಇದು ಯಾವಗಾಳಿ ಬೀಸಿದೆಯೋ ?

(ವಿಷಕಂಠಯ್ಯನ ಕಡೆ ನೋಡುವಳು)

**ವಿಷಕಂಠಯ್ಯ :—** ಈಶ್ವರಯ್ಯನೋರೆ ! ಇನ್ನು ನಾನು ಹೊರಡುತ್ತೀನೆ ನೀವು ಉಂಟು : ನಿಮ್ಮ ಹೆಂಡತಿ ಮಗ ಉಂಟು

(ಏಳುವನು)

**ಭಾಗಮ್ಮ :**— ನೀವು ಯಾಕೆ ಸಿಟ್ಟುಮಾಡಿಕೊಂಡು ಹೊರಟಿರಿ ?

**ವಿಷಕಂಠಯ್ಯ :**— ನಿಮ್ಮ ಗೃಹಕೃತ್ಯಕ್ಕೆ ನಾನೇಕೆ ಪ್ರವೇಶಿಸ ಬರುತ್ತೇನೆ

**ಈಶ್ವರಯ್ಯ :**— ತಾಳು ವಿಷಕಂಠಯ್ಯ ಇವರನ್ನೆಲ್ಲಾ ಈ ವ್ಯ ಹಾರಕ್ಕೆ ಕರೆದು ಕೇಳೋದೇ ತಪ್ಪು. ನಾನು ನೀನು ಈದಿನವೇ ತುಮಕೂ ಹೋಗಿ ಲಗ್ನಪತ್ರಿಕೆಮಾಡಿಕೊಂಡು ಬಂದು ಬಿಡೋಣ ಅದು ನಮ್ಮ ಯಾರು ತಡೀತಾರೋ ನೋಡೋಣ

**ಭಾಗಮ್ಮ :**—(ಸಿಟ್ಟಾಗಿ) ·ಮಗ ಸೊಸೆ ಸುಖವಾಗಿರಲೀಂತ ಕೂ ಪ್ಲಾನ್ ಹಾಕ್ತಾ ಇದೀರಲ್ಲವೇ ಈಗ ವಂಶಕ್ಕೊಬ್ಬಮಗ ಆ ಮಗ ಮಂಗಳಕರವಾಗಿ ಲಗ್ನಮಾಡೋಕೆ .. ಬೇರೇಹೆಣ್ಣು ಯಾವುದೂ ಇಲ್ಲ ಇಲ್ಲ ಅಲ್ಲವೇ ? ಹೊರಗೆ ಯಾರಾದರೂ ನಿಮ್ಮ ವಿಚಾರ ಕೇಳಿದರೆ ಏನೆಂತಾ ಅಲ್ಲಾ....ಇದಕ್ಕೆ ನಿಮ್ಮ ಮನಸ್ಸು ಹ್ಯಾಗಾದರೂ ಒಪ್ಪಿದೆಯೋ ಆ ಉರಿಯ ಸೂರ್ಯನಾರಾಯಣನಿಗೇ ಗೊತ್ತು

[ವಿಷಕಂಠಯ್ಯನೂ, ಈಶ್ವರಯ್ಯನೂ ಒಬ್ಬರ ಮುಖವನ್ನೊಬ್ಬರು ನೋಡುವರು.

**ಭಾಗಮ್ಮ :**— ಯಾಕೇ ! ಯಾಕೆ ನನ್ನಮಾತು ಖೈಂಯಾಯಿತೇ

**ವಿಷಕಂಠಯ್ಯ :**— ಯಾಕಮ್ಮ ! ಅಂಥಾದ್ದೇನು? ಸೊಗಸಾ ಸಂಬಂಧ. ದಿವ್ಯವಾದ ಹುಡುಗಿ

**ಭಾಗಮ್ಮ :**—ಸಾಕುಮಾಡಿ ನಿಮ್ಮ ಮಂತ್ರಾಲೋಚನೇನ ನಿಮ ಒಬ್ಬನೇ ಮಗನಿದ್ದು ಅವನಿಗಿಂಥಾ ಹೆಳವಿ ಹುಡಿಗೀನ ತಂದುಕಟ್ಟೋ ಪ್ರಯ ಮಾಡಿದ್ದರೆ ಆಗ ನಿಮಗೆ ನನ್ನ ಸಂಕಟ ಗೊತ್ತಾಗುತ್ತಿತ್ತು ಕಂಡೋ ಯಾರು ಗಂಡಸರ ಮಮತೇನ ಮಗನ ಮೇಲಿಂದ ಹಣದಮೇಲಕ್ಕೆ ಜಾ ಬಿಡುತ್ತಿತ್ತೋ ಏನೋ

( ಕಂಬನಿದುಂಬುವಳು. )

**ವಿಷಕಂಠಯ್ಯ :**— ಹೆಳವೀಂತ ಯಾರಮ್ಮ ಹೇಳಿದೋರು ?

**ಭಾಗಮ್ಮ :**— ಹುಡಿಗೀನ ಎತ್ತಿಸಾಕಿದೋರು.

**ವಿಷಕಂಠಯ್ಯ :**— ಓಹೋ ! ಗೋಪಿನಾಥರಾಯರ ಮನೇಲಿ ಹಿಂ ನಿಂದ ಕೆಲಸಕ್ಕಿದ್ದ ನಾಗಮ್ಮನಿರಬೇಕು ಅಲ್ವಮ್ಮಾ ಹುಡಿಗೀಗೆ ಒಂ

ಕಾಲು ಸ್ವಲ್ಪಸಣ್ಣ. ಮೂಳೆ ಬೆಳೆದಿಲ್ಲ. ಅಷ್ಟೇ ಅದಕ್ಕೆ ಅವರು ಬೇರೆ ಬೇರೆ ಔಷಧೀನ ಮಾಡ್ತಾ ಇದ್ದಾರೆ ಮಲೆಯಾಳದಿಂದ ವೈದ್ಯನ್ನ ಕರೆಸಿ ಮನೇಲೇ ಇಟ್ಟುಕೊಂಡಿದ್ದಾರೆ. ಅಲ್ಲದೇ ಹುಡುಗಿ ಜಾತಕದಲ್ಲಿ 'ಲಗ್ನವಾದ ಹೊರತು ಕಾಲು ಬಾರದೂ'ಂತ ಇದೆಯಂತೆ ಕಂಡಿರಾ!

**ಭಾಗವ್ವ:**— ಆ ಮನೇಗೆ ಅಳಿಯನಾಗೋ ಬಲೀಗೆ ಇನ್ನು ಯಾವುದೂ ಪಶು ಸಿಗಲಿಲ್ಲವೇ? ನಮ್ಮ ಕರಳನ್ನೇ ಜುಗುಟಬೇಕೇ?

**ಈಶ್ವರಯ್ಯ:**— ಭಾಗ್ಯಾ! ಬಾಯಿ ಮುಚ್ಚು!

**ಭಾಗವ್ವ**— ಅಯ್ಯೋ ನಿಮ್ಮ ಬುದ್ಧಿಯೂ ಹೀಗಾಗಿರೋದು ನಮ್ಮ ದುರಾದೃಷ್ಟ ಆ ಹೆಳವೀನ ತಂದು ಮುತ್ತಿನಮಣಿ ಅಂಥ ಹುಡುಗನಿಗೆ ಗಂಟು ಹಾಕಿ ದುಡ್ಡು ತಗೊಂಡು, ಅವನ ಬಾಳನ್ನ ನೀವೇ ಮುರಿಯೋದಕ್ಕೆ ಕಂಕಣ ಕಟ್ಟಿಕೊಂಡು ನಿಂತರೆ ಇನ್ನು ನಮ್ಮ ಉದ್ಧಾರ ಹೇಗೆ?

**ಈಶ್ವರಯ್ಯ:**— ವಿಷಕಂಠಯ್ಯ! ಏಳು! ಪೇಟೆಯ ಕಡೆಗೆ ಹೋಗಿ ಬರೋಣ. ಈ ಅವಿವೇಕಿಗಳ ಮಾತು ಕೇಳ್ತಾ ಇವರ ಕಣ್ಣೀರಿಗೆ ಅಂಜಿ ಕೊಂಡು ಕೂತರೆ ಕೆಲಸವಾದಹಾಗೆಯೇ

(ಎದ್ದು ಹೊರಡಲನುವಾಗುವನು)

**ವಿಷಕಂಠಯ್ಯ:**— ನೀವು ನಮ್ಮನ್ನ ಶತೃಗಳೂಂತ ತಿಳಿದಿದೀರಾ ಹಾಗಲ್ಲ ನಾವು ಶಶಿ ಭವಿಷ್ಯಕ್ಕೋಸ್ಕರವೇ ಚಿಂತೆಮಾಡುತಿರೋದು ನೀವೂ ಸಮಾಧಾನವಾಗಿ ಯೋಚಿಸಿನೋಡಿ............

(ಹೊರಡುವನು.)

**ಭಾಗವ್ವ:**— ಇವತ್ತು ಯಾರಮುಖನೋಡಿ ಎದ್ದೆನೋ ಕಾಣೆ. ಕನಸಿನಲ್ಲೂ ಕಾಣದ ಕಾರ್ಪಣ್ಯ ಕಾಲುಹಾಕಿಕೊಂಡಿತಲ್ಲಾ; ಗುರುವೇ! ಇನ್ನು ಗತಿಯೇನು?

(ಕಣ್ಣೊರಸಿಕೊಂಡು ಒಳಕ್ಕೆ ಹೋಗುವಳು.)

---

## ಅಂಕ ೧ - ಪ್ರವೇಶ ೨

[ರಸ್ತೆಯ ಪಕ್ಕದ ಬೂಲ್‌ವಾ. ಇಪ್ಪತ್ತು ನಾಲ್ಕು ವರ್ಷದ ಸುಂದರ ಯುವಕ ಶಶಿಯು ತಾನು ಬರೆದಿರುವ ಕಾಗದ ಒಂದನ್ನು ಓದಿ ತಿದ್ದುತ್ತಾ ಆಗಾಗ ಯಾರನ್ನೊ ನಿರೀಕ್ಷಿಸುತ್ತಿರುವಂತೆ ಉತ್ಕಂಠಿತನಾಗಿ ನೋಡುತ್ತಿರುವನು. ಬೆಳಗ್ಗೆ ಹತ್ತುವರೆ ಘಂಟೆ ಸಮಯ.]

**ಶಶಿ** —'ನನ್ನಸುಮಾ! ನಾನು ನಿನಗಾಗಿ ಪ್ರತ್ಯೇಕ ಪತ್ರವನ್ನು ಬರಯುತ್ತಿರುವುದು ಇದೇ ಮೊದಲಾದರೂ ಪರೋಕ್ಷವಾಗಿ ನಿನ್ನ ಯೋಗ ಕ್ಷೇಮಕ್ಕೆ ವಾರಕ್ಕೊಂದು ಪತ್ರವಂತೆ ತಪ್ಪದೆ ಬರೆಯುತ್ತಿದ್ದನೆಂಬುದು ನಿಮ್ಮ ತಾಯಿಯಿಂದ ನಿನಗೆ ತಿಳಿದೇ ಇರಬೇಕು ಈ ದಿನ ನಮ್ಮ ರಿಜಲ್ಟ್ ಬಂತು ನಾನು ದೇವರದಯೆಯಿಂದ ಎಂ ಎ ಪರೀಕ್ಷೆಯಲ್ಲಿ ಮೊದಲನೇ ತರಗತಿಯಲ್ಲಿ ಉತ್ತೀರ್ಣನಾಗಿರುವೆನಲ್ಲದೆ ಮೂರನೆಯ ರ್‍ಯಾಂಕ್ ಸಹ ಬಂದಿದೆ ಅಲ್ಲದೆ ಇಂಗ್ಲೀಷ್‌ನಲ್ಲಿ ಚಿನ್ನದ ಪದಕವೂ ಸಹ ದೊರೆತಿದೆ ಇಷ್ಟೆಲ್ಲಾ ದೇವರದಯ ಮತ್ತು ನಿಮ್ಮ ತಾಯಿಯ, ನನ್ನ ತಂದೆ ತಾಯಿಗಳ ಆಶೀರ್ವಾದ ಬಲಿಯಿಂದ, ಅಲ್ಲದೇ ವಿಶೇಷವಾಗಿ ಹೋದವರುಷ ಕ್ರಿಸ್‌ಮಿಸ್ ರಜಕ್ಕೆ ನಾವು ನಿಮ್ಮ ಮನೆಗೆ ಬಂದಿದ್ದಾಗ, ಮನೆಯಬಾಗಿಲುವಾಡಕ್ಕೆ ಬಡಿದು ಊದಿದ್ದ ನನ್ನ ನೆತ್ತಿಗೆ ಹಚ್ಚಲು ತಂದು ಕೊಟ್ಟಿದ್ದ ನಿಮ್ಮ ಮನೆ ದೇವತೆ ಬನಶಂಕರಿಯ ಕುಂಕುಮ ಪ್ರಸಾದದ ಫಲ ಅಂತೂ ನನಗೆ ಪ್ಯಾಸಾಯಿತು ನಿಮ್ಮ ಅಣ್ಣ-ನನ್ನ ಸ್ನೇಹಿತ-ಅನಂತುವಿಗೂ ಬಿ ಎ ಪ್ಯಾಸಾಗಿದೆ ನಾವಿಬ್ಬರೂ ಇನ್ನೊಂದು ವಾರದೊಳಗೆ ನಿಮ್ಮೂರಿಗೆ ಬರುತ್ತೇವೆ ಮಿಕ್ಕ ವಿಚಾರವನ್ನೆಲ್ಲಾ ಅನಂತು ಬರೆಯುತ್ತಾನೆ ಇನ್ನೂ ಬಾಕಿ ಇದ್ದರೆ ನಾವು ಅಲ್ಲಿಗೆ ಬಂದಾಗ ನಿಮ್ಮ ತಾಯಿಯವರೇ ನಿನಗೆ ತಿಳಿಯ ಹೇಳುತ್ತಾರೆ. ನೀನು ಆದಿನ ಮಾಡಿ ಕೊಟ್ಟಿದ್ದ ಗುಳಪಾವಟಿ ರುಚಿ ಇನ್ನೂ ಬಾಯಲ್ಲಿ ನೀರೂರಿಸುತ್ತಾ ಇದೆ ಚೆನ್ನಾಗಿ ಗುಳುಪಾವಟಿ ಮಾಡುವುದನ್ನ ಕಲಿ. ನನಗೆ ಅದು ಬಹಳ ಪ್ರಿಯ ಮುಂದೆ ನಿತ್ಯವೂ ಅದನ್ನೇ ಮಾಡ ಬೇಕಾದೀತು

[ಇತ್ತಲಿಂದ ಇಪ್ಪತ್ತೈದು ವರ್ಷದ, ಕಷ್ಟದಿಂದ ಕುಂದಿದ ದೇಹದ, ಬಾಡಿದ ಮುಖದ ಅನಂತನು, ಕೈಲಿ ಒಂದು ಕಾಗದವನ್ನು ಹಿಡಿದು ಸರಸರನೆ ಬರುತ್ತಿರುವನು.]

**ಶಶಿ**.—(ಕೈಲಿದ್ದ ಪತ್ರವನ್ನು ಮಡಿಸಿ ಜೋಬಲ್ಲಿಟ್ಟು) ಅನಂತೂ' ಕಾಗದ ಬಂದಿದೆಯೇ!

**ಅನಂತೂ**:—ಹೌದು ಬಂದಿದೆ

**ಶಶಿ**·—ಯಾರುಯಾರಿಗೆ?

**ಅನಂತು**:—ಯಾರುಯಾರಿಗೇಂದರೆ, ಈ ಕವರಿನಲ್ಲಿರೋ ಮೂರು ಕಾಗದಗಳೂ ನನಗೇನೇ ಸುಮಾ, ನಮ್ಮ ತಾಯಿ, ಮತ್ತೆ ಶಾನುಭೋಗ ಸುಬ್ಬಣ್ಣೋರು ಬರೆದಿರೋದು ಮೊದಲನೇ ಕಾಗದದ ತುಂಬಾ ನಿನ್ನ ವಿಚಾರವೇ ತುಂಬಿದೆ ಎರಡನೇದರಲ್ಲಿ ನಿನ್ನ ವಿಚಾರವೇ ಹೆಚ್ಚು, ನನ್ನ ವಿಚಾರವೂ ಇದೆ. ಮೂರನೆಯದರಲ್ಲಿ ಪೂರ್ತಿ ನನ್ನ ವಿಚಾರವೇ.

**ಶಶಿ**:—ಆ ಮೊದಲನೇ ಕಾಗದ ತಾ ನೋಡೋಣ

**ಅನಂತು**.—ಮೂರು ಕಾಗದಗಳನ್ನೂ ನಾನೇ ಓದಿಬಿಡುತ್ತೇನೆ ಕೇಳಿಬಿಡು.

**ಶಶಿ**.—ಓದು ಹಾಗಾದರ

**ಅನಂತು** —(ಒಂದು ಪತ್ರವನ್ನು ತೆಗೆದುಕೊಂಡು ಓದುವನು) ತೀರ್ಥರೂಪು ಅಣ್ಣನವರ ಚರಣ ಸನ್ನಿಧಾನಗಳಲ್ಲಿ – ಬಾಲಕಿ ಸುಮಾ ಮಾಡುವ ಸಾಷ್ಟಾಂಗ ನಮಸ್ಕಾರಗಳು ಹದಿನೈದು ದಿವಸಗಳಿಂದಲೂ ನಿಮ್ಮ ಕಾಗದವನ್ನು ಎದುರುನೋಡುತ್ತಾ ಇದ್ದುದಾಯಿತು ನಿಮ್ಮಗಳ ಪರೀಕ್ಷೆಯ ಫಲಿತಾಂಶವು ನಿನ್ನೆಯೇ ಹೊರಬೀಳುವುದೆಂದು ಬರೆದಿದ್ದಿರಿ ಆದರೆ ಇದುವರೆಗೂ ನಿಮ್ಮಿಂದ ಅದಕ್ಕೆ ಕಾಗದ ಬರದಿರುವುದರಿಂದ ಅಮ್ಮನ ಮನಸ್ಸಿಗೆ ತುಂಬಾ ಆತಂಕವಾಗಿದೆ (ಕತ್ತೆತ್ತಿ) ಅರ್ಥವಾಯಿತೇ? ಅಮ್ಮನ ಮನಸ್ಸಿಗೇಂದರೆ. . ...ತನ್ನ ಮನಸ್ಸಿಗೇಂತ

**ಶಶಿ**.—ಪಾಪ! ನಾವಾದರೂ ರಿಜಲ್ಟ್ ಎರಡು ದಿನ ತಡವಾಗಿ ಬರುತ್ತೇಂತ ಕಾಗದ ಬರೆದುಬಿಡಬೇಕಾಗಿತ್ತು

**ಅನಂತು**·—ಅದು ಸರಿ ಈಗ ಬೇಕಾದರ ತಂತೀನೇ ಕೊಟ್ಟು ಬಿಡೋಣ.

**ಶಶಿ :**—ಹೌದು. ಮನೆಗೆ ಹೊಗ್ಹೋದಕ್ಕೆ ಮುಂಚೆ ಹೆಡ್ ಆಫೀಸಿಗೆ ಹೋಗಿ ತಂತಿಕೊಟ್ಟುಬಿಡೋಣ.

**ಅನಂತು :**— ನಾನು ತವಾಷೆಗಂದೆ ಶಶಿ ನಮ್ಮೂರಿಗೆ ಟೆಲಿಗ್ರಾಫ್, ಲೈನಿನ್ನೂ ಬಂದಿಲ್ಲ, ಇಲ್ಲಿಂದ ಬಾಣಸಂದ್ರಕ್ಕೆ ತಂತಿಕೊಡಬೇಕು. ಅಲ್ಲಿಂದ ನಮ್ಮೂರಿಗೆ ತಲುಪ್ಹೋದಕ್ಕೆ ಒಂದೂವರೆ ದಿವಸವಾಗುತ್ತೆ. ಅದಿರಲಿ. ಮುಂದೆ ಓದುತೀನಿ ಕೇಳಿಬಿಡು .. ....ನಾಲ್ಕು ದಿವಸಗಳ ಕೆಳಗೆ ನನ್ನ ಕನಸಿನಲ್ಲಿ ನಿಮ್ಮ ಸ್ನೇಹಿತರು ಸೈಕಲ್ ಮೇಲೆ ಬರುತಾ ಕೆಳಗೆ ಬಿದ್ದುಬಿಟ್ಟಂತೆ ಸ್ವಪ್ನವಾಗಿ ಆ ದಿನವೆಲ್ಲಾ ಮನಸ್ಸೇ ಮಂಕಾಗಿಬಿಟ್ಟಿತು ಅಮ್ಮನಿಗೂ ಹೇಳಬೇಕಾಯಿತು, ಅವಳು ಹುಡುಗಾಟಮಾಡಿಬಿಟ್ಟಳು ನಿಮ್ಮ ಸ್ನೇಹಿತರನ್ನ ಸೈಕಲ್ಲು ಹತ್ತ ಬೇಡೀಂತ ಹೇಳು.........ಶಶಿ ! ಹೇಗಿದೆ ಆರ್ಡರ್ !!

**ಶಶಿ :**— ನಿನಗೆ ಅವರ ಅಭಿಪ್ರಾಯ ಅರ್ಥವಾಗೊಲ್ಲ. ಓದು ಮುಂದಕ್ಕೆ

**ಅನಂತು .**—ಸರಿಯಪ್ಪ.... ...ನಿಮ್ಮ ಪರೀಕ್ಷೆಯ ರಿಜಲ್ಟ್ ವಿಚಾರ ಈ ದಿನವೇ ತಿಳಿಸಿರಿ ಅಲ್ಲದೆ ನೀವು ಬರುವಾಗ ನಿಮ್ಮ ಸ್ನೇಹಿತರನ್ನೂ ಕರೆತನ್ನಿ ಹೇಗೂ ರಜವಿದೆ. ಈಗ ಅಮ್ಮನಿಗಿಂತ ಚೆನ್ನಾಗಿ ಗುಳವಾವಟೆ ಮಾಡೋದನ್ನ ಕಲಿತಿದ್ದೀನಿ ಅಲ್ಲದೆ ಉದ್ದಿನ ಹಪ್ಪಳ, ಅರಳು ಸಂಡಿಗೆ, ಅಮಟೆಕಾಯಿ ಉಪ್ಪಿನಕಾಯಿ ಎಲ್ಲಾ ಸಿದ್ಧಮಾಡಿದೀನಿ. ಮನೇಲಿ ಎಮ್ಮೆ ಕರುಹಾಕಿ ಒಂದೊವರೆ ತಿಂಗಳಾಯಿತಾದ್ದರಿಂದ ಹಾಲು ಮೊಸರಿಗೇನು ಕೊರತೆಯಿಲ್ಲ. ಬರುವಾಗ ನಿಮ್ಮ ಸ್ನೇಹಿತರಿಗೆ ಪ್ರಿಯವಾದ ತರಕಾರಿಗಳನ್ನು ತೆಗೆದುಕೊಂಡು ಬರುವುದು. ನಿಮ್ಮ ಕಾಗದಕ್ಕಿಂತ ಮುಂಚೆ ನೀವೇ ಬನ್ನಿ ರೆಂದು ಬೇಡುತ್ತಿರುವ ನಿಮ್ಮ ತಂಗಿ - ಸುಮಾ....ಸಾಕೇ ಶಶಿ ?

**ಶಶಿ :**—ಪಾಪ !

**ಅನಂತು ·**— ಯಾರಿಗಯ್ಯಾ ಪಾಪ ?

**ಶಶಿ :**—ಅಲ್ಲಾ ! ನಿಮ್ಮ ತಾಯಿ - ನಿನ್ನ ತಂಗಿ ನೀನು ಬರಲಿಲ್ಲ ವಲ್ಲಾಂತ ಎಷ್ಟೊಂದು ಪೇಚಾಡುತಿರುತಾರೋ !

**ಅನಂತು** — ಸರಿಯೇ! ಇನ್ನು ನಮ್ಮ ತಾಯಿ ಕಾಗದ, ಸುಬ್ಬಣ್ಣೋರ ಕಾಗದ ಎರಡನ್ನೂ ಓದಿಬಿಡುತೇನೆ.

**ಶಶಿ**:—ಬೇಡ! ನಿಮ್ಮ ತಾಯಿ ಕಾಗದಮಾತ್ರ, ಅದೂ ನನಗೆ ಸಂಬಂಧಪಟ್ಟ ಪಂಕ್ತಿಗಳನ್ನ ಮಾತ್ರ ಓದಿಬಿಡು. ತಾಯಿ ಮಗನಿಗೆ ಬರೆದ ಕಾಗದ ನಾನು ಯಾಕೆ ಕೇಳಬೇಕು.

**ಅನಂತು** —ನಿಜವೇ!.......(ಮತ್ತೊಂದು ಪತ್ರವನ್ನು ತೆರೆದು) .. ನಿನ್ನ ಸ್ನೇಹಿತರನ್ನೂ ಖಂಡಿತ ಕರೆದುಕೊಂಡು ಹೊರಟು ಬಾ. ನೀನು ಎಲ್ಲದಬಾಗಿ ಸ್ಟೇಷನ್ನಿಗೆ ಬರುವಂತಿದ್ದರೆ, ಗೌಡನವರ ಮನೆಯ ಗಾಡಿಯನ್ನು ಸ್ಟೇಷನ್ನಿಗೆ ಕಳುಹಿಸುವ ಏರ್ಪಾಟು ಮಾಡುತ್ತೇನೆ ನಿನ್ನ ಸ್ನೇಹಿತರ ಮನಸ್ಸು ದೇವರ ದಯೆಯಿಂದ ಒಂದೇಸಮನಾಗಿ ಇದೆಯೆಂದು ನಂಬಿದ್ದೇನೆ ಅವರು ಹಿಂದಿನಿಂದಲೂ ಬಡವರಾದ ನಮ್ಮ ಮೇಲಿಟ್ಟಿರುವ ದಯಾ ಪ್ರೇಮಗಳು ಕುಂದದಿರಲೆಂದು ನಿತ್ಯವೂ ದೇವರಿಗೆ ದೀಪ ಹೊತ್ತಿಸುತ್ತಾ ಬೇಡುತಿದ್ದೇನೆ. ಅವರ ಮಾತಿನ ಮೇಲಿನ ಭರವಸೆಯೊಂದರಿಂದ ಈ ಕೊಂಪೇಲಿ ಘಳಿಗೆ ಎಣಿಸುತಾ ಇದೇವೆ ತಂದೆಯಿಲ್ಲದ ತಬ್ಬಲಿ ಹುಡುಗಿಗೆ ದಿಕ್ಕಾಗುವರೆಂಬ ನಂಬಿಕೆಯೊಂದೇ ನನ್ನ ಜೀವನಾಡಿಯಾಗಿದೆ ನನ್ನಲ್ಲಿ ಇದುವರೆಗೂ ಕೂಡಿಟ್ಟಿರುವ ನಾನ್ನೂರ ಅರವತ್ತು ರೂಪಾಯಿಗಳ ಜೊತೆಗೆ, ಸಿದ್ದಲಿಂಗೇಗೌಡರು ಕೊಟ್ಟಿರುವ ಇನ್ನೂರ ಐವತ್ತು ರೂಪಾಯಿಗಳನ್ನು ಸೇರಿಸಿ, ಸಾಲದುದಕ್ಕೆ ನನ್ನ ಅಸಲಿ, ಅಡ್ಡಿಕೆಗಳನ್ನು ಮಾರಿಬಂದ ಮುನ್ನೂರ ಎಂಭತ್ತು ರೂಪಾಯಿ ಒಟ್ಟು ಒಂದು ಸಾವಿರದ ತೊಂಭತ್ತು ರೂಪಾಯಿ ಗಳನ್ನು ಶಾನುಭೋಗ ಸುಬ್ಬಣ್ಣನವರ ಕೈಲಿಟ್ಟಿದ್ದೇನೆ. ಅವರು ಹೇಳಿದ ಕಡೆ ಯಥಾಶಕ್ತಿ ಲಗ್ನಮಾಡಿಕೊಡೋಣ ಬಡವರ ಮೇಲಿರುವ ಅವರ ಪ್ರೇಮ ಸ್ಥಿರವಾಗಿರಲಿ ಬಡ ಹುಡುಗಿ ಕೈ ಹಿಡಿದು ಕಾಪಾಡೋ ಭಾರ ಅವರದು .. ........

**ಶಶಿ**·—ಇದು ಯಾಕೆ ನಿಮ್ಮ ತಾಯಿ ಪ್ರತಿ ಕಾಗದದಲ್ಲೂ ಹೀಗೆ ಬರೀತಾರಲ್ಲಾ! ಕೇಳು ಅನಂತು, ನನಗೆ ಬಿ ಎ ಪ್ಯಾಸಾದ ದಿವಸದಿಂದಲೇ ನಮ್ಮ ತಂದೆ ಮದುವೆಮಾಡಿಕೋಂತ ಬಲವಂತಮಾಡುತಿದಾರೆ. ನಾನು ಈ ಎಂ.ಎ. ಪರೀಕ್ಷೆ ಆಗೋವರೆಗೂ ಮದುವೆ ವಿಚಾರ ಬೇಡಾಂತ ಹೇಳಿದ್ದೆ. ಅದೂ ಆದಹಾಗಾಯಿತು. ಇನ್ನು ಮದುವೆಗೇನೂ ಅಡ್ಡಿಯಿಲ್ಲ

**ಅನಂತು** — ಹಾಗಲ್ಲ ಶಶಿ, ನೀನು ಇಷ್ಟೊಂದು ಡಿಸ್ಟಿಂಕ್ಷನ್‌ನಿಂದ ಎಂ ಎ ಪರೀಕ್ಷೇಲಿ ಪ್ಯಾಸಾಗಿದ್ದೀಯಾ, ನಾಳೆ ಎಂ.ಸಿ ಎಸ್. ಪರೀಕ್ಷೆಗೆ ಕೂತರೂ ರ್‍ಯಾಂಕ್ ತಗೊಂಡೇ ತಗೊಳ್ಳುತೀಯಾ. ಇಂಥ ನಿನಗೆ ನಿಮ್ಮ ತಂದೆ ಎಂಥಾ ಹೆಣ್ಣನ್ನ ತರಬೇಕೂಂತಿದಾರೋ ನಿನಗೇನುಗೊತ್ತು !

**ಶಶಿ** —ಹಾಗೇನಿಲ್ಲಾ ಅನಂತೂ, ಈಗ ಮನೆಗೆ ಹೋಗುತಿದ್ದಹಾಗೆ, ನನ್ನ ರಿಜಲ್ಟ್ ಕೇಳಿ ನಮ್ಮ ತಂದೆ, "ಇನ್ನೇನಪ್ಪ ನಿನ್ನ ಮದುವೇಗೆ ಅಡ್ಡಿ ?" ಅಂತಾರೆ ನಾನು ಸುಮ್ಮನಿದ್ದರೆ "ಹೆಣ್ಣು ನೋಡೋಣವೇ ?" ಅಂತಾರೆ ಆ ವೇಳೆಗೆ ನಮ್ಮ ತಾಯಿಗೆ ಸೂಕ್ಷ್ಮ ಹೇಳುತಿದ್ದೀನಾದ್ದರಿಂದ ಅವರೇ ನಿನ್ನ ತಂಗೀ ವಿಚಾರ ಪ್ರಸ್ತಾಪ ಮಾಡೇಮಾಡುತಾರೆ ಅವರ ಮಾತಿಗೆ, ನನ್ನಿಷ್ಟಕ್ಕೆ ನಮ್ಮ ತಂದೆ ಒಲ್ಲೇಂದಾರೇ ? ಎಂದಿಗೂ ಇಲ್ಲ.

**ಅನಂತು** —ಏನೋ ? ಕಂಡೋರು ಯಾರು ? ಆದರೆ ನಮ್ಮ ತಾಯೀಗೊಂದೇ ಯೋಚನೆ

**ಶಶಿ** —ಏನದು ?

**ಅನಂತು** —ಸುಮಾ ಹಳ್ಳಿಯ ಹುಡುಗಿ, ಕಪ್ಪು, ಇಂಗ್ಲಿಷ್ ಕಲಿತೋಳಲ್ಲ, ಬಡವರ ಮಗಳು, ಆದರೆ ನೀನು ವಿದ್ಯಾವಂತ; ಲಕ್ಷಣವಂತ. ನಿಮ್ಮ ತಂದೆ ತಾಯಿ ಸಾಕಷ್ಟು ಸ್ಥಿತಿವಂತರು. ಹೀಗಿರೋವಾಗ ನಿಮ್ಮ ತಂದೆ ತಾಯಿಗಳು ಈ ಸಂಬಂಧಕ್ಕೆ ಒಪ್ಪಿಯಾರೇ - ಅನ್ನೋ ಭಯ. ಸುಮಾಗೆ ಹದಿನಾಲ್ಕು ತುಂಬಿಹೋಯಿತು. ಒಂದು ವೇಳೆ ಮದುವೆ ತಡವಾಗಿ ಅವಳು ಅವಿವಾಹಿತಳಾಗಿಯೇ ನೆರೆದುಬಿಟ್ಟರೆ ಆ ಕೊಂಪೆಯೋರು ನಮ್ಮ ತಾಯೀನೂ ಅವಳನ್ನೂ ಅಲ್ಲಿ ಬಾಳಗೊಡಿಸೋದಿಲ್ಲ.

**ಶಶಿ** —ನೀನೂ ಕೂಡಾ ನನ್ನ ಮಾತನ್ನ ನಂಬದಹಾಗೆ ಕಾಣಿಸುತ್ತಿ. ಅಲ್ಲಾ ಅನಂತೂ, ಹೇಗೂ ನಿನಗೂ ಬಿ ಎ ಪ್ಯಾಸಾಗಿ ಹೋಯಿತು ಇಲ್ಲೇ ಯಾವುದಾದರೂ ಒಂದು ಕೆಲಸಕ್ಕೆ ಸೇರಿಕೊಂಡುಬಿಟ್ಟು ನಿನ್ನ ತಾಯೀನೂ ಇಲ್ಲಿಗೇ ಕರಕೊಂಡು ಬಂದುಬಿಡು.

**ಅನಂತು** —ನೀನು ಹೇಳುವಷ್ಟು ಸುಲಭವಲ್ಲ ಶಶಿ ಹುಟ್ಟಿ ಬೆಳೆದ ಹಳ್ಳೀನ ಬಿಟ್ಟುಬರೋದು.

**ಶಶಿ** .—ನಿಮ್ಮ ತಾಯೀನ ನೀನು ಕರೆತಂದರೆ ಅವರದೇನು ಅಡ್ಡಿ ?

**ಅನಂತು** :—ಅದೆಲ್ಲಾ ಸಹಜವಾಗಿ ಆಗಬೇಕು. ಯಾವುದೋ ೧ ಕರಿಣ ಪ್ರಸಂಗದಲ್ಲಿ ಕಿತ್ತುಹಾಕಿಬಿರುವಂಥ ಸಂಬಂಧವಲ್ಲ. ಅದರಿಂದ ಮುಂದೆ ತೊಂದರೆಗಳಿವೆ.

**ಶಶಿ** .—ಸರಿ ಹೋಗಲಿ ಬಿಡು. ಸಹಜವಾದ ದಾರೀಲೇ ನಡೆಯೋಣ ಈಗ ಮುಂಚೆ ಪೋಸ್ಟ್ ಆಫೀಸಿಗೆ ಹೋಗಿ ನಂತರ ಮನೆಗೆ ಹೋಗೋಣ

**ಅನಂತು** .—ಈಗ್ಯಾಕೆ ಪೋಸ್ಟಾಫೀಸಿಗೆ ?

**ಶಶಿ** ·—ನಿಮ್ಮ ಮನೆಗೆ ಕಾಗದ ಹಾಕಿಬಿಡೋಣ

**ಅನಂತು** —ಮನೆಗೆ ಹೋಗಿ ಊಟಮಾಡಿ, ಆ ಮೇಲೆ ಬರೆದು ಹಾಕಿದರಾಯಿತು.

**ಶಶಿ** .—ನನ್ನ ಕಾಗದ ನಾನು ಬರೆದು ರೆಡಿಯಾಗಿಟ್ಟಿದೀನಿ. ಇನ್ನು ನೀನೊಂದು ಕಾಗದ ಬರೆದುಬಿಟ್ಟರೆ, ಎರಡನ್ನೂ ಪೋಸ್ಟ್ ಮಾಡಿಬಿಡೋದು.

**ಅನಂತು** ·—ಅದಕ್ಕೂ ನಾಲ್ಕೂವರೆವರೆಗೂ ಅವಕಾಶವಿದೆಯಲ್ಲ.

**ಶಶಿ** —ನಾವು ಯಾಕೆ ಕಾಯಬೇಕು ? ಕಾಗದ ಹಾಕಿಬಿಡೋಣ.

**ಅನಂತು** —ನೀನು ಈಗ ಹಾಕಿದಾಕ್ಷಣಕ್ಕೆ ಒಪ್ಪತ್ತು ಮುಂಚೆಯೇ ನಾದರೂ ಕಾಗದ ತಲುಪೀತೋ?

**ಶಶಿ** ·—ಅದೇನೋ ? ನಿಮ್ಮ ತಾಯಿ ಅವರು ಅಷ್ಟೊಂದು ಕಾತುರ ರಾಗಿರುವಾಗ ನಾವು ಕಾಯಿಸೋದು ಸರಿಯಲ್ಲ

**ಅನಂತು** —ಸರಿ ನಡೀ, ನಿನ್ನ ಮಾತು ನನಗೆ ಅರ್ಥವಾಗದೇ ಹೋದರೂ, ತಾತ್ಪರ್ಯವಾಗುತ್ತೆ ನಾನು ಹಾಗೇ ನನ್ನ ಪಾಠದ ಮನೆಗೆ ಊಟಕ್ಕೆ ಹೋಗುತೇನೆ.

**ಶಶಿ** —ನಮ್ಮ ಮನೆಗೆ ಬರೊಲ್ಲವೇ ಊಟಕ್ಕೆ ?

**ಅನಂತು** —ಇಲ್ಲಾ ಶಶಿ, ಅವನಿಗೂ ಎಫ್ ಎ. ಪಾಸಾಗಿದೆ. ಅದಕ್ಕೋಸ್ಕರ ಅವರು ಮೊನ್ನೆಯೇ ಊಟಕ್ಕೆ ಬರಹೇಳಿದ್ದರು

**ಶಶಿ** :—ಅಲ್ಲಯ್ಯಾ ! ರಿಜಲ್ಟ್ಸ ಬಂದದ್ದು ಈವತ್ತು?

**ಅನಂತು** :—ಅವರು ಮೊನ್ನೆಯೇ ತಿಳಿದುಕೊಂಡಿದ್ದರು. ಹೇಗೋ, ಏನೋ........ಆದರೆ ಶಶಿ....ಮನೇಲಿ ಚತುರೋಪಾಯಗಳನ್ನುಮಾಡಿ ನಿಮ್ಮ

ತಂದೇನ ಹೇಗಾದರೂಮಾಡಿ ಒಪ್ಪಿಸೋ ಭಾರ ನಿನ್ನದು. ಹಾಗಾದರೆ ಮಾತ್ರ ನಮ್ಮೆಲ್ಲರ ಒಂದು ವರುಷದ ಕನಸು ನನಸಾದ ಪುಣ್ಯ ನಿಂದಾಗುತ್ತೆ ನಮ್ಮ ಮನೇನ ಉದ್ಧಾರಮಾಡಿದ ಭಾಗ್ಯ ನಿಮ್ಮ ತಂದೇದಾಗುತ್ತೆ.

**ಶಶಿ**·—(ಅನಂತುವಿನ ಭುಜವನ್ನು ಚಪ್ಪರಿಸುತ್ತಾ) ಇದು ಯಾಕೆ ಅನಂತೂ ಹೊರಗಿನವನಿಗೆ ಹೇಳಿದ ಹಾಗೆ ಉಪಚಾರದ ಮಾತು ಪ್ರಾರಂಭಿಸಿದೆಯಲ್ಲಾ!

**ಅನಂತು** —ಇಲ್ಲಾ ಶಶಿ, ಹಾಗಲ್ಲ ... ...

**ಶಶಿ** — ನೀನು ನಿಶ್ಚಿಂತನಾಗಿ ನಡಿ; ಮುಂಚೆ ಪೋಸ್ಟಾಫೀಸಿಗೆ ಹೋಗೋಣ.

[ಇಬ್ಬರೂ ನಿಷ್ಕ್ರಮಿಸುವರು.]

## ಅಂಕ ೧ - ಪ್ರವೇಶ ೩

[ಈಶ್ವರಯ್ಯನ ಮನೆಯ ನಡುಮನೆ, ಭಾಗಮ್ಮನೊಬ್ಬಳೇ ಸೋಜಿನಬಳಿ ನಿಂತು ಬಿಸುಸುಯ್ಯುತ್ತಿದ್ದಾಳೆ. ಮಧ್ಯಾಹ್ನ ಹನ್ನೊಂದೂವರೆ ಘಂಟೆಯ ಸಮಯ.]

**ಭಾಗಮ್ಮ** — ಪರಮಾತ್ಮಾ! ಎಂಥ ವಿಷಗಳಿಗೇಲಿ ಇವರಿಗೆ ಆ ವಿಷಕಂಠಯ್ಯನ ಸ್ನೇಹವಾಯಿತೋ, ಬೇತಾಳ ಬೆನ್ನು ಹತ್ತಿದ ಹಾಗೆ ಇವರನ್ನ ಹಿಡಿದು ವಿಷತುಂಬಿ ತುಂಬಿ ಹಾಲಿನಂಥ ನನ್ನ ಸಂಸಾರಾನ ಬೇಯಿಸುತಾ ಇದಾನೆ ಯಾವ ಜನ್ಮದಲ್ಲಿ ಮಾಡಿದ ಕರ್ಮದ ಫಲವೋ — ಮನೇಲಿ ಆ ರಾಕ್ಷಸಿ ಹೆಂಡತಿ, ಕುರುಡು ಮಗಳ ಮಧ್ಯೆ ಸಂಕಟ ಪಡುತಾ ಇದಾನೆ. ಈ ಜನ್ಮಕ್ಕಾದರೂ ಸ್ವಲ್ಪ ಪುಣ್ಯಕಾರ್ಯಗಳನ್ನ ಮಾಡೋ ಬುದ್ಧಿ ಬರಲಿಲ್ಲವಲ್ಲಾ. ಇನ್ನು ಈ ಅರೀದ ಹುಡುಗ ಇವರೀ ಹಠಮಾರಿತನಕ್ಕೆ ಹೆದರಿ ಎಲ್ಲಿ 'ಆಗಲೀ' ಅಂದುಬಿಡುತ್ತೋ, ದೇವರೇ ಗತಿ ... .. ಹಿಂದೆ ನಾನು ಹೇಳುತಿದ್ದ ಹಾಗೆ - ಅವನು ಅನಂತು ತಂಗೀನಂತೂ ಮಾಡಿಕೊಳ್ಳೋದು ತಪ್ಪುತ್ತೆ ಮನೇಗೊಬ್ಬ ಮಗ. ಸರಿಸಮಾನವಾದ ಬೀಗರೂ, ಮರನಾಮ್ಯ ವಿರೋ ಹೆಣ್ಣೂ ಆಗದೆ ಹೇಗೆ ಮದುವೆಗೊಪ್ಪೋರು ಅಂತೂ ಈವತ್ತು ಈ ನೀಚ ಇವರ ಕೈಲಿ ಇನ್ನೇನು ನಾಟಕಕಟ್ಟಿಸಿ ಕುಣಿಸುತಾನೋ .. ... ಅನಂತೂ ತಾಯಿ ಸಂಗಡ ನಮ್ಮ ಬೀಗತನ, ಆ ಹುಡುಗೀ ಸಂಗಡ ಶಶಿ ಒಗೆತನ ಸಾಧ್ಯವಿಲ್ಲದ ಮಾತು ಇರೋ ಒಬ್ಬ ಮಗನ ಮದುವೆ ಅನುಕೂಲ ವಾಗಿಯೇ, ವಿಜೃಂಭಣೆಯಿಂದಲೇ ನಡೀಬೇಕು ನಾವು ನೋಡಿ ಸಂತೋಷ ಪಡಬೇಕು ಪ್ರಪಂಚದಲ್ಲಿ ಅವರವರ ಅಂತಸ್ಥಿಗೆ ಸರಿಸಮಾನವಾಗಿ ಬಂಧುತ್ವ ಬೆಳೆಸಬೇಕೇ ಹೊರತು 'ಹುಡುಗ ಒಳ್ಳೆಯವನು - ನನ್ನ ಸ್ನೇಹಿತಾಂತ' ಹೇಳಿ ಅವನನ್ನ ಉಪಾಯಮಾಡಿ ತನ್ನ ತಂಗೀನ ಮದುವೆಯಾಗೋ ಹಾಗೆ ಒಪ್ಪಿ ಸೋದು ಸರಿಯಲ್ಲ ಈ ಸಂಬಂಧಕ್ಕೆ ಹೇಗೂ ಅವರೊಪ್ಪೊಲ್ಲಾಂತಲೇ ನಾನು ಶಶಿ ಹೇಳಿದ್ದಕ್ಕೆಲ್ಲಾ ಪ್ರತಿಹೇಳದೆ 'ಸಮಯ ಬಂದಾಗ ಹೇಳಿದ ರಾಯಿತು - ಈಗೇಕೆ ಹುಡುಗನ ಮನಸ್ಸನ್ನ ನೋಯಿಸಬೇಕೂಂ'ತ ಸುಮ್ಮ ನಿದ್ದದ್ದಾಯಿತು ಆದರೆ ಈಗ ಈ ಹೊಸ ಪಿಡುಗು ಬಂದು ಕೂತಿದೆಯಲ್ಲ ಆ ಹುಡುಗೀಗೆ ಹುಟ್ಟಿನಾರಭ್ಯ ಕಾಲೇ ಇಲ್ಲವಂತೆ ಒಂದು ಕಾಲು ಸುಮಾ ರಾಗಿ ನಿಲ್ಲೋದಕ್ಕಾಗುತ್ತೆಯಂತೆ ಹುಡುಗಿ ಏನೋ ಚೆನ್ನಾಗಿದೆಯಂತೆ;

ಒಳ್ಳೆಯವಳಂತೆ. ಬೇಕಾದ್ದಾಗಿರಲಿ, ಚಿನ್ನದಂಥ ಹುಡುಗನಿಗೆ, ಹೆಳವಿ ಹೆಂಡತೀನ ತರೋದೇ - ಹಾಳು ದುಡ್ಡಿಗೋಸ್ಕರ. ಒಂದು ಸಮಯ ಅವರಿಗೆ ಆ ದುಡ್ಡು ತಗೊಂಡೇ ತಗೋಬೇಕೂಂತಿದ್ದರೆ ಅಷ್ಟೇ ದುಡ್ಡು ಕೊಡೋ, ಲಕ್ಷಣವಾದ ಬೇರೆ ಹೆಣ್ಣಿನ ತಂದೆ ಸಿಗೊಲ್ಲವೇ! ನಾಲ್ಕು ತಿಂಗಳು ಕಾದರೂ ಚಿಂತೆಯಿಲ್ಲ,....ಅವರಾದರೂ ಈ ಸಂಬಂಧಕ್ಕೆ ಹೇಗೆ ಒಪ್ಪಿದ್ದಾರೂ? ಅವರಿಗೆ ಮಗನ ಮೇಲಿನ ಪ್ರೇಮವಿಲ್ಲವೇ ? .. ...ಏನೋ ! ಇಂಥ ಪಿತೂರಿಗಾರನ ಮನೆ ಹಾಳು ಸಂಚು ಹೇಗೆ ಹೇಗಿದೆಯೋ !

[ಹೊರಗಡೆಯಿಂದ "ಅಮ್ಮಾ" ಎಂಬ ಶಶಿಯ ಧ್ವನಿ.]

**ಭಾಗಮ್ಮ** —( ಮೇಲೆದ್ದು ) ಬರೀ ಬಾಗಲು ಮಗೂ ಅಗುಳಿ ಹಾಕಿಲ್ಲ ನೀನು ಬರುತಾ ಅಗುಳಿ ಹಾಕೊಂಡು ಬಾಪ್ಪಾ

[ಆನಂದದಿಂದ ಕೂಡಿದ ಶಶಿಯು ಧಾವಿಸಿ ಬಂದು ತಾಯಿಯ ಪಾದಗಳಿಗೆ ನಮಸ್ಕರಿಸುವನು.]

**ಭಾಗಮ್ಮ** —(ಮಗನನ್ನಪ್ಪಿ) ಹೇಳು ಮಗೂ ! ಅಂತೂ ನಾನು ಹೇಳಿದ ಹಾಗೆ ಫಸ್ಟ್‌ಕ್ಲಾಸ್‌ನಲ್ಲಿ ಪಾಸಾಗಿದೆ ತಾನೇ ?

**ಶಶಿ** — ನಿನಗೆ ಹೇಗೆ ಗೊತ್ತಮ್ಮಾ ?

**ಭಾಗಮ್ಮ** — ನೀನು ಸ್ನೇಹಿತರ ಜೊತೇಲಿ ಅಲ್ಲ ಇಲ್ಲೀ ಹೋಗಿಬಿಟ್ಟು ಬರುತೀಯಾಂತ, ಪಕ್ಕದ ಮನೆ ಗೋಪೀಗೆ ಬಾಡಿಗೆ ಬೈಸಿಕಲ್‌ಗೆ ದುಡ್ಡು ಕೊಟ್ಟುಕಳುಹಿಸಿ ಎಂಟೂವರೆ ಘಂಟೆಗೇನೇ ಸಮಾಚಾರ ತಿಳಿಕೊಂಡುಬಿಟ್ಟೆ

**ಶಶಿ** — ನಿನ್ನಾಶೀರ್ವಾದದಿಂದ ಫಸ್ಟ್ ಕ್ಲಾಸ್ ನಲ್ಲೂ ಮೂರನೇ ರ್‍ಯಾಂಕ್ ಬಂದಿದೆ ಇಂಗ್ಲೀಷ್‌ನಲ್ಲಿ ಚಿನ್ನದ ಮೆಡಲ್ ಕೂಡಾ ಬಂದಿದೆ

**ಭಾಗಮ್ಮ** —(ಉತ್ಸುಕತೆಯಿಂದ) ಎಲ್ಲಿ ?

**ಶಶಿ** :— ಎಲ್ಲಾ ಕಾನ್ವೊಕೇಷನಲ್ಲಿ ಕೊಡತಾರಮ್ಮ

**ಭಾಗಮ್ಮ** —ಎಲ್ಲಾ ನಿಮ್ಮಜ್ಜಿ ತಾತ ಮಾಡಿದ ಅನ್ನದಾನದ ಫಲ ಹೋಟಲು, ಹಾಸ್ಟಲ್‌ಗಳು ಬರನ್ನ ತಿಂದುಕೊಂಡು ವರ್ಷಾನುಗಟ್ಟಲೆ ಕಷ್ಟ ಪಟ್ಟಿದ್ದಕ್ಕೂ ಇವತ್ತಿಗೆ ಎಲ್ಲಾ ಸಾರ್ಥಕವಾಯಿತು ಅದು ಸರೀ ಮಗೂ, ನಿನ್ನ ಸ್ನೇಹಿತ ಅನಂತೂದೇನಾಯಿತು ? ಅಂದಹಾಗೆ ಅವನ್ನೂ ಈವತ್ತು ಊಟಕ್ಕೆ ಬರಹೇಳಬೇಕಾಗಿತ್ತು. ಶುಕ್ರವಾರ - ಜೊತೆಗೆ ತದಿಗೆ.

**ಶಶಿ.**— ಅನಂತೂಗೂ ಬಿ ಎ ಪ್ಯಾಸಾಯಿತಮ್ಮ, ಅವನ ಶಿಷ್ಯ ಒಬ್ಬ ಎಫ್ ಎ. ಪರೀಕ್ಷೆಗೆ ಕಟ್ಟಿದ್ದ; ಅವನಿಗೂ ಪ್ಯಾಸಾಯಿತಂತೆ. ಅದಕ್ಕೋಸ್ಕರ ಅವರ ಮನೇಗೆ ಊಟಕ್ಕೆ ಹೋಗಿದಾನೆ. ನಾನೇನೋ ಕರೆದೆ.

**ಭಾಗಮ್ಮ:**— ಹೋಗಲೀಬಿಡು. ಆ ಹುಡುಗಾನೂ ಪಾಪ ವಾರಾನ್ನ ಕದನ್ನಗಳನ್ನೆಲ್ಲಾ ತಿಂದುಕೊಂಡು ಕಷ್ಟಪಡುತಿತ್ತು ಸದ್ಯ ಅವನಿಗೂ ಪ್ಯಾಸಾಯಿತಲ್ಲಾ. ಎಲ್ಲಾದರೂ ಒಂದು ಕೆಲಸಕ್ಕೆ ಸೇರಿಕೊಂಡು ತಂಗಿನೂ ತಾಯೀನೂ ಸುಖವಾಗಿ ಸಾಕ್ಕೊಂಡು, ತಾನೂ ಒಂದು ಮದುವೆ ಮಾಡಿಕೊಂಡು, ತಂಗೀನೂ ತಮ್ಮ ಯೋಗ್ಯತೆಗೆ ತಕ್ಕಹಾಗೆ ಒಂದು ಗಂಡುನೋಡಿ ಮದುವೆಗಿದುವೆಮಾಡಿ, ಅತ್ತಲಾಗೆ ನೆಮ್ಮದಿಯಾಗಿರಬಹುದು

**ಶಶಿ**ಃ—(ಅಚ್ಚರಿಯಿಂದ) ಅಮ್ಮಾ!

**ಭಾಗಮ್ಮ:**— ಏನು ಮಗೂ

**ಶಶಿ:**— ಇದೇನಮ್ಮಾ ಅನಂತೂ ವಿಚಾರದಲ್ಲಿ ಹೊರಗಿನೋರ ಹಾಗೆ ಮಾತಾಡುತಿದ್ದೀ?

**ಭಾಗಮ್ಮ** —ನಾನೇನು ಮಾತಾಡದೆ ಮಗೂ?

**ಶಶಿ.**—ಅವನ ತಂಗಿ ಮದುವೆ ವಿಚಾರ ನಮಗೆ ಸೇರಿದ್ದಲ್ಲವೇ?

**ಭಾಗಮ್ಮ:**— ಏನೋ ನಿಮ್ಮ ಮನೆಯೋರ ಮನಸ್ಸೇ ನನಗೆ ಅರ್ಥವಾಗಿಲ್ಲ ಅವರು ಸ್ನೇಹಿತ ಸ್ನೇಹಿತಾಂತ ಆ ವಿಷಕಂಠಯ್ಯನಿಗೆ ಕಂಠಕ್ಕೆ ತಾಳಿ ಬಿಗಿದು, ಅವನ ತಾಳಕ್ಕೆ ಸರಿಯಾಗಿ ಕುಣೀತಾರೆ. ನೀನೂವೇ 'ಅನಂತೂ ಅನಂತೂ'ಂತ ಮೂರು ಹೊತ್ತು ಅವರ ಮನೆ ಕಷ್ಟಸುಖ ಕಟ್ಟಿಕೊಂಡು ಒದ್ದಾಡುತೀಯೊ. ಅಲ್ಲಾ ಮಗೂ! ಅವನ ತಂಗೀಗೆ ಅವರ ಅಂತಸ್ತು ಯೋಗ್ಯತೆಗೆ ತಕ್ಕಾದ್ದೊಂದು ಗಂಡು ನೋಡಿದರೆ, ನಾವೂ ಒಂದು ನೂರು ರೂಪಾಯಿ ಲಗ್ನಕ್ಕೆ ಕೊಟ್ಟು ಸಹಾಯಮಾಡಬಹುದು - ಅವನು ನಿನ್ನ ಸ್ನೇಹಿತನಾದ ಪುಣ್ಯಕ್ಕೆ ಅದಕ್ಕಿಂತ ಹೆಚ್ಚಾಗಿ ನಾವಿನ್ನೇನು ಮಾಡಬಹುದು?

**ಶಶಿ:**—ಇದು ಯಾಕಮ್ಮಾ! ನೀನು ಹೀಗೆ ಮಾತಾಡುತೀ! ನಾನು ಹಿಂದೇನೇ ನಿನ್ನ ಕೈಲಿ ಸೂಕ್ಷ್ಮವಾಗಿ ಹೇಳ್ತಿರಲಿಲ್ಲವೇ "ಅನಂತು ತಾಯಿ ಒಬ್ಬಂಟಿಗರು; ಆ ಮಗಳ ಮದುವೆ ಮಾಡದಿದ್ದರೆ ಅವರಿಗೆ ತುಂಬಾ

ತೊಂದರೆ ಬಡವರೂಂತ ಆ ಹುಡುಗೀಗೆ ಗಂಡು ಸಿಗೋದು ಕಷ್ಟಾಂ"ತ ಮೊದಲಿಂದ ಹೇಳ್ತಿಲ್ಲವೇನಮ್ಮಾ !

**ಭಾಗಮ್ಮ.**— ಇಲ್ಲಾಂದನೇ ಮಗೂ! ನಾವಿನ್ನೇನು ಸಹಾಯ ಮಾಡಬಹುದು ಅವರ ಸಂಸಾರಕ್ಕೆ? ಹೇಳು.

**ಶಶಿ :**— ಬೇಕಾದ ಸಹಾಯ ಮಾಡಬಹುದು.

**ಭಾಗಮ್ಮ :**— ಹ್ಯಾಗೆ ಹೇಳಪ್ಪ

**ಶಶಿ :**— ಹ್ಯಾಗೇಂತ ವಿವರಿಸಿ ಹೇಳೋದಕ್ಕಾಗುತ್ತ್ಯೇನಮ್ಮಾ, ಮನಸ್ಸೊಂದಿದ್ದರೆ ಅವರ ಸಂಸಾರಾನ ಎಲ್ಲಾ ಥರದಲ್ಲೂ ಉದ್ಧಾರ ಮಾಡಬಹುದು

**ಭಾಗಮ್ಮ :**— ನನಗೀ ಒಗಟು ಅರ್ಥವಾಗೊಲ್ಲಾವ್ಪಾ

**ಶಶಿ :**— ಅಲ್ಲಾವ್ಮಾ, ಎಂ ಎ ಪ್ಯಾಸಾಗುತ್ತಿದ್ದಹಾಗೆಯೇ ಮದುವೇ ಮಾಡಿಕೊಳ್ಳಬೇಕು ಅಂತ ಅಪ್ಪ ನನಗೆ ಆರ್ಡರ್ ಮಾಡಿಬಿಟ್ಟಿದಾರೆ ಈಗ ಅದೂ ಆದಹಾಗಾಯಿತಲ್ಲ

(ಸುಮ್ಮನಾಗುವನು.)

**ಭಾಗಮ್ಮ :**— ಬೆಳಗಿನಿಂದ ವಿಷಕಂಠಯ್ಯನೂ ಅವರೂ ಕೂತು ನಿನ್ನ ಮದುವೇ ವಿಚಾರಾನೇ ಮಾತಾಡುತಾ ಇದ್ದರು.

**ಶಶಿ:**— ವಿಷಕಂಠಯ್ಯ ಯಾಕೆ ಸೇರಿದಾರ ನನ್ನ ಮದುವೇ ವಿಚಾರಕ್ಕೆ?

**ಭಾಗಮ್ಮ :**— ಸರಿಯಾದ ಹೆಣ್ಣು ತೋರಿಸಿ ಪುಣ್ಯ ಕಟ್ಟಿಕೊಳ್ಳೋಕೆ

**ಶಶಿ :**— ಅಮ್ಮಾ!...........

(ಸುಮ್ಮನಾಗುವನು.)

**ಭಾಗಮ್ಮ :**— ಏನು ಮಗೂ ?

**ಶಶಿ .**— ನಾನು ಮದುವೆಯಾಗಲೇಬೇಕಾದರೆ........

**ಭಾಗಮ್ಮ:**— ಇದೇನು ಮಗೂ ಹೀಗೆ ಹೇಳುತೀ? ನಿಮ್ಮ ತಂದೆ ಎರಡು ವರುಷದಿಂದಲೂ ಘಳಿಗೆಗಳು ಎಣಿಸುತಾ ಇದಾರೆ ಎಂದಿಗೀ ಎಂ. ಎ. ಮುಗಿಯುತ್ತೋಂತ.

**ಶಶಿ :**— ಅಲ್ಲವ್ಮಾ; ನಾನು ಮದುವೆಯಾಗಬೇಕೂಂತಿರೋದು....

**ಭಾಗಮ್ಮ :**— ಹೇಳು ಮಗೂ. ನೀನು ಯಾವುದಾದರೂ ನಮ್ಮ ಅಂತಸ್ತಿಗೆ ಸರಿಯಾದ ಹೆಣ್ಣು ನೋಡಿದೀಯಾ?

**ಶಶಿ :**— ನೋಡಿದೀನಮ್ಮಾ

**ಭಾಗಮ್ಮ** ·— ಯಾರ ಮಗಳು ಮಗೂ?

**ಶಶಿ :**—(ಅನುಮಾನಿಸಿ)........ಅನಂತೂ ತಂಗೀ ಸುಮಾ

**ಭಾಗಮ್ಮ** —(ಆಶ್ಚರ್ಯ ತಿರಸ್ಕಾರಗಳ ಧ್ವನಿಯಲ್ಲಿ) ಸಾರ್ಥಕ ವಾಯಿತು ತುಂಬಾ ಚೆನ್ನಾಗಿದೆ ಕುಲ ವಿಚಾರಿಸಲಿಲ್ಲ ಗೋತ್ರ ಕೇಳಲಿಲ್ಲ ಜಾತಕದ ಮುಖವಿಲ್ಲ. ಸಂಬಂಧಕ್ಕೊಂದು ಸರಿಸಮಾನತೆ ಇಲ್ಲ ನೆಂಟ ಸ್ಥನಕ್ಕೆ ನೆಮ್ಮದಿಯಿಲ್ಲ. ವಿದ್ಯಾ, ರೂಪು ಮೊದಲೇ ಇಲ್ಲ. ಚೆನ್ನಾಗಿ ನೆತ್ತೀಗೆ ಒತ್ತಿದಾನೆ ಅನಂತೂ

**ಶಶಿ .**—(ಬಹು ನೊಂದು) ಅಮ್ಮಾ! ಅವನನ್ಯಾಕಂತೀಯಮ್ಮಾ ನಾನೇ ಅವರ ಸ್ಥಿತಿಗತಿಗಳನ್ನೆಲ್ಲಾ ನೋಡಿ, ಹುಡುಗೀ ರೂಪು ಗುಣಾನೆಲ್ಲಾ ಕಂಡು ಒಪ್ಪಿದೋನು ಅದಕ್ಕೆ ಆ ಅನಂತೂನ ಯಾಕಂತೀಯಮ್ಮಾ ಪಾಪ.

**ಭಾಗಮ್ಮ** —ಶಶೀ! ಹೆತ್ತೋರು ಹೊತ್ತೋರು, ಸಾಕಿದೋರು ಸಲಹಿದೋರು, ನಿನಗಿಂತ ದೊಡ್ಡೋರು ಹಿರಿಯರೂನ್ನಿಸಿಕೊಂಡ ಅಪ್ಪ ಅಮ್ಮ ಇರೋವಾಗ ನಿನಗೆ ಯಾಕಪ್ಪ, ಇಷ್ಟೊಂದು ದೊಡ್ಡ ಜವಾಬ್ದಾರಿ? ಮದುವೇಂದರೆ ಬರೀ ಗಂಡು ಹೆಣ್ಣಿನ ಕೂಡಿಕೆಯಲ್ಲ. ನೋಡಬೇಕಾದ್ದು, ಕೊಡಬೇಕಾದ್ದು, ತರಬೇಕಾದ್ದು, ಲೋಕಾನ ಮೆಚ್ಚಿಸಬೇಕಾದ್ದು, ನಾವು ನೋಡಿ ಸಂತೋಷಪಡಬೇಕಾದ್ದು, ದೂರಾಲೋಚನೆಮಾಡಿ ಮಾಡಬೇಕಾದ್ದು, ಬಹಳ ಇದೆ. ಸದ್ಯ ಅವರ ಮುಂದೆ ನೀನು ಹೀಗೆ ಹೇಳಲಿಲ್ಲವಲ್ಲಾ

**ಶಶಿ .**—(ನೊಂದು) ಅನಂತೂ ತಂಗೀ ಮದುವೆಗೆ ಅಷ್ಟು ನಿಕೃಷ್ಟ ವಾಯಿತೇನಮ್ಮಾ?

**ಭಾಗಮ್ಮ .**—ನಿಕೃಷ್ಟವಲ್ಲಾ ಮಗೂ? ವ್ಯವಹಾರದಲ್ಲಿ ಹಣ, ಕಾಸು, ಸ್ಥಿತಿ, ಅಂತಸ್ತು ಇವೆಲ್ಲಾ ತುಂಬಾ ಮುಖ್ಯ ಹಲವಾರು ವರುಷ ಗಳಿಂದ ನಿನ್ನ ಮದುವೆ ಕನಸು ಕಾಣುತಿರೋ ನಾವು ಆ ವಿಚಾರದಲ್ಲಿ ಸಾನೇ ಆಶೆಗಳಿಟ್ಟುಕೊಂಡಿದೀವಿ ನಮ್ಮ ವಂಶ, ಮನೆತನ, ಘನತೆಗೆ ತಕ್ಕ ಕಡೆ

ಹೆಣ್ಣಾಗಬೇಕು. ತಕ್ಕಷ್ಟು ವಿಜೃಂಭಣೆಯಿಂದಲೇ ಮದುವೆ ನಡೆಯಬೇಕು ನನ್ನ ಬಳಗ, ನಿಮ್ಮಪ್ಪನ ಬಳಗ ತಲೆತುಂಬ ಇದಾರಲ್ಲ, ಅವರೆಲ್ಲಾ ಗಂಡಿ ನೋರಾಗಿ ಎರಡು ದಿನ ಮುಂಚೆ ಬಂದು ಉಂಡು ಮೆರೆದು ತೃಪ್ತರಾಗಬೇಕು.

**ಶಶಿ :**— ಹಾಗಾದರೆ ಬಡಪಾಯಿ ಅನಂತೂ ತಂಗೀಗತಿಯೇನಮ್ಮಾ ?

**ಭಾಗಮ್ಮ :**—ಮಗೂ! ಪ್ರಪಂಚದಲ್ಲಿರೋ ಬಡ ಹೆಣ್ಣುಮಕ್ಕಳನೆಲ್ಲಾ ನೀನೊಬ್ಬ ಮದುವೆಯಾಗಿ ಸುಖವಾಗಿರೋಕೆ ಸಾಧ್ಯವೇ? ಅನಂತೂ ತಂಗೀಗೆ ಅವರಂತಸ್ತಿಗೆ ತಕ್ಕಂತೆ ಒಂದು ಗಂಡು ನೋಡಬೇಕು. ಮದುವೆಮಾಡಬೇಕು

**ಶಶಿ** ·—ಅಲ್ಲಮ್ಮಾ! (ಕಡು ನೊಂದು) ನಾನವರಿಗೆಲ್ಲಾ ಮಾತು ಕೊಟ್ಟುಬಿಟ್ಟಿದೀನಲ್ಲಮ್ಮಾ!

**ಭಾಗಮ್ಮ** —(ಸಿಟ್ಟು ಸಂತಾಪದಿಂದ) ಶಶೀ! ಏನು ನಾವು ನಿನ್ನ ಭಾಗಕ್ಕೆ ಇಲ್ಲವಾಗಿ . ...

**ಶಶಿ** —ಹಾಗಲ್ಲಮ್ಮಾ! ನಿನ್ನ ಸಂಗಡ ಆಗಾಗ ಅವರ ಮನೆ ವಿಚಾರ ವೆಲ್ಲಾ ಹೇಳುತಿದ್ದನಲ್ಲಮ್ಮಾ ನೀನು ಸಹ ಅವರಿಗಾಗಿ ಮರುಗುತ್ತಿರಲಿಲ್ಲವೆ

**ಭಾಗಮ್ಮ :**— ಮರುಗಿದ ಅಪರಾಧಕ್ಕೆ ಶಿಕ್ಷೆಯಾಗಿ ಅವರ ಮಗಳನ್ನು ಸೊಸೇನ ಮಾಡಿಕೊಳ್ಳೇ ಶಶಿ? ಏನನ್ಯಾಯ ಇದು? ನೀನು ತಂದೆ ತಾಯಿಗಳಿಗೆ ಮರೆಮಾಚಿ ಮಾಡಿಕೊಂಡ ತಪ್ಪಿಗೆ ನೀನೇ ಹೊಣೆ ಆದರೆ ಈಗ ನಿಮ್ಮಪ್ಪ ನೋಡಿರೋ ಹೆಣ್ಣಿಗೇನು ಹೇಳುತೀ?

**ಶಶಿ** —ಏನಮ್ಮಾ ?

**ಭಾಗಮ್ಮ :**— ಕೇಳು ಮಗೂ! ನಿಮ್ಮಪ್ಪ ನಿನ್ನ ವಿದ್ಯಾಭ್ಯಾಸಕ್ಕಾಗಿ ಇದುವರಿಗೂ ಊರಿನ ಗದ್ದೆ, ಮನೆಯೆಲ್ಲಾ ಮಾರಿ ನಾಲ್ಕು ಸಾವಿರ ರೂಪಾಯಿ ಗಿಂತ ಹೆಚ್ಚಾಗಿ ಖರ್ಚುಮಾಡಿದಾರಂತೆ

**ಶಶಿ :**—ಮಾಡಿವಾರಮ್ಮ

**ಭಾಗಮ್ಮ :**— ಈಗ ಅವರಿಗೆ ಆ ನಾಲ್ಕು ಸಾವಿರದ ಜೊತೆಗೆ ಇನ್ನು ಒಂದೆರಡುಸಾವಿರ ರೂಪಾಯಿ ಜೋಡಿಸಿ ನಗದಾಗಿ ಕೊಟ್ಟು, ಆಮೇಲೆ ನಾವು ಹೇಳುವ ಷರತ್ತುಗಳಂತೆ ಮದುವೆ ಮಾಡಿಕೊಡೋ ಬೀಗನಾಗಬೇಕಂತೆ.

**ಶಶಿ:**— ಹಾಗಾದರೆ ನನ್ನನ್ನ ಅಪ್ಪ ಇಷ್ಟುದಿನ ಸಾಕಿ ಓದಿಸಿದ್ದು ಲಾಭಕೆ ಮಾರೋದಕ್ಕೇನಮ್ಮಾ ?

**ಭಾಗಮ್ಮ :**— ಹಾಗೆಯಾಕೆ ತಿಳೀತಿ? ಆ ಹಣಾನೂ ಮುಂದೆ ನೀವು ಗಂಡ ಹೆಂಡತೀರಿಗೆ ತಾನೇ? ನಾವೇನು ನುಂಗಿ ಹಾಕುತೀವೆಯೇ ಅದನ್ನ ?

**ಶಶಿ :**—ರಾಮ ರಾಮ! ನಾನೆಂಥಾ ಅಯೋಗ್ಯನಾದೆ

**ಭಾಗಮ್ಮ :**— ಯಾಕೆ ಮಗೂ ?

**ಶಶಿ :**— ಆ ಬಡಪಾಯಿಗಳನ್ನ ವೃಥಾ ಆಶೆಯಲ್ಲಿಟ್ಟು ವಂಚಸಿದ ಪಾಪ ಬೆನ್ನುಹತ್ತ್ತೋಹಾಗೆ ಕಾಣಿಸುತ್ತ್ತಲ್ಲಾ

**ಭಾಗಮ್ಮ :**— ಅದಕ್ಕಾಗೇನು ನೋಯಬೇಕಾಗಿಲ್ಲ ಶಶಿ! ಕೈಗೆ ದುಡ್ಡು ಬಂದರೆ ಅವರಿಗೂ ಬೇಕಾದಹಾಗೆ ಸಹಾಯ ಮಾಡಬಹುದು ನೀನು ಅವರ ಬಡಸ್ಥಿತಿನೋಡಿ ಮರುಕದಿಂದ ಏನೋ ಅಂದುಕೊಂಡೆ ಚಿಂತೆಯಿಲ್ಲ ನಿನ್ನ ಹುಡುಗತನಕ್ಕೆ ತಕ್ಕಂತೆ ಯೋಚಿಸಿದೀ ಪಾಪ ಅದು ಹೋಗಲಿ .. ....

**ಶಶಿ ·**— ನೀನು ಹೇಳೋ ಅಷ್ಟೆ ಸುಲಭವೇನಮ್ಮ ಈ ಕೊಟ್ಟ ಮಾತಿಗೆ ತಪ್ಪೋದು ?

**ಭಾಗಮ್ಮ** — ನೀನು ಆ ಮಾತಾಡಿದರೆ ತಂದೆ ತಾಯಿಗಳಿಗೆ ದ್ರೋಹ ವಾಗುತ್ತೆ ಅವರ ಮರೇಲಿ ನೀನೇನೂ ಮಾಡಕೂಡದಲ್ಲವೇ? ನಿನ್ನ ಚಿಂತೇನ ಹೊಟ್ಟೇಲಿಟ್ಟುಕೊಂಡಲ್ಲವೇ ನಾನೂ ನಿಮ್ಮಪ್ಪ ದಿನರಾತ್ರಿಗಳ್ನ ಕಳೀತಿರೋದು ಹೆತ್ತು ಹೊತ್ತು ನಾಕಿ ಸಲಹಿ ಏನೋ ಆಶೆ ಇಟ್ಟುಕೊಂಡಿರೋ ನಮ್ಮ ಕಣ್ಣಿಗೆ ಮಣ್ಣೆರಚಿ, ನಮ್ಮ ಕರುಳನ ಜುಗುಟಿ, ಎರಡು ದಿನದ ಪರಿಚಯಸ್ಥ ರನ್ನ ಸಂತೋಷಪಡಿಸೋಕೆ ಹೊರಡೋದು ಸರಿಯೇ ? ಪಾಪವಲ್ಲವೇ ? ತಾಯಿ ತಂದೆಗಳಿಗೆ ಕೊಟ್ಟಿರೋ, ಕೊಡಬೇಕಾಗಿರೋ ವಾಗ್ದಾನಗಳನ್ನೆಲ್ಲಾ ಮುರಿದು ಒಲಗಿಟ್ಟರೂ ಚಿಂತೆಯಿಲ್ಲ ; ಅದೆಲ್ಲಾ ಪಾಪವಾಗೊಲ್ಲ ಅಲ್ಲವೇ? ನೀನು ವಿದ್ಯಾವಂತ, ನೀನೇ ಯೋಚನೆ ಮಾಡಿಹೇಳು

**ಶಶಿ :**—(ಪಶ್ಚಾತ್ತಾಪದಿಂದ ನೊಂದು) ಈಗ ನನ್ನ ಗತಿಯೇನಮ್ಮಾ?

**ಭಾಗಮ್ಮ :**— ಈಗ ವಿಷಕಂಠಯ್ಯ ಕರೆತಂದಿರೋ ಹೆಣ್ಣು ಎಲ್ಲಾ ವಿಚಾರದಲ್ಲೂ ಸರಿಯೇ-ಆದರೆ ಹುಡುಗೀಗೆ ಒಂದು ಕಾಲು ಹೆಳವು, ಅದಕ್ಕಾಗಿ

ಬೆಳಗಿಂದ ಅವರಿಬ್ಬರ ಸಂಗಡ ರೇಗಾಡುತಿದ್ದೆ ಸದ್ಯಕ್ಕೆ ಈ ಸಿಕ್ಕನ್ನ ಬಿಡಿಸಿಕೊಂಡರೆ ಸಾಕಾಗಿದೆ. ರಾಜನಹಾಗಿದೀಯಾ, ಎಂ ಎ ಮಾಡಿದೀಯಾ ಒಂದಲ್ಲ, ಹತ್ತಲ್ಲ, ನೂರಾರು ಹೆಣ್ಣುಗಳು ಬರುತ್ತವೆ ನಮ್ಮ ನಿರೀಕ್ಷಣೆಗೆ ನಿಲುಕಿ, ಮನಸ್ಸಿಗೆ ಮೆಚ್ಚಿಕೆಯಾಗಿರೋ ಗೌರಮ್ಮನಂಥ ಹೆಣ್ಣು ತಂದು ಮಾಡಿದರಾಯಿತು ಇವತ್ತು ಅವರ ನೆತ್ತಿಗೆ ಅವನು ಒತ್ತಿರೋ ಪಿತ್ತದಲ್ಲಿ ಯಾವ ವಿವೇಕದ ಮಾತೂ ಕಿವೀಗೆ ಕೇಳಿಸೋ ಹಾಗೇ ಇಲ್ಲ

[ಹೊರಗಡೆ "ಭಾಗ್ಯಾ" ಎಂಬ ಈಶ್ವರಯ್ಯನ ಧ್ವನಿ]

ಓಹೋ ಬಂದರೇನೋ. ಬಾಗಿಲು ತೆಗಿ ಶಶೀ

[ಭಾಗಮ್ಮನು ಒಳಕ್ಕೆ ಹೋಗುವಳು. ಶಶಿಯು ಹೋಗಿ ಬಾಗಿಲು ತೆರೆಯುತ್ತಲೇ ಈಶ್ವರಯ್ಯನೂ ವಿಷಕಂಠಯ್ಯನೂ ಪ್ರವೇಶಿಸುವರು.]

**ಈಶ್ವರಯ್ಯ** — (ಕೋಟು, ಪೇಟವನ್ನು ತೆಗೆದು ಮಗನ ಕೈಗೆ ಕೊಡುತ್ತಾ) ಏನು ಮಗೂ! ಫಸ್ಟ್‌ಕ್ಲಾಸ್ ಹೊಡೆದುಬಿಟ್ಟಿದೀಯಾ, ಅದೂ ಥರ್ಡ್‌ರ‍್ಯಾಂಕೂ, ಭೇಷ್! ಭೇಷ್! ನಾನು ಮನೆ ಮಠ ಜಮೀನು ಸಮೀನೆಲ್ಲಾ ಮಾರಿ ಹೊಟ್ಟೆ ಬಟ್ಟೆ ಕಟ್ಟಿ ಓದಿಸಿದ್ದಕ್ಕೂ ಇಂದಿಗೆ ಸಾರ್ಥಕವಾಯಿತು. .. ಬಾ ವಿಷಕಂಠಯ್ಯ ಕೂತುಕೋ

(ಶಶಿಯು ಮಂಕನಂತೆ ತೆಪ್ಪಗೆ ಕೋಟು, ರುಮಾಲನ್ನು ಗೂಟಕ್ಕೆ ನೇತುಹಾಕಿ ನಿಲ್ಲುವನು. ವಿಷಕಂಠಯ್ಯನೂ ಈಶ್ವರಯ್ಯನೂ ಸೋಫಾದ ಮೇಲೆ ಕೂಡುವರು.)

**ವಿಷಕಂಠಯ್ಯ** — ಶಶಿ ಹುಡುಗನಿಂದಲೂ ಹಾಗೇ! ಬಹಳ ಮೆಹನತ್ತೂ! ಬಹಳ ಮೆಹನತ್ತೂ! ಸಾಬರು ಹೇಳೋಲ್ಲವೇ 'ಜಿತ್ನ ಮೆಹನತ್ತು ವತ್ನ ಬರ್‌ಕತ್ತು' ಅಂತ ಅಲ್ಲದೇ ನೀವೆಷ್ಟು ಕಷ್ಟಪಟ್ಟಿರೀ ಮಗನ್ನ ಇಷ್ಟು ಮುಂದಕ್ಕೆ ತರೋದಕ್ಕೆ! ಶಶೀನು ಅದನ್ನ ತಿಳಿಕೊಂಡು ನಿಮಗೆಷ್ಟು ವಿಧೇಯನಾಗಿದಾನೆ ನಾನೂ ಎಷ್ಟೋ ವಿದ್ಯಾವಂತ ಹುಡುಗರನ್ನ ನೋಡಿದೇನೆ. ಆದರೆ ನಿಮ್ಮ ಶಶಿಹಾಗೆ ತಾಯಿ ತಂದೇ ಮಾತೂಂದರೆ ಕಣ್ಣಿಗೊತ್ತುಕೊಂಡು, ಹಾಕಿದ ಗೆರೆದಾಟದೇ, ಇಷ್ಟೊಂದು ಶ್ರೀರಾಮನಷ್ಟು ಪಿತೃಭಕ್ತಿ ಇರೋ ಹುಡುಗರನ್ನ ನಾನು ನೋಡಿಲ್ಲ ಈಶ್ವರಯ್ಯನೋರೇ ಕಲಿಯುಗದಲ್ಲಿ ಇದು ಅಪರೂಪ.

(ಶಶಿಯು ಕಡೆಗೆ ನೋಡುವನು. ಅವನು ಮಂಕಾಗಿ ನಿಂತಿರುವನು.)

**ಈಶ್ವರಯ್ಯ :—** ಬಾ ಮಗೂ ಇಲ್ಲಿ ಕೂತುಕೋ ಏನು ಯೋಚ ಮಾಡುತಿದೀ?

(ಶಶಿಯು ಬೊಂಬೆಯಂತೆ ತಂದೆ ಬಳಿ ನಿಲ್ಲುವನು.)

**ಈಶ್ವರಯ್ಯ :—** (ಜೇಬಿನಿಂದ ಫೋಟೋ ತೆಗೆದು ಎಡಗೈಲಿ ಹಿಡಿದ ಬಲಗೈಯಿಂದ ಮಗನ ಕೈಹಿಡಿದು ಪಕ್ಕದಲ್ಲಿ ಕೂರಿಸಿಕೊಳ್ಳುತ್ತಾ) ಶಶೀ ಇಲ್ಲಿ ನೋಡು!

(ಶಶಿಯು ಫೋಟೋವನ್ನು ನೋಡುವನು.)

**ಈಶ್ವರಯ್ಯ ·—** ಚೆನ್ನಾಗಿಲ್ಲವೇ ಹುಡುಗೀ?

('ಶಶಿಯು 'ಹೌದೆಂ'ದು ತಲೆ ಹಾಕುವನು.)

**ಈಶ್ವರಯ್ಯ —** (ಮಗನ ತಲೆಯನ್ನು ನೇವರಿಸುತ್ತಾ) ಶಶೀ! ಯಾ ಮಂಕಾಗಿದ್ದೀ! ಭಾಗಿ ಏನಾದರೂ ಸುಳ್ಳು ಪಳ್ಳು ನಿನ್ನ ಕಿವಿಗೂದಿದಳೇನು

**ಶಶಿ —** (ಅನ್ಯಮನಸ್ಕನಾಗಿ) ಏನಪ್ಪಾ?

**ಈಶ್ವರಯ್ಯ .—** ನೋಡು ಮಗೂ! ಈ ಹುಡುಗಿ ಹೆಸರು 'ಉಮಾ'ಂ

**ಶಶಿ .—** (ಬೆಚ್ಚಿ) ಅಪ್ಪಾ!

**ಈಶ್ವರಯ್ಯ :—** ಯಾಕು ಮಗೂ ಬೆಚ್ಚುತಿದ್ದೀ? ಸ್ವಲ್ಪ ಸ್ವ ವಿಲ್ಲವೇ?

**ಶಶಿ .—** ಏನಿಲ್ಲಪ್ಪಾ

**ಈಶ್ವರಯ್ಯ .—** ನೋಡು ಮಗೂ ಈ ಹುಡುಗಿಯು ತಂದೆ ಗೋಪಿ ನಾಥರಾವ್ ಅಂತ, ತುಂಕೂರಿನಲ್ಲಿ ನಾವುಕಾರ್ರು. ಸಹಸ್ರಾರು ರೂಪಾ ಲೇವಾದೇವಿ ಮಾಡಿಕೊಂಡಿದಾರೆ ಅವರಿಗೆ ಇವಳೊಬ್ಬಳೇ ಮಗಳು ಅವರಿಗೆ ಮಗಳೊಂದರೆ ನಮಗೆ ನಿನ್ನ ಮೇಲಿದ್ದಹಾಗೇ ಪಂಚಪ್ರಾಣ ಹುಡುಗೀಗೆ ಹದಿನೈದು ವರುಷ ತುಂಬಿ ಹದಿನಾರನೇ ವರುಷ ನಡೀತಾ ಇ ಹುಡುಗಿ ಲಕ್ಷಣವಾಗಿದೆ ನಾನು ನೋಡಿದೇನೆ. ವಿಷಕಂಠಯ್ಯನೂ ನೋ ದಾನೆ. ನಿಮ್ಮಮ್ಮನೂ ಎರಡು ಮೂರು ವರುಷದ ಹಿಂದೆ ಮೋಜಿನೀದಾ ಶಿವರಾಮಯ್ಯನೋರ ಮಗನ ಮದುವೆಗೆ ಹೋಗಿದ್ದಾಗ ನೋಡಿದ್ದಳಂ ಜಾತಕ ಕೂಡಿಬಂದಿದೆ ನಮ್ಮ ಕಂಡೀಷನ್‌ಗಳಿಗೆಲ್ಲಾ ಒಪ್ಪಿ ಅದರಂ ಮದುವೆಮಾಡಿಕೊಡುತಾರೆ. ಈ ಸಂಬಂಧ ನಮಗೆ ಎಲ್ಲಾಭಾಗದಲ್ಲೂ ಒಪ್ಪಿ

ಯಾಗಿದೆ. ನೀನೇನಾದರೂ ಹುಡುಗೀನ ನೋಬ್ಯಾ ನೋಡಬೇಕೂಂತಿದ್ದರೆ, ಸಂಜೆ ಷಟಲ್‌ನಲ್ಲಿ ಹೋಗಿಬರೋಣ. ಬೇಡಾನ್ನೋಹಾಗಿದ್ದರೆ ಹೇಗೂ ನಾಳಿದ್ದು ಲಗ್ನಪತ್ರಿಕೇಗೆ ಎಲ್ಲರೂ ಅವರ ಮನೇಗೆ ಹೋಗಬೇಕು, ಆಗ ನೋಡಬಹುದು ಏನಂತೀ?

**ಶಶಿ** :—ಯಾವುದಕ್ಕಪ್ಪಾ ?

**ಈಶ್ವರಯ್ಯ** .— ಹುಡುಗೀನ ನೋಡೋ ವಿಚಾರ

**ಶಶಿ** :—ಸರಿಯಪ್ಪ

**ಈಶ್ವರಯ್ಯ** — ಲಗ್ನಪತ್ರಿಕೇಗೆ ಹೋದಾಗ ನೋಡಿದರೆ ಸಾಕೂಂತಿಯೇನು

**ಶಶಿ** — ಸರಿಯಪ್ಪಾ

**ವಿಷಕಂಠಯ್ಯ** :—(ಆನಂದದಿಂದ) ಈಶ್ವರಯ್ಯನವರೇ! ನೀವೇ ಪುಣ್ಯವಂತರು! ಎಂಥಾ ಸುಪುತ್ರನ್ನ ಪಡೆದಿದ್ದೀರಿ. ಇಷ್ಟು ವಿದ್ಯಾ ಓದಿದ್ದರೂ ತಂದೆಯ ಮಾತಿಗೆ ಘಟ್ಟಿಯಾಗಿ ಉಸಿರುಕೂಡ ಹುಯ್ಯೋನಲ್ಲವಲ್ಲಾ !

**ಈಶ್ವರಯ್ಯ** —ಹಾಗಿಲ್ಲದಿದ್ದರೆ "ಭಾನುವಾರ ಲಗ್ನಪತ್ರಿಕೇಗೆ ಬರುತ್ತೇವೇ"ಂತ ಗೋಪೀನಾಥರಾಯರಿಗೆ ತಂತೀಕೊಡೋ ಸ್ವಾತಂತ್ರ್ಯ ತಗೊಳ್ಳುತ್ತಿದ್ದೆನೇ ನಾನೂ? ನೋಡೂ ಮಗೂ ಆದರೆ ಒಂದು ವಿಚಾರ .. ....

(ವಿಷಕಂಠಯ್ಯನ ಕಡೆಗೆ ನೋಡುವನು.)

**ವಿಷಕಂಠಯ್ಯ** — ತಿಳಿಸಿಬಿಡಿ ಅದೇನು ಅಂಥಾ ದೊಡ್ಡ ವಿಚಾರವಲ್ಲ ಅಂಥಾ ಚಂದ್ರನಲ್ಲೇ ಮಚ್ಚೆಯಿದೆ. ಅಂಥಾ ಚಂದ್ರಹಾಸನಿಗೇ ಆರು ಬೆರಳಿದ್ದವಂತೆ

**ಈಶ್ವರಯ್ಯ** :— ನಿನಗೀ ಹೆಣ್ಣು ಒಪ್ಪಿಗೆಯೋ ಮಗು ?

**ಶಶಿ** :— ಸರಿಯಪ್ಪಾ

**ಈಶ್ವರಯ್ಯ**:—ಎಲ್ಲಾದಕ್ಕೂ ನುಮ್ಮನೆ 'ಸರಿಯಪ್ಪಾ-ಸರಿಯಪ್ಪಾಂ'ತಿದಿಯಲ್ಲಾ "ನನಗೀ ಹೆಣ್ಣು ಒಪ್ಪಿಗೆಯಾಗಿದೇ"ಂತ ಬಾಯಿತುಂಬಾ ಒಂದು ಸಲ ಹೇಳಿಬಿಡು ಮಗು ನನ್ನ ಆತಂಕವೆಲ್ಲಾ ಪರಿಹಾರವಾಗುತ್ತೆ.

**ಭಾಗಮ್ಮ**:—(ಒಳಗಿನಿಂದ ಸರ್ರನೆ ಹೊರಕ್ಕೆ ಬಂದು) ಮಗೂ! ಶಶಿ! ಯೋಚನೆಮಾಡಿ ಸ್ಪಷ್ಟವಾಗಿ ಹೇಳಿಬಿಡು ಆ ಹುಡುಗೀಗೆ.... ...

**ಈಶ್ವರಯ್ಯ :**—ಎಲ್ಲಿಂದ ಬಂದೆಯೋ ಶಿವಪೂಜೇಲಿ ಕರಡೀ ಬಿಟ್ಟ ಹಾಗೆ! ಇನ್ನು ಸ್ವಲ್ಪ ಹೊತ್ತು ಒಳಗಿರಬಾರದಾಗಿತ್ತೆ!

**ಭಾಗಮ್ಮ.**—ನನ್ನ ಕರುಳು ಬೆಯ್ಯಿತ್ತಿರೋವಾಗ ನಾನು ಹೇಗೆ ಒಳಗೆ ಕೂತಿರಲೀಂದರೇ!

**ಶಶಿ :**—ಅಮ್ಮಾ!!

**ಭಾಗಮ್ಮ :**—(ಮುಂದೆ ಬಂದು ಶಶಿಯ ತಲೆಯನ್ನು ನೇವರಿಸುತ್ತಾ) ಮಗೂ! ಶಶಿ!!

**ಶಶಿ** —(ತಾಯಿಯ ಕೈ ಹಿಡಿದು) ನಾನೀಗ ಏನು ಹೇಳಬೇಕಮ್ಮಾ

**ಭಾಗಮ್ಮ** —ಈ ಸಂಬಂಧ ಬೇಡಾಂತ ಹೇಳು ಮಗೂ.

**ಈಶ್ವರಯ್ಯ .**—ಭಾಗೀೀೀ!!!

**ಶಶಿ ,**—ಯಾರಿಗೆ ಹೇಳಲಮ್ಮಾ?

**ಭಾಗಮ್ಮ ,**—ನೆರಮನೆಯೋರ ಮನೇ ಸಂತೋಷ ಹಾಳುಮಾಡೊ ಪ್ರತಿಜ್ಞೆಮಾಡಿ ಕೂತಿರೋ–ಆ ನಿಮ್ಮ ತಂದೆ ಸ್ನೇಹಿತರು–ವಿಷಕಂಠಯ್ಯ ನೋರಿಗೆ ಹೇಳಿಬಿಡು

**ಈಶ್ವರಯ್ಯ :**—(ಮೇಲೆದ್ದು ಸಿಡಿದು) ಭಾಗೀ! ಬಾಯಿ ಮುಚ್ಚು

**ವಿಷಕಂಠಯ್ಯ** —ನಾನು ಬರುತೀನಿ ಈಶ್ವರಯ್ಯನೋರೆ. ಇನ್ನು ನಾನು ನಿಮ್ಮ ಮನೆ ಗಾಳಿ ಕುಡಿದರೂ ವಿಷವಾಗುತ್ತೆ

(ಹೊರಡಲಿರುವನು.)

**ಈಶ್ವರಯ್ಯ ·**—(ವಿಷಕಂಠಯ್ಯನ ಕೈಹಿಡಿದು) ತಡೀ ವಿಷಕಂಠಯ್ಯ ಇವತ್ತೇ ತೀರ್ಮಾನವಾಗಲಿ. ಮನೇಲಿ ಇಲ್ಲ ನನ್ನ ಯಜಮಾನಿಕೇ ಇಲ್ಲ ಅವಳದು. ಶಶಿ! ಕೇಳಿಬಿಡು ಪೂರ್ತಿ

**ಭಾಗಮ್ಮ ·**—ಮಗೂ! ಈ ಮದುವೇಗೆ ಒಪ್ಪಬೇಡ ಮಗೂ!

**ಶಶಿ :**—ಇಲ್ಲಮ್ಮಾ!

**ಈಶ್ವರಯ್ಯ .**—ಮಗೂ ನಾಳಿದ್ದು ಲಗ್ನಪತ್ರಿಕೇಗೆ ಬರುತೇವೇಂತ ತಂತಿ ಕೊಟ್ಟಬಿಟ್ಟದೇನೆಲ್ಲಾ ಮಗೂ ಆ ಗೋಪೀನಾಥರಾವ್‌ಗೆ! ನನ್ನಮಾತ ಹೋಗುತ್ತಲ್ಲಪ್ಪಾ!! ಶಶಿ! ಅಪ್ಪಾ! ತಂದೇ!!

**ಶಶಿ** —ಅಪ್ಪಾ!! ಅಪ್ಪಾ!! ಏನುಮಾಡಲಪ್ಪ ?

**ಈಶ್ವರಯ್ಯ** :—ನಾನೇರ್ಪಾಟುಮಾಡಿರೋ ಈ ಮದುವೆಗೆ ನೀನು ಒಪ್ಪಿಕೊಂಡು, ನನ್ನ ಮರ್ಯಾದೆ ಕಾಪಾಡು ಮಗೂ, ಬೇಡಿಕೊಳ್ಳುತ್ತೇನೆ ಅವಳೇನೋ ನನ್ನ ಮೇಲೆ ಹರಕ್ಕೆ ನಿಂತುಬಿಟ್ಟ ಹಾಗಿದೆ

**ಭಾಗಮ್ಮ** —(ಶಶಿಯ ಬಾಯಿ ಮೇಲೆ ಕೈಯಿಟ್ಟು) ಮಗೂ! ಶಿವ! ಆ ಹುಡುಗೀ ಹುಟ್ಟುತಾನೇ ಹೆಳವಿ ಕಣಪ್ಪ ಹೆಳವಿ ಹೆಂಡತೀನ ಕಟ್ಟಿ ಕೊಂಡು ನೀನು ಬಾಳೋದು ಹ್ಯಾಗಪ್ಪಾ!! ನಾಥ್ಯವೇ ಮಗೂ!!

**ಶಶಿ** —ಅಮ್ಮಾ! ಈ ಹುಡುಗಿ ಹೆಳವೀನೇ ?

**ಭಾಗಮ್ಮ** —ಹೌದು ಮಗೂ! ದೇವರಾಣೆಗೂ ಹೌದು ಈ ಹುಡು ಗೀನ ನಿನ್ನ ಕೊರಳಿಗೆ ಕಟ್ಟೋದಕ್ಕೆ ಇವರು ಯಾಕೆ ಇಷ್ಟು ಹಟತೊಟ್ಟಿ ದಾರೋ ಆ ಪರಮಾತ್ಮನಿಗೇ ಗೊತ್ತು

**ಶಶಿ** ·—(ಎಲ್ಲೋ ನೋಡುತ್ತಾ ಇದ್ದು) ಅಮ್ಮಾ! ಹೆಳವೀ ಹುಡು ಗೀನ ಯಾರೂ ಮದುವೆ ಮಾಡಿಕೋಬಾರದು - ಮಾಡಿಕೊಳ್ಳಲ್ಲ—ಅಲ್ಲವೇ ?

**ಭಾಗಮ್ಮ** —ಯಾರು ಮಾಡಿಕೋತಾರ ಮಗು ಎಲ್ಲೂ ಹೆಣ್ಣೇ ಸಿಗದೇ ಇರೋ ಕುರುಡರೋ, ಕುಂಟರೋ ಮಾಡಿಕೋಬೇಕಷ್ಟೇ !

**ಶಶಿ** —ಅಮ್ಮಾ!!

**ಭಾಗಮ್ಮ** —ಏನು ಮಗೂ ?

**ಶಶಿ** — ನಾನು ಈ ಹುಡುಗೀನೇ ಮದುವ ಮಾಡಿಕೊಳ್ಳುತೀನಮ್ಮಾ! ಈ ಹುಡುಗೀನೇ ಮಾಡಿಕೊಳ್ಳುತೀನಿ! (ತಾಯಿಯ ಕೈ ಬಿಟ್ಟು ಒಳಕ್ಕೆ ಧಾವಿಸುತ್ತಾ) ಈ ಹುಡುಗೀನೇನೇ ಮದುವ ಮಾಡಿಕೊಳ್ಳುತೀನಿ!!

**ಭಾಗಮ್ಮ** —ಅಯ್ಯೋ! ಶಶೀ! ಏನುಮಾಡಿಬಿಟ್ಟ ಮಗೂ!! ರಾಮ ರಾಮ! ಶಶೀ! ನೀನು ಬೇಕಾದರ ಆ ಅನಂತೂ ತಂಗೀನೇ ಮಾಡಿಕೋ ಮಗೂ! ಆದರೆ ಈ ಹೆಣ್ಣು ಬೇಡ!! ನಿನ್ನ ದಮ್ಮಯ್ಯಾ!

**ಶಶಿ** —(ಒಳಗಿನಿಂದ) ನಾನು ಈ ಹೆಳವಿ ಹುಡುಗೀನೇ ಮದುವೆಯಾ ಗೋದು! ಈ ಹುಡುಗೀನೇ ಮದುವೆಯಾಗೋದು!!

**ಭಾಗಮ್ಮ** :—ಭಗವಂತಾ! ನನ್ನ ಕಿವಿಗಳನ್ನೂ ಕಿವುಡಾಗದೇ ಉಳಿ ದಿವೆಯೇ! ದೇವರೇ!! ಹುಡುಗನ ಬುದ್ಧಿಯೇ ಕೆಟ್ಟುಹೋಗುತಾ ಇದೆ.

ನಿಮಗಾದರೂ ದಯಬಾರದೇ ಅವನು ಒಂದು ವರುಷದಿಂದ ಅನಂತು ತಂಗೀನ ಮದುವೆ ಮಾಡಿಕೊಳ್ಳುತೀನೀಂತ ಅವರಿಗೆಲ್ಲಾ ಮಾತುಕೊಟ್ಟು ಬಿಟ್ಟಿದಾನಂತೆ ಹೋದ ಬೇಸಿಗೆ ರಜದಲ್ಲಿ ಅವರ ಊರಿಗೆ ಹೋಗಿದ್ದಾಗಲೇ ಹುಡುಗೀನ ನೋಡಿ ಒಪ್ಪಿ ಅವರ ತಾಯಿಗೆ ಮಾತುಕೊಟ್ಟುಬಿಟ್ಟಿದಾನಂತೆ. ಆ ಸಂಬಂಧ ಸಾಧ್ಯವಿಲ್ಲಾಂತ ಕಡ್ಡಾಯವಾಗಿ ಹೇಳಿದ್ದಕ್ಕೆ ಮಂಕು ಬಡಿದ ಹಾಗಾಗಿಬಿಟ್ಟಿದಾನೆ ಸದ್ಯ ನಿಮ್ಮ ಮದುವೆ ಉತ್ಸವ ಹಾಗಿರಲೀ' ಆ ಹುಡುಗನ ಯೋಗಕ್ಷೇಮ ನೋಡಬಾರದೇ ! ನಾನಂತೂ ನಿಮಗೆ ಶತ್ರುವಾದೆ ಆ ಹುಡುಗನೂ ಶತ್ರುವೇ !!

(ದು.ಖಿಸುವಳು.)

**ಈಶ್ವರಯ್ಯ :**—(ಹತ್ತಿರ ಬಂದು) ಭಾಗ್ಯಾ ! ನನ್ನ ಮಾತು ಪೂರ್ತಿ ಕೇಳು ನನಗೆ ನೀನೂ ಶತ್ರುವಲ್ಲ, ಅವನೂ ಶತ್ರುವಲ್ಲ ನಿಮ್ಮಿಬ್ಬರ ಸುಖಕ್ಕೋಸ್ಕರವೇ, ಮುಂದೆ ಬರೋ ನಿನ್ನ ಸೊಸೆಯ ಸುಖಕ್ಕಾಗಿಯೇ ಇಷ್ಟೊಂದು ಪಟ್ಟಾಡುತಿರೋದು (ಜೇಬಿನಿಂದ ಮತ್ತೊಂದು ಫೋಟೋವನ್ನು ತೆಗೆದು) ಇದೋ ನೋಡು—ಈ ಫೋಟೋನ ಈ ಹುಡುಗಿ ಫಾರೆಸ್ಟ್ ಆಫೀಸರ್ ನಾಗೇಂದ್ರರಾಯರ ಮಗಳು ಮೆಟ್ರಿಕ್ಯುಲೇಷನ್ ಪ್ಯಾಸಾಗಿದೆ ಸೊಗಸಾಗಿ ವೀಣೆ ಬಾರಿಸುತ್ತೆ ಹದಿನೆಂಟು ವರುಷ ಲಕ್ಷಣವಾಗಿದೆ ಈ ಹುಡುಗೀನೇ ಈ ಮನೆಗೆ ಸೊಸೆಯಾಗಿ ಬರೋಳು ಹೆಸರು "ರಮಾ" ಇವಳೇ ಈ ಮನೆಯ ಭಾಗ್ಯಲಕ್ಷ್ಮಿ

**ಭಾಗಮ್ಮ** —ಮತ್ತೀ ಹೇಳಿದ್ದು ಅವಾಂತರವಲ್ಲಾ ಏನು ?

**ಈಶ್ವರಯ್ಯ** —ಕೇಳೂ ಭಾಗ್ಯಾ ' ಗೋಪೀನಾಥರಾಯರಿಗೆ 'ಮಗಳಿಗೆ ಮದುವೇಂತ ಕೊರಳಿಗೆ ತಾಳಿ ಬಿದ್ದರಾಯಿತು - ಸಾಕು ಮನೇಲಿಟ್ಟುಕೊಂಡು ಸಾಕಿಕೊಳ್ಳುತೇನೆ ಅಳಿಯ ಬೇಕಾದರೆ ಬೇರೆ ಮದುವೆಯಾಗಲೀ - ಇದಕ್ಕೆಷ್ಟು ಸಹಸ್ರ ರೂಪಾಯಿ ಖರ್ಚಾದರೂ ಚಿಂತೆಯಿಲ್ಲಾ, ಅನ್ನೋ ಅಭಿಲಾಷ ಅಲ್ಲದೇ ಮದುವೆಯಾದ ವರುಷವೇ ಕಾಲು ಬರುತ್ತೇಂತ ಜಾತಕದಲ್ಲಿದೆಯಂತೆ ಅದಕ್ಕಾಗಿ ಮೊದಲು ಈ ಮದುವೆ ಶಾಸ್ತ್ರ ಮಾಡಿಬಿಟ್ಟು, ಒಂದು ಆರು ತಿಂಗಳು ಸುಮ್ಮನಿದ್ದು, ಆಮೇಲೆ ಅವರೊಪ್ಪಿಗೆಯಂತೆ "ರಮಾ" ಸಂಗಡ ಅದ್ದೂರಿಯಾಗಿ ಮದುವೆಮಾಡಿ, ಸೊಸೇನ ಮನೆಗೆ ಕರೆತರೋದು.

**ಭಾಗಮ್ಮ** —ರಾಮರಾಮ! ಇಂಥ ವಿಚಿತ್ರದೇರ್ಪಾಡನ್ನ ನಾನೀ ಜನ್ಮದಲ್ಲಿ ಕೇಳಿಲ್ಲ ಹೊಟ್ಟೇಲಿ ಹುಟ್ಟಿದ ಮಗನಿಗೆ ಪ್ರಾರಂಭದಲ್ಲೇ ಎರಡು ಮದುವೆಗಳೇರ್ಪಾಟೇ!! ಈ ರಾಕ್ಷಸೀ ಸಂಕಲ್ಪಕ್ಕೆ ನೀವು ಒಪ್ಪಿದೀರಾ?!

**ಈಶ್ವರಯ್ಯ :**—ಎಲ್ಲಾ ಮಗ ಸೊಸೇರ ಸುಖಕ್ಕಾಗಿ ಗೋಪೀನಾಥ ರಾವ್ ಕೊಡೋ ಐದು ಸಾವಿರದಲ್ಲಿ ನಮ್ಮ ಗದ್ದೆ, ಮನೇ ಎರಡನ್ನೂ ಬಿಡಿಸಿ ಶಶಿ ಹೆಸರಿಗೆ ಮಾಡಿಬಿಡೋದು ಮುಂದೆ ನಾಗೇಂದ್ರರಾವ್ ಕೊಡೋ ಐದು ಸಾವಿರದಲ್ಲಿ ಈ ಊರಿನಲ್ಲಿ ಒಂದು ಒಳ್ಳೇ ಮನೆ ತಗೊಂಡು ಅದನ್ನೂ ಅವನ ಹೆಸರಿಗೇ ಮಾಡಿಹಾಕೋದು ಆ ಮೇಲೆ ನಮಗೆ ಯಾವ ಯೋಚನೆ ಭಾಗ್ಯಾ!

**ಭಾಗಮ್ಮ** —(ಕಿವಿ ಮುಚ್ಚಿಕೊಂಡು) ಕೇಳಲಾರೆ ನಿಮ್ಮೀ ಧನ ದಾಹದ ಬಿಕ್ಕಳಿಕೇನ

(ಒಳಕ್ಕೆ ಹೊರಟುಹೋಗುವಳು)

**ಈಶ್ವರಯ್ಯ** —ಇವತ್ತಲ್ಲ, ನಾಳೆ ನಮ್ಮ ಬುದ್ಧಿವಂತಿಗೇ ಬೆಳಕು ನಿನ್ನ ಕಣ್ಣಿಗೆ ಕಾಣುತ್ತೆ ಎಲೆ ಹಾಕು ಊಟ ಮಾಡೋಣ ಏಳು ವಿಷಕಂಠಯ್ಯ!

**ವಿಷಕಂಠಯ್ಯ** —ಇಲ್ಲಾಂದರೇ' ನಾನು ಈ ದಿನ ಹೊರಟು ಬಿಡೋದೇ ಸರಿ ಹೊರಡುತೀನಿ

**ಈಶ್ವರಯ್ಯ :**—ಏಳಯ್ಯಾ! ಇನ್ನೇನು ಹುದುಗೊಪ್ಪಿದಾನೆ ಇವಳೂ ಅರ್ಧಾರ್ಧ ಒಪ್ಪಿದಾಳೆ

[ವಿಷಕಂಠಯ್ಯನ ಕೈಹಿಡಿದು ಒಳಕ್ಕೆ ಕರೆದುಕೊಂಡು ಹೋಗುವನು.]

# ಅಂಕ ೨ - ಪ್ರವೇಶ ೧

[ಮದುವೆಯಿಂದ ಹಿಂದಿರುಗಿ ಬಂದ ನಾಲ್ಕು ತಿಂಗಳನಂತರ ಊರಿನ ಹೆದ್ದಾರಿಯ ಪಕ್ಕದಲ್ಲಿ ಶಶಿಯೂ ಅನಂತುವೂ ನಿಂತು ಮಾತನಾಡುತ್ತಿರುವರು—ಸಂಜೆ ಆರು ಘಂಟೆಯ ಸಮಯ. ಶಶಿಯು ಪಶ್ಚಾತ್ತಾಪದಿಂದ ಕಂದಿ, ಕುಂದಿ, ನಾಚಿ ನಿಂತಿರುವನು. ಅನಂತುವು ದುಃಖದಿಂದ ಬಾಡಿಹೋಗಿರುವನು]

**ಶಶಿ** —(ವಸ್ತ್ರದಿಂದ ಮುಖವನ್ನು ಮುಚ್ಚಿಕೊಂಡು ದುಃಖದಿಂದ) ಅನಂತೂ! ನಿಮ್ಮ ತಾಯಿಯನ್ನು ನಾನೇ ಕೊಂದಂತಾಯಿತು!

**ಅನಂತು** —ಹಾಗೆ ಯಾಕಂತೀ ಶಶೀ! ಆಕೆ ನೆಲಭಾವೀಲಿ ನೀರು ಸೇದುತಾ ಕಾಲುಜಾರಿ ಬಿದ್ದರೆ ಅದಕ್ಕ ಪಾಪ! ನೀನು ಹೊಣೆಯೇ?

**ಶಶಿ** —ಇಲ್ಲಾ ಅನಂತು! ಅವರು ನಾನು ಹೊರಿಸಿದ ನಿರಾಶೆಯಿಂದ ಬೇಸತ್ತು, ದುಃಖಪರವಶರಾಗಿ, ಭವಿಷ್ಯಹೀನವಾದ ಬೇಗೆಯಿಂದ ಕಾಲು ಜಾರಿರಬೇಕು ನಾನೆಂಥಾ ಪಾಪಿಯಾದೆ! ಇತ್ತಕಡೆ ಹೆತ್ತತಾಯಿಯನ್ನ ಸಂತೋಷಪಡಿಸಲಾರದೇ ಹೋದೆ ಆಕೆ ಕೊರಗಿನಿಂದ ಮಂಕಾಗಿ ಬಿಟ್ಟಿದ್ದಾರೆ ಅತ್ತಕಡೆ ಹಾಲಿನಂಥ ನಿಮ್ಮ ಕುಟುಂಬಕ್ಕೆ ಕಾಲಿಟ್ಟು, ಇಲ್ಲದ ಆಶೆ ಹುಟ್ಟಿಸಿ, ಬೇರೇಕಡೆ ಗಂಡು ನೋಡೋದನ್ನೂ ತಪ್ಪಿಸಿ, ಹುಡುಗಿ ನೆರೆದು, ನಿಮ್ಮಮ್ಮ ಊರುಬಿಟ್ಟು ಅಣ್ಣನ ಮನೇಸೇರಿ, ಅಲ್ಲಿ ಈ ರೀತಿ ದುರ್ಮರಣಕ್ಕೆ ಗುರಿಯಾದ ಈ ದುರಂತಕ್ಕೆಲ್ಲಾ ಮೂಲಕಾರಣನಾದೆ ಇಷ್ಟೆಲ್ಲಾ ಪಾಪದ ಫಲವಾಗಿ ನನಗಿನ್ನೇನು ಕಾದಿದೆಯೋ, ಶಿವ ಶಿವಾ! ಎಷ್ಟು ಸ್ವಲ್ಪಕಾಲದಲ್ಲಿ ಜೀವನ ಪರ್ಯಂತದ ಸವಿಗನಸುಗಳೆಲ್ಲಾ ಹೇಗೆ ಬಯಲಾಗಿ ಹೋದುವು! ಅನಂತು! ಯಾವಬಾಯಿಂದ ನಾನು ನಿನ್ನ ಕಾಲಿಗೆ ಬಿದ್ದು ನನ್ನ ಅನಂತ ಅಪರಾಧಗಳಿಗೆಲ್ಲಾ ಕ್ಷಮಾಪಣೆ ಕೇಳಿಕೊಳ್ಳಲೀ!

[ದುಃಖೋತ್ಕರ್ಷದಿಂದ ಕಂಬನಿದುಂಬಿ ಗದ್ಗದಿತನಾಗಿ ಅನಂತುವಿನ ಭುಜದ ಮೇಲೆ ಮುಖವಿಟ್ಟು ದುಃಖಿಸುವನು]

**ಅನಂತು** —ಶಶೀ! ನಿನ್ನ ಅಂತಃಕರಣ ನನಗೆ ಗೊತ್ತಿಲ್ಲವೇ? ನಿನ್ನನ್ನ ಈವತ್ತು ಹೊಸದಾಗಿ ನೋಡುತಿದೇನೆಯೇ? ಶತ್ರುವಿಗೆ ಕೂಡ ಕೇಡಬಯಸಿದಿರೋ ನೀನು ಯಾವ ದುರಂತಕ್ಕೆ ಕಾರಣವಾದೀಯೋ! ನೀನು ಹಾಗೆ ಭಾವಿಸಿ ದುಃಖಿಸಬೇಡ ನನಗೇನೋ ಹಿಂದಿನಿಂದ ಈ ವಿಷಮ

ಬಾಂಧವ್ಯ ಕೂಡಲಾರದೂಂತಲೇ ಹೃದಯದೊಳಗೆ ಒಂದು ಭಯವಿತ್ತು, ಏಕೆಂದರೆ ನಿಮ್ಮ ತಂದೆಯವರು ಒಂದು ದೃಷ್ಟಿಯಿಂದ ದೊಡ್ಡಕಡೆ ಸಂಬಂಧ ಬಯಸುವರು, ನಿಮ್ಮ ತಾಯಿಯವರು ಮತ್ತೊಂದು ದೃಷ್ಟಿಯಿಂದ ಅಂತೂ ಅವರು ನಮ್ಮ ಮನೆಯ ಸಂಗಡ ಬೀಗತನ ಮಾಡೋದಕ್ಕೆ ಒಪ್ಪ ಲಾರೂಂತಲೇ ಅನ್ನಿಸಿತ್ತು. ಈ ಮಾತನ್ನು ನಮ್ಮ ತಾಯಿಯ ಸಂಗಡ ಹಲ ವಾರು ಬಾರಿ ಹೇಳುತ್ತಿದ್ದೆ, ಆದರೆ ಆಕೆ ಏನೋ ಒಂದು ಒಗೆ ಆಶೆ-ವ್ಯಾಮೋ ಹಕ್ಕೆ ಒಳಗಾಗಿ ನನ್ನ ಮಾತನ್ನ ಅರ್ಥಮಾಡಿಕೊಳ್ಳೋ ಪ್ರಯತ್ನ ಮಾಡು ತಿರಲಿಲ್ಲ

**ಶಶಿ** —ಅನಂತೂ! ನಾನಾದರೂ ಎಂಥ ಹುಚ್ಚುಗೆಲಸ ಮಾಡಿ ದೆನೋ! .. ಆ ದಿನ ನನ್ನ ಬುದ್ಧಿಯೇ ಕೆಟ್ಟುಹೋಗಿತ್ತೋ ಏನೋ! ಜನ್ಮದಲ್ಲೇ ಇಲ್ಲದ್ದು ನಮ್ಮಮ್ಮನ ಮೇಲೆ ಸಿಟ್ಟುಬಂದಿತ್ತೋ ಏನೋ! ಆಕೆ ಬೇಡ ಬೇಡಾಂತ ಕೂಗುತಿದ್ದರೂ ನಮ್ಮ ತಂದೆಯ ಮಾತಿಗೊಪ್ಪೀಬಿಟ್ಟೆ

**ಅನಂತು** —ಆಹಾ! ಎಂಥ ಕಷ್ಟದ ಪರಿಸ್ಥಿತಿ. ನಿಜವಾಗಿಯೂ ಶಶಿ! ನಾನಂಥಾ ಇಕ್ಕಳದಲ್ಲಿ ಸಿಕ್ಕಿ ಹಾಕಿಕೊಂಡಿದ್ದರೆ ಖಂಡಿತವಾಗಿಯೂ ಹುಚ್ಚನಾಗಿ ಬಿಡುತ್ತಿದ್ದೆ. ನೀನಾಗುವ ಹೊತ್ತಿಗೆ ಅಷ್ಟರಮಟ್ಟಿಗೆ ನಿಭಾಯಿ ಸಿದೆ .. .. ಶಶಿ! ನೀನು ಏನೂ ತೀದುಕೊಳ್ಳದಿರೋ ಪಕ್ಷಕ್ಕೆ ಒಂದು ಪ್ರಶ್ನೆ ಕೇಳಲೀ?

**ಶಶಿ** —ಕೇಳು ಅನಂತು! ಏನುಬೇಕಾದರೂ ಕೇಳು ಅನಂತ್! ನಿನ್ನಿಂದ ಮರೆಮಾಚಬೇಕಾದ ವಿಚಾರ ನನ್ನ ಜೀವನದಲ್ಲಿ ಯಾವುದೂ ಇಲ್ಲ, ಎಲ್ಲಾ ಒಂದು ಮುಂಗಾಣದ ಮುಗ್ಗಟ್ಟಿನ ಮೂಟೆ.

**ಅನಂತು** —ಮದುವೆಯೆಲ್ಲಾ ಸರಾಗವಾಗಿ ನಡೀತೇ?

**ಶಶಿ** —ನಮ್ಮಮ್ಮನ ಕಣ್ಣೀರು, ನಮ್ಮ ತಂದೆಯ ರೇಗಾಟ, ವಿಷಕಂಠ ಯ್ಯನ ಓಡಾಟ, ಬೀಗರ ಪೇಚಾಟಗಳ ಮಧ್ಯ ಕಳೀತು

**ಅನಂತು**:—ನಿನ್ನ ಮನಸ್ಸಿಗೆ ಅಲ್ಲಿ ಯಾವ ಕಿರುಕುಳವೂ ಆಗಲಿಲ್ಲ ತಾನೇ?

**ಶಶಿ**—ನನಗೆ ಮನಸ್ಸೆಲ್ಲಿತ್ತು ಅನಂತ್! ನಾನು ಒಬ್ಬ ಸಂಬಂಧವಿಲ್ಲದ ಪ್ರೇಕ್ಷಕನಹಾಗೆ ಕುಕ್ಕರಿಸಿದ್ದೆ,ಯಾರಾದರೂ ಏಳೂಂದರೆ ಏಳೋದು! ಬಾಂದರೆ

ಹೋಗುವುದು, ಕೂತುಕೋಂದರೆ ಕೂತುಕೊಳ್ಳೋದು, ಹೀಗೆ ಜೀವವಿಲ್ಲದ ಬೊಂಬೆಯ ಹಾಗಿದ್ದೆ

**ಅನಂತು** —ನೀನು ಹಾಗಿದ್ದದ್ದರಿಂದ ನಿಮ್ಮ ಅತ್ತೆ ಮಾವಂದಿರ, ಆ ಹುಡುಗಿಯಮನಸ್ಸಿಗೇನನ್ನಿಸಿರಬೇಕು!

**ಶಶಿ** —ನಮ್ಮ ಮನೇಲಿ ಎಲ್ಲರಿಗೂ ಒಪ್ಪಿಗೆಯಿಲ್ಲದ ಬಲವಂತದ ಮದುವೇಂತ ಅನ್ನಿಸಿರಬೇಕು

**ಅನಂತು** —ಪಾಪ! ನಿಮ್ಮ ತಂದೆಯೇ ಹಠತೊಟ್ಟಮೇಲೆ ನಿಮ್ಮ ತಾಯಾದರೂ ದುಃಖ ಪಡಬೇಕಾದ್ದಿರಲಿಲ್ಲ

**ಶಶಿ** —ನಾನು ಹ್ಯಾಗೆ ನನ್ನ ಮನಸ್ಸಿನಲ್ಲಿ ನನ್ನ ಸ್ವರ್ಣ ಭವಿಷ್ಯದ ಕನಸು ಕಾಣುತಾ ಇದ್ದೆನೋ, ನಮ್ಮ ತಾಯಿಯೂ ಹಾಗೇ ಯಾವ ಆಶಾ ತರಂಗದಲ್ಲಿ ತೇಲುತಿದ್ದರೋ! ...ಪಾಪ! ಎಲ್ಲಾ ಒಂದೇದಿನದಲ್ಲಿ ಗಾಳಿಯಾಗಿ ಹೋಯಿತು ಆಕೆಯ ದುಃಖ, ಸಂಕಟಗಳಿಗೆ ಈಗ ಪರಿಹಾರವೇ ಇಲ್ಲದಾಗಿದೆ

**ಅನಂತು** —ಆ ಹುಡುಗಿ ಮನಸ್ಸಿಗಾದರೂ ನೆಮ್ಮದಿಯಾಗಿರಬಹುದ!

**ಶಶಿ**:—ಕಾಣಲಿಲ್ಲ, 'ಒಲ್ಲದಗಂಡನಿಗೆ ಹೊರೆಯಾಗುತಿದೀನಿ, ನಮ್ಮ ತಂದೆಯ ದುಡ್ಡಿನಾಸೆಗೆ ಗಂಡಿನ ತಂದೆ ಒತ್ತಾಯದಿಂದ ತಾಳಿಕಟ್ಟಿಸುತಾ ಇದಾರೆ' ಅನ್ನೋ ಭಾವನೆಯಿಂದ ಆಗಾಗ ಹನಿಯ ಹಣೆಯ ಮೇಲೆ ಕಣ್ಣೀರಿಡುತಿತ್ತು

**ಅನಂತು** —ಅಯ್ಯೋ! ಪಾಪ! ಕೇವಲ ಒಬ್ಬರ ಹಟದಿಂದ ಎಷ್ಟು ಹೃದಯಗಳಿಗೆ ಎಷ್ಟೊಂದು ಯಾತನೆ! ಎಷ್ಟೊಂದು ಸಂಕಟ!

**ಶಶಿ**:—ಒಬ್ಬರ ಹಟದಿಂದಲ್ಲಾ ಅನಂತೂ; ಒಬ್ಬರ ಪಿತೂರಿ ಯಿಂದಾನ್ನೂ.

**ಅನಂತು** .—ಅಂದರೇ ?

**ಶಶಿ** :—ಎಲ್ಲಾ ಆ ವಿಷಕಂಠಯ್ಯನ ಪಿತೂರಿ.

**ಅನಂತು** —ಅವನಿಗೇನು ಹಠ ಇಷ್ಟೊಂದು ಅವಾಂತರ ನಡೆಸ ಬೇಕೂಂತ ?

**ಶಶಿ** —ಹಠವೇನು ಅನಂತ್! ದುಡ್ಡು, ದುಡ್ಡು. ಕೇವಲ ದುಡ್ಡಿನಾಶೆಗೆ, ಕಮೀಷನ್ ರೂಪದಲ್ಲಿ ಸಿಕ್ಕಿದ ಒಂದು ಸಾವಿರ ರೂಪಾಯಿನ ಆಶೆಗೆ.

**ಅನಂತು** —ಯಾರು ಕೊಟ್ಟೋರು ?

**ಶಶಿ**.—ಇನ್ನು ಯಾರು ? ಆ ಹುಡುಗಿಯ ತಂದೆ

**ಅನಂತು** —ಮದುವೆಯಾದಮೇಲೂ 'ಹುಡುಗಿಯ ತಂದೇ'ಂತ ಅನ್ನೋದೆ ? 'ಮಾವನವರು' ಅನ್ನಬಾರದೇ ?

**ಶಶಿ**.—(ನೊಂದು ಅನಂತುವಿನ ಕೈ ಹಿಡಿದು) ಅನಂತೂ ! ನನ್ನ ಮದುವೆಯ ವೈಭವ ಹಗಲುಗನಸಾಗಿಹೊಯಿತು. ಹೀಗಾಗುತ್ತೇಂತ ನನ್ನ ಜನ್ಮದಲ್ಲಿ ನೆನಸಿರಲಿಲ್ಲ

**ಅನಂತು** —ಇನ್ನು ನನ್ನ ವಿಚಾರ ಸ್ವಲ್ಪ ಹೇಳಿಕೊಳ್ಳಲೇ ?

**ಶಶಿ** —ನನಗೆ ಕೇಳೋದಕ್ಕೆ ತ್ರಾಣವಿದೆಯೇ ಅನಂತೂ ! (ದುಃಖದಿಂದ) ಅಯ್ಯೋ ! ನಿನ್ನ ತಂಗಿ !! ಸುಮಾ !! ಇನ್ನು ಅವಳ ಭವಿಷ್ಯವೇನು ? .. ... ಹೇಳು ಅನಂತು ! ನಾನಂತೂ ಪಾಪಿಯಾದೆ ನಿಮ್ಮನ್ನ ನಂಬಿಸಿ ವಂಚಿಸಿದೆ ಆದರೆ ನೀನಂತೂ ನನ್ನ ಮೇಲೆ ಸಿಟ್ಟಾಗಿಲ್ಲ ಆದರೆ ಸುಮಾ ! .. .. ಅಯ್ಯೋ ಪಾಪ ! ... .. ಅವಳು ಈ ಪಾಪೀನ ಎಷ್ಟು ಬೈದಳೋ ! ನನ್ನ ಹೆಸರಿನಲ್ಲಿ ಎಷ್ಟು ಕಣ್ಣೀರಿಡುತಿದಾಳೋ ! ಹೇಳು ಅನಂತ್, ಸುಮನ ವಿಚಾರ ಹೇಳು

(ದುಃಖದಿಂದ ಗದ್ಗದಿತನಾಗುವನು.)

**ಅನಂತು** —(ಶಶಿಯನ್ನ ಸಮಾಧಾನ ಪಡಿಸುತ್ತಾ) ನೀನು ದುಃಖಿಸಬೇಡ ಶಶೀ ! ಸುಮಾ ನಿನ್ನಷ್ಟು ಅಧೀರಳಾಗಿಲ್ಲ ಎಷ್ಟಾದರೂ ಅವಳು ಹಳ್ಳಿಯ ಹುಡುಗಿ ನಿನ್ನ ಬಲವಂತದ ಮದುವೆಯ ಸಮಾಚಾರ ಕೇಳಿ, ನಿನಗಾಗಿ ಮರುಗಿವಳು, ನಿನಗಾಗಿ ಕೊರಗಿದಳು ಹೆಣ್ಣು ಹೇಳಿವಿಯಲ್ಲಾ ಅನ್ನೋ ಒಂದು ವಿಚಾರಕ್ಕಾಗಿ ನೊಂದಳು ಅಷ್ಟೇ ತನಗಾಗಿ ಅಷ್ಟೇನು ವ್ಯಥೆ ಪಟ್ಟಹಾಗೆ ಕಾಣಲಿಲ್ಲ ಅದಾದ ಎರಡು ತಿಂಗಳಿಗೆ ನೆರೆದ ಶಾಸ್ತ್ರವೂ ಆಯಿತು ನಂತರ ಹದಿನೈದು ದಿವಸಗಳಲ್ಲೇ ನೆರೆ ಹೊರೆಯುವರ ಆತಂಕ ಹೆಚ್ಚಾಗಿ ನಾನು ನಮ್ಮ ತಾಯಿಯನ್ನೂ, ಸುಮನನ್ನೂ ನಮ್ಮ ಸೋದರ ಮಾವನ ಹಳ್ಳಿಗೆ ಕರೆತಂದು ಬಿಟ್ಟೆ ಮುಂದೇನು ಮಾಡುವುದೊಂತ ಮೂವರೂ ಹಗಲು ರಾತ್ರಿ ಯೋಚಿಸುತ್ತಿದ್ದೆವು ಹೇಗಾದರೂಮಾಡಿ, ಮೂರದ ಊರಿನ ಯಾವನಾದರೂ ಗಂಡನ್ನ ನೋಡಿ ಮದುವೆ ಮಾಡೋ

ಶಾಂತ ತೀರ್ಮಾನಿಸಿದೆವು—ನಾನು, ನಮ್ಮ ತಾಯಿ, ನಮ್ಮ ಮಾವ. ಆದರೆ ಸುಮಾ ನೀನು ನನಗೆ ಕೊಟ್ಟಿದ್ದ ಫೋಟೋ ಹಿಡಿದು, "ನನಗೆ ಮದುವೆ ಯಾಗಿದೆ ಇವರೇ ನನಗೆ ಗಂಡ ಅವರು ಬೇರೆ ಹೆಂಡತೀನ ಮಾಡಿ ಕೊಂಡಿರಬಹುದು ಅವಳಿಗೆ ತಾಳಿ ಕಟ್ಟಿರಬಹುದು ನನಗೆ ಕಟ್ಟದೇ ಇರಬಹುದು ಅವರು ನನ್ನ 'ಹೆಂಡತಿ' ಅಂತ ಒಪ್ಪದೇ ಹೋಗಬಹುದು ನನಗೇನೋ ಅವರೇ ಗಂಡ'' ' ಅಂತ ಒಂದೇ ಹಠದಲ್ಲಿ ಕೂತು ಬಿಟ್ಟಳು ... ..

**ಶಶಿ :**—(ದುಃಖದಿಂದ ನೊಂದು ವಸ್ತ್ರದಿಂದ ಮುಖವನ್ನು ಮುಚ್ಚಿ ಕೊಂಡು) ಅಯ್ಯೋ' ಸುಮಾ'' ನಾನೆಂಥ ಪಾಪಿಯಾದೆ, ನಾನೆಂಥ ಕಟುಕನಾದೇ'' ಒಂದು ವರುಷಕಾಲ ನಿಮ್ಮನೆಲ್ಲಾ ನಂಬಿಸಿ ಮೋಸ ಮಾಡಿದೆನೇ' .. .. (ಅನಂತುವಿನ ಕೈಹಿಡಿದು) ಅನಂತೂ' ನಾನಿನ್ನ ಬದುಕಿರಬಾರದೂ' ಬದುಕಿರಬಾರದೂ''

**ಅನಂತು** —ಶಶೀ' ನಿನಗೀಮಾತು ಕೇಳಿದರೆ ದುಃಖವಾಗು ತ್ತೆಂತಲೇ ಹೇಳಲಿಲ್ಲ ಆದರ ಹೇಳದಿದ್ದರ ವಿಧಿಯಿಲ್ಲ ಏಕೆಂದರೇ ನಾನು ಮುಂದಿನ ಸೋಮವಾರ ಈ ದೇಶಾನೇ ಬಿಟ್ಟು ಹೊರಡುತೀನೆ

**ಶಶಿ** —ಅನಂತೂ !

**ಅನಂತು** —ಹೌದು ಶಶೀ ! ಆಫ್ರಿಕಾದ ಬ್ರಿಟಿಷ್ ಸೋಮಾಲಿ ಲ್ಯಾಂಡ್‌ನಲ್ಲಿ ಒಂದು ಕೆಲಸ ಸಿಕ್ಕಿದೆ ಮಿಲಿಟರೀ ಸರ್ವೀಸ್, ಹೋದ ತಿಂಗಳೇ ಬೊಂಬಾಯಿಗೆ ಹೋಗಿ ಇಂಟರ್‌ವ್ಯೂ ಮುಗಿಸಿಕೊಂಡು ಬಂದೆ

**ಶಶಿ.**—(ಅನಂತುವನ್ನ ತಬ್ಬಿ) ನನ್ನೊಬ್ಬನನ್ನೇ ಬಿಟ್ಟು ,ಹೊ ರ ಟು ಹೋಗುತೀಯಾ ಅನಂತ್' (ದುಃಖಿಸುವನು) ನೀನೂ ಹೊರಟು ಹೋದರೆ ಆ ನಿನ್ನ ತಬ್ಬಲಿ ತಂಗಿಯ ಗತಿ ಏನೂ ಅನಂತ್ ?!

**ಅನಂತು** —ನಾನೆಷ್ಟು ದೂರದಲ್ಲಿದ್ದರೂ ನನಗಿರೋ ಒಬ್ಬ ಸ್ನೇಹಿತ ನನ್ನ ಮರಯಲಾರ ನನ್ನ ಈ ದೆಹದಲ್ಲಿರೋ ಅರ್ಧರಕ್ತ ನಿಮ್ಮ ಮನೇ ಅನ್ನದ್ದು ಶಶೀ' ನಿನ್ನ ಪ್ರೇಮ ಪ್ರಸಾದದ್ದು

**ಶಶಿ** —(ಅನಂತುವನ್ನಪ್ಪಿ) ಇಂಥಾ ಮಾತಾಡಿ ನನ್ನ ಕರುಳನ್ನ ಕೀಳ ಬ್ಯಾಡಾ ಅನಂತೂ! ನಾನು ಪಾಪಿ''

**ಅನಂತು** — ನಾನು ತಪ್ಪದೇ ನಿನಗೆ ವಾರಕ್ಕೊಂದು ಕಾಗದ ಬರೀತಿರು ತೀನೀ ನೀನು ಮಟ್ಟಿಗೆ ತಪ್ಪದೆ ಜವಾಬು ಬರೀತಿರು ಉದಾಸೀನ ಮಾಡಬೇಡ

**ಶಶಿ** ·— ನೀನೂ ಅತ್ತ ಕಡೆ ಹೊರಟು ಹೋದರೆ ಆ ಸುಮನ ಗತಿ ಯೇನೂ ಅನಂತ್ !

**ಅನಂತು** ·— ಬೊಂಬಾಯಿನ ಮಿಲಿಟರಿ ಆಫೀಸರೊಬ್ಬರ ಹೇಳಿಕೆ ಯಂತೆ ಅಲ್ಲಿಂದ ಬರುತಾ ಪೂನಾದಲ್ಲಿಳಿದು ಅಲ್ಲಿಯ ಅಬಲಾಶ್ರಮವೊಂದಕ್ಕೆ ಅಪ್ಲಿಕೇಷನ್‌ಕೊಟ್ಟು ಬಂದಿದೇನೆ ಅಲ್ಲಿ ಎರಡು ವರುಷ ಇಟ್ಟುಕೊಂಡು ಅನ್ನ ಬಟ್ಟೆ ಹಾಕಿ, ಓದುಬರಹ ಕಲಿಸಿ, ಯಾವುದಾದರೂ ಕೈಗೆಲಸ ಹೇಳಿಕೊಡು ತಾರಂತೆ ನಂತರ ಬೇಕಾದರೆ ಹೊರಗಡೆ ಎಲ್ಲಾದರೂ ಕೆಲಸಕ್ಕೆ ಸೇರ ಬಹುದು. ಇಲ್ಲದಿದ್ದರೆ ಅಲ್ಲೇ ಇದ್ದುಕೊಂಡು ಹೊಸದಾಗಿ ಬಂದೋರಿಗೆ ಪಾಠ ಹೇಳಿಕೊಂಡಿರಬಹುದು.

**ಶಶಿ** .—ಅಯ್ಯೋ ! ಸುಮಾ !! ನಾನು ! ನಿನ್ನನ್ನೀಗತಿಗೆ ತಂದೆನೇ !

(ದುಃಖಿಸುವನು)

**ಅನಂತು** :—(ಸಮಾಧಾನ ಪಡಿಸುತಾ) ನೀನು ದುಃಖಿಸಬೇಡ ಶಶೀ! ಎಲ್ಲಾ ತಕ್ಕೊ ನಿರಪರಾಧಿಯಾದ ನಿನ್ನನ್ನೇಕೆ ಕಾರಣಾಂತ ತಿಳೀತಿ. ವಿಧಿಯ ಕೈ ಗೊಂಬೆಗಳು ನಾವು.

**ಶಶಿ** :— ನನಗೊಂದೂ ತಿಳೀದು. ನಾನಂತೂ ಪಾಪಿ!! ನಾಲ್ಕಾರು ಜನದ ಕರುಳಿರಿದ ಪಾಪಿ!! ದೇವರೇ! ನಾನಿನ್ನೂ ಈ ಭೂಮಿಯಮೇಲಿರ ಬೇಕೇ ? (ರೋದಿಸುವನು )

**ಅನಂತು** :— ಶಶೀ! ಹೀಗೆ ಸಂಕಟದಲ್ಲಿ ಬೇಯೋದು ಗಂಡಸರಾದ ನಮಗೆ ಶೋಭಿಸೊಲ್ಲ ಬಂದ ಕಷ್ಟಾನ ಎದುರಿಸಬೇಕು ಧೈರ್ಯದಿಂದ. ಕುಗ್ಗಿ ಕಂಗಾಲಾಗಬಾರದು. ನಡೀ! ನಿಮ್ಮ ಮನೆಯುವರೆಗೂ ಬಂದು ನಿನ್ನನ್ನ ಬಿಟ್ಟು ಬಿಟ್ಟು, ಹಾಗೇ ನಿಮ್ಮ ತಾಯೀಗೆ ನಮಸ್ಕಾರ ಹೇಳಿ ಹೊರಡುತೇನೆ. ನಡೀ ! ನೀನು ನನಗಾಗಿ ಅಥವಾ ಸುಮನಿಗಾಗಿ ಕೊರಗಬೇಡ. ಏಕೆಂದರೆ ದೇವರ ದಯದಿಂದ ನನಗೆ ಇನ್ನೂರೈವತ್ತು ರೂಪಾಯಿ ಕೆಲಸ ಸಿಕ್ಕಿತು.

ದೂರದೇಶವಾದರೂ ಚಿಂತೆಯಿಲ್ಲ. ಸುಮಾಗೆ ಆರ್ಪ್ನೇಜ್‌ನಲ್ಲಿ ಸೀಟ್ ಸಿಕ್ಕಿತು. ತಿಂಗಳಿಗೊಂದು ಐವತ್ತು ರೂಪಾಯಿ ಅವಳಿಗೂ ಕಳಿಸುತಿರು ತೀನಿ. ಇನ್ನು ಯಾವ ಚಿಂತೆ? ನನಗಿರೋ ಒಂದೇ ಚಿಂತೆ ನಿನ್ನ ಭವಿಷ್ಯದ್ದು. ಬೆಣ್ಣೆ ಅಂಥ ನಿನ್ನ ಮನಸ್ಸಿಗೆ ಎಷ್ಟೊಂದು ಆತಂಕ ಒಟ್ಟಿಗೆ ಸುಂಟರುಗಾಳಿ ಹಾಗೆ ನುಗ್ಗಿ ಬಿಡುತು ಅನ್ನೋದು. ; ನಡೀ, ಮನಸ್ಸನ್ನ ಸಮಾಧಾನ ಮಾಡಿಕೋ.

**ಶಶಿ :**— ನಾನು ಇನ್ನು ಸುಮನ್ನ ನೋಡೋಹಾಗಿಲ್ಲವೇ ?

**ಅನಂತು.**—ಅದು ಯಾಕೆ ಹಾಗಂತೀ ?

**ಶಶಿ .**—ಯಾವ ಮುಖ ಇಟ್ಕೊಂಡು ಅವಳ ಮುಂದೆ ನಿಲ್ಲಬಲ್ಲೆ ಅನಂತ್ !

**ಅನಂತು.**— ನೀನು ಹಾಗೆ ತಿಳೀಲೇ ಬೇಡ ನಿನ್ನ ಅಸಹಾಯ ಪರಿಸ್ಥಿತಿ ಅವಳಿಗೆ ಚೆನ್ನಾಗಿ ಅರಿವಾಗಿದೆ ಆದರೆ ಅವಳು ನಿನ್ನನ್ನ ಒಂದರೆಕ್ಷಣ ಸಹಾ ಮರೀಲಾರಳು. ಅಷ್ಟೇ. ನಡೀ ! ಹೊತ್ತಾಯಿತು.

**ಶಶಿ:**— ಸುಮಾ ! ಸುಮಾ !!

(ಇಬ್ಬರು ಹೊರಡುವರು)

---

## ಅಂಕ ೨ - ಪ್ರವೇಶ ೨

[ಗೋಪಿನಾಥರಾಯನ ಮನೆಯ ಹಜಾರ. ಸುತ್ತಲೂ ಮೂರು ಸೋಫಾಗಳೂ, ಮಧ್ಯೆ ಒಂದು ದುಂಡು ಮೇಜೂ ಅದರ ಸುತ್ತಲೂ ನಾಲ್ಕು ಕುರ್ಚಿಗಳೂ ಇವೆ. ಸೋಫಾದಮೇಲೆ ನಲವತ್ತೈದು ವರುಷದ ಸಾವುಕಾರ್ ಗೋಪೀನಾಥ್ ರಾವ್ ಕುಳಿತಿದ್ದಾನೆ. ಕಿವಿಯಲ್ಲಿ ವಜ್ರದ ಕಡುಕುಗಳು, ಬಲಗೈಲಿ ಚಿನ್ನದ ಕಪ್ಪ, ಬೆರಳುಗಳಲ್ಲಿ ವಜ್ರ ಕೆಂಪಿನುಂಗುರಗಳು, ಹಣೆಯಲ್ಲಿ ತ್ರಿಪುಂಡ್ರ; ಜರತಾರಿ ಪಂಚೆಯುಟ್ಟು, ರೇಷ್ಮೆಯ ಜುಬ್ಬವನ್ನು ತೊಟ್ಟು, ಜರತಾರಿ ಶಲ್ಯವನ್ನು ಹೊದೆದು ಕುಳಿತಿದ್ದಾನೆ. ಮುಖದಲ್ಲಿ ಮೀಸೆಯಿದ್ದರೂ, ಸೌಮ್ಯ ಭಾವನೆ ಕಾಣುತ್ತಿದೆ. ಎದುರಿಗೆ ವೃದ್ಧ ಸೇವಕ 'ದಾಸ' ಕೈ ಕಟ್ಟಿನಿಂತಿದಾನೆ. ದಾಸನ ಮುಖದಲ್ಲಿ ಮೆಚ್ಚಿಕೆ.]

**ಗೋಪೀನಾಥರಾವ್ :**—ದಾಸಾ ! ನಮ್ಮಳಿಯಂದಿರಿಗೆ ಅದೇನು ನಿನ್ನ ಮೇಲಷ್ಟು ವಿಶ್ವಾಸ ? ನನ್ನ ಹತ್ತಿರ ಕೂಡ ಅಷ್ಟೊಂದು ಸರಾಗವಾಗಿ ಮಾತನಾಡೊಲ್ಲ, ನಿನ್ನ ಹತ್ತಿರ ಅಷ್ಟು ಅಷ್ಟು ಹೊತ್ತು ಮಾತನಾಡುತಿರ ತಾರಲ್ಲ?

**ದಾಸ :**—ಅವರು ಎಲ್ಲರಂತೆ ಸಾಧಾರಣ ಮನಸರಾಗಿ ಕಂಡುಬರಲಿಲ್ಲ ಬುದ್ದೀ ದೇವಲೋಕದೋರಿದ್ದಂಗೆ ಅವರ ಮಾತು, ಆ ದಯ, ಆ ಪ್ರೇಮ. ಬಡಬಗ್ಗರೂ, ನೊಂದೋರೂ, ಸಂಕಟದಾಗಿರೋರು, ಅಂದರೆ ಅವರ ಪ್ರೇಮ ಸಮುದ್ರದಂಗೆ ಉಕ್ಕುತಾ ಓಗೋದೇ.

**ಗೋಪೀನಾಥರಾವ್** —ಹಾಗಾದರೆ ನಮ್ಮ ವಿಚಾರದಲ್ಲಿ ಅಷ್ಟೇನು ವಿಶ್ವಾಸವಿದ್ದ ಹಾಗಿಲ್ಲ ?

**ದಾಸ** —ಅಂಗಲ್ಲ ಬುದ್ದೀ! ಅವರ ಮಾತೆಲ್ಲಾ ಎಚ್ಚು ಬಡ ಬಗ್ಗರು, ಕಷ್ಟದಾಗಿರೋರು–ಇಂತೋರ ವಿಚಾರವೇ.

**ಗೋಪೀನಾಥರಾವ್ :**—ರೈಲಿನಲ್ಲಿ ಬರುತಾ ಯಾರ ವಿಚಾರ ಮಾತನಾಡುತಿದ್ದರೂ ?

**ದಾಸ** —ದಾರಿ ಉದ್ದಕೂ ಚಿಕ್ಕವ್ವಾವರ ವಿಚಾರನೇ ಕೇಳುತಾ ಇದ್ದರು.

**ಗೋಪೀನಾಥರಾವ್** .—ಊಹುಂ! ಏನಂತ ?

**ದಾಸ**·—ನೀನು ಮಗೂನಿಂದ ಉಡುಗೀನ ನೋಡಿತಿದೀಯಾ? ಯಾವಾಗಿಂದ ಕಾಲು ಇಂಗಾಗ್ಯೆತೆ? ನಿಲ್ಲಿಸಿ ನಡೆಸೋಕು ಯಾರು ಪ್ರಯತ್ನ ಮಾಡಲಿಲ್ಲವಾ? ಎಂತೆಂತಾ ಔಸತಿ ಮಾಡಾಯಿತು? ಮನೆ ಬಿಟ್ಟು ಒರಗಡೆ ಓಗೋಕೇ ಇಲ್ವಾ? ಅಂತೆಲ್ಲಾ ಕೇಳುತಾ ನನ್ನ ಜವಾಬಿನ ಮದ್ಯೆ ಮದ್ಯೆ 'ಅಯ್ಯೋ ಪಾಪ'........ಚೇಚೇ'... ....ಇಂಗಾಗ ಬಾರದಾಗಿತ್ತು' ಪಾಪ ಪಾಪ' ಅಂತಾನೇ ಮರುಕ ಪಡುತ್ತಿದ್ದರು. ಆಮೇಲೆ ನನ್ನೆಂಡರು ಮಕ್ಕಳು ಮರಿ ಅಣಕಾಸಿನ ಸಮಾಚಾರ ವಿಚಾರಿಸಿಗೊಂಡು 'ಇಷ್ಟೊಂದು ಸ್ವಲ್ಪ ಸಂಬಳದಾಗೆ ಒಂಭತ್ತು ಮಕ್ಕಳು ಎಂಡರನ್ನ ಎಂಗೆ ಸಾಕುತೀಯಪ್ಪಾ ಪಾಪ! ಸಾವುಕಾರ್ರೇ ಯಾಕೆ ನಿನಗೆ ಇನ್ನೊಂದತ್ತು ರೂಪಾಯಿ ಬಡ್ತಿ ಮಾಡಬಾರದು ಸಂಬಳದಾಗೇಂ'ತ ಕೇಳಿದರು

**ಗೋಪೀನಾಥರ್ :**—(ಮುಗುಳ್ನಗೆ ನಕ್ಕು) ಸರಿಯೇ, ಮನೇಲಿ ನಿನ್ನ ಪರವಾಗಿ ಉಮುಂದೊಂದೇಸಿಪಾರ್ಸ್ಸು ಇತ್ತು ಇಷ್ಟು ದಿವಸ ಇನ್ನು ಅಳಿಯಂದರ ಸಿಪಾರಿಸೂ ಸೇರಿತು ಜೊತೆಗೆ–ಒಂದು ಕೆಲಸ ಮಾಡಿಬಿಡು ದಾಸ.

**ದಾಸಾ** —ಏನು ಬುದ್ದೀ!

**ಗೋಪೀನಾಥರಾವ್ :**—ನನ್ನ ಸಾವುಕಾರಿಕೆ ನಿನಗೆ ಕೊಟ್ಟು ಬಿಡುತೀನಿ ನಿನ್ನಾಳುತನ ನನಗೆ ಕೊಟ್ಟುಬಿಡು ನನಗೂ ಈ ಭಾರ ಬೇಜಾರಾಗಿದೆ

**ದಾಸಾ :**—ಅಯ್ಯೋ ಬುದ್ದೀ ತಮ್ಮ ಪಾದ! ಚಿಕ್ಕರಾಯರು ಏಳ್ತಿದ್ದನ್ನ ತಮ್ಮತಾವ ಅರಿಕೆ ಮಾಡಿದೆ ಅಷ್ಟೇ ಅಂತೂ ಚಿಕ್ಕವ್ವಾವರ ವಿಚಾರವಾಗಿ ಬೋಮರುಕ–ಬೋಮರುಕ, ತಮ್ಮ ಕಾಗದ ತಗೊಂಡು ಓಗಿ ಅವರ ತಂದೆ ಕೈಯ್ಯಾಗಿ ಕೊಡುತ್ತಲೂ ಅವರು ಒಳೀಕೋದರು. ರವಷ್ಟೊತ್ತಿಗೆ ಅವರು ಗಂಡ ಹೆಂಡತೀರ ವಾದ ಸುರುವಾಗಿ ನಡೀತು ಆಮೇಕ ಅವರು-ಈಶ್ವರಪ್ಪನೋರು ಮಗನ್ನ ಕರೆದು 'ಉಡುಗಿ ಉಟ್ಟಿದಬ್ಬಕ್ಕೆಲ್ಲಾ ನಾವು ಬರಬೇಕಾದ್ದಿಲ್ಲ' ಅಂತ ಏಳಿ ಕಾಗದ ಬರೆದು ಕಳಿಸಿಬಿಡುತೀನೀಂದರು. ಅದಕೆ ಇವರಿದ್ದದ್ದೇನೆ, 'ಮದುವೆ ಮಾಡಿದೋರು ನೀವು ಬರದಿದ್ದರೂ, ಮಾಡಿಕೊಂಡೋನು ನಾನು. ಓಗೇ ಬತ್ತಿನೀ'ಂದರು. ಅದಕಪರು ರೇಗಿದ್ದೇ 'ನೀನ್ಯಾಕೋಗಬೇಕು– ದೀವಳಿಗೆ ಅಲ್ಲ, ಗಣೇಶನಬ್ಬ ಅಲ್ಲ, ನೋಡಾನಿ

ಮುಂದೆ ಓಗಲೇ ಬೇಕಾದಾಗ ಒಂದುಸಲ ಎಲ್ಲರೂ ಓಗಿಬಂದರಾಯಿತು, ಅಂದರು. ಅದಕೆ ಇವರು ಜವಾಬೇ ಕೊಡದೇನೆ ಸೀದಾ ನನ್ನಕೂಡ ಬಂದೇ ಬಿಟ್ಟರು.

**ಗೋಪೀನಾಥರಾವ್** ·—ಅಂತೂ ತುಂಬ ರಂಪದ ಬೀಗತನವಾಗಿ ಹೋಯಿತು. ಆತನಿಗೆ ಬರೀ ದುಡ್ಡಿನ ದಾಹ ಆತನ ಹೆಂಡತೀಗೆ ದುರ ಹಂಕಾರ. ಈ ದಂಪತಿಗಳ ಹೊಟ್ಟೇಲಿ ಈ ರತ್ನದಂಥ ಮಗ ಯಾವ ಪುಣ್ಯ ದಿಂದ ಹುಟ್ಟಿದನೋ !

**ದಾಸಾ :**—ಮದುವೇಲೇ ನಂಗೆ ಅಂಗನ್ನಿಸಿಬಿಡಿತು ಬುದ್ದೀ.

**ಗೋಪೀನಾಥರಾವ್:**— ಟವಲು ಸೋಪು ಎಲ್ಲಾ ಇಟ್ಟು ಬಂದಿ ದೀಯೋ?

**ದಾಸಾ** ·— ಅಯ್ಯೋ ! ಏನು ಬೇಕಾದರೂ ನನ್ನತಾವ ಸಂಕೊಚ ವಿಲ್ಲದೆ ಕೇಳುತಾರೆ–ನನ್ನ ಚಿಕ್ಕಸ್ವಾಮೀ !

**ಗೋಪೀನಾಥರಾವ್ :**— ಅಂತೂ ನೀನೂ ಮೆಚ್ಚಿಕೊಂಡೇ ಅನ್ನೂ !

**ದಾಸಾ .**— ಕಣ್ಣಿಗೊತ್ತಿಕೊಂಡೇ ಬುದ್ದೀ.ಅವರ ಗುಣಾನಾ.

**ಗೋಪೀನಾಥರಾವ್ :**— ಮದುವೇಲಂತೂ ಅಳಿಯನ ಸಂಗಡ ಮಾತನಾಡೋದಕ್ಕೆ ಅವಕಾಶವೇ ಆಗಲಿಲ್ಲ ಆ ಬೀಗರ ಮುಂದೆ, ಧಾರೆ ಯಾಗುತಿದ್ದಹಾಗೆ, ದುಡ್ಡು ಕೈಗೆ ಬೀಳುತಿದ್ದಹಾಗೆ ಹೊರೊಡೋದಕ್ಕೆ ಗಂಟು ಕಟ್ಟಿ ಸಿದ್ಧವಾಗೋ ಆತುರದಲ್ಲಿದ್ದರು ಅವರು. ಈಗಲಾದರೂ ಸಂಯೋಗ ವಶಾತ್ ಒಬ್ಬನೇ ಬಂದಿದಾನೆ. ಸ್ವಲ್ಪ ನಾನು ಮಾತನಾಡಬೇಕಲ್ಲಾ!

**ದಾಸಾ :**— ಊಟಕ್ಕೆ ಕುಂತಾಗ, ಊಟವಾದಮೇಲೆ ಅಡಕೆಲೆ ಆಕ್ತಾ ಮಾತಾಡಬವುದಲ್ಲ ಬುದ್ದೀ! ಇಲ್ಲ ಸಂಜೆ ಕಡೆ ವಾಕಿಂಗ್ ಕರಕೊಂಡು ಓಗಿ ದಾರಿ ಉದ್ದಕೂ ಮಾತಾಡಬವುದಲ್ಲ.

**ಗೋಪೀನಾಥರಾವ್** ·— ನಾಳೆಯೇ ಬಂದು ಬಿಡಬೇಕೂಂತ ಅವರ ತಂದೆ ಮಗನಿಗೆ ಆರ್ಡರ್ ಮಾಡಿದ್ದಾರಂತೆ.

**ದಾಸಾ :**— ಕಡೇಲಿ ಸೋತರೂ ಗೆದ್ದಂಗೆ ಆ ಮಾತಾಡಿದರೂ.

**ಗೋಪೀನಾಥರಾವ್:**— ಒಂದು ನಾಲ್ಕು ದಿನವಾದರೂ ಇಲ್ಲಿದ್ದಿದ್ದರೆ

ನಮ್ಮ ಗುಣ ಅವನಿಗೆ ಗೊತ್ತಾಗಿ, ಅವನ ಸ್ವಭಾವಾನ ನಾವೂ ತಿಳಿಕೊಳ್ಳ ಬಹುದು.... ನಾನು ಮಹಡಿ ಮೇಲಿರುತೇನೆ ಅವರು ಸ್ನಾನ ಮಾಡಿಕೊಂಡು ಬರುತ್ತಲೂ ನನಗೆ ಹೇಳು

[ಗೋಪೀನಾಥರಾಯನು ನಿಷ್ಕ್ರಮಿಸುವನು.]

[ಹೆಗಲ ಮೇಲಿನ ವಸ್ತ್ರವನ್ನು ಹಿಡಿದು ಮೇಜನ್ನು ಸುತ್ತಲಿರುವ ಕುರ್ಚಿಗಳನ್ನು ವರೆಸುತ್ತಿರುವನು. ಹಿಂಬದಿಯ ಬಾಗಿಲಿನಿಂದ ಶಶಿಯು ಪ್ರವೇಶ.]

**ದಾಸಾ:**— ಬುದ್ದೀ! ಕನ್ನಡಿ ಬಾಚಣಿಗೆ ತಂದುಕೊಡಲೇ?

**ಶಶಿ**·— ನಮಗೆ ಯಾಕಯ್ಯ ಕನ್ನಡಿ ಬಾಚಣಿಗೆ? – ನಾವೇನು ಹೆಂಗಸರೇ?

**ದಾಸಾ** — ಅಂಗಲ್ಲಾ ಬುದ್ದೀ! ತಮ್ಮ ತಲೇಕೂದಲು ಬಾಚಾಕೆ.

**ಶಶಿ:**— ನನ್ನ ಹತ್ತಿರ ಬಾಚಣಿಗೆ ಇದೆ.

(ಜೇಬಿನಿಂದ ಬಾಚಣಿಗೆ ತೆಗೆದು ಬಾಚಿಕೊಳ್ಳುತ್ತಾ ಸೋಫಾದಮೇಲೆ ಕುಳಿತುಕೊಳ್ಳುವನು.)

**ದಾಸಾ**.— ಬುದ್ದೀ! ತಾವು ಕೊಟ್ಟ ಊವು, ಅಣ್ಣು, ಅರಸಿಣ ಕುಂಕುಮ, ಕುಪ್ಪಸದ ಕಣ ಎಲ್ಲಾ ಚಿಕ್ಕಮ್ಮಾ ಅವರಿಗೆ ಕೊಟ್ಟೆ.

**ಶಶಿ**.— ನಾನು ಕೇಳಿದೆನೆ ನಿನ್ನಾ?

**ದಾಸಾ:**— ನಾನು ಏಳಬೇಡವಾ ಬುದ್ದೀ!

**ಶಶಿ:**— ಸರಿ; ಹೇಳು.

**ದಾಸಾ:**— ಸಂತೋಸಕೋ ಏನೋ ಅವರು ಕತ್ತೆತ್ತಿ ನನ್ನ ನೋಡುತಾ ಕಣ್ಣಾಗಿ ನೀರು ತುಂಬಿದರು.

**ಶಶಿ:**— ಹುಂ.

**ದಾಸಾ:**— ಆಮೇಕೆ ನಾನು ಬಂದು ಬಿಟ್ಟೆ.

**ಶಶಿ:**— ಹುಂ.

**ದಾಸ**·— ಬುದ್ಧೀ! ರಾಯರು ಮಾಡಿ ಮೇಲೆ ಏನೋ ಲೆಕ್ಕಾ ನೋಡುತಾ ಅವರೆ. ತಾವು ಸ್ನಾನಮಾಡಿ ಬರುತ್ತಲೂ ಏಳೊಂದಿದ್ದರು.

**ಶಶಿ:**— ಸರಿ.

**ದಾಸ:**— ಏಳಲಾ ಬುದ್ದೀ,

**ಶಶಿ :**— ಬೇಡ. ಸ್ವಲ್ಪ ತಡೀ ದಾಸಾ! ನೀನು ಇವರ ಮನೇ ಕೆಲಸಕಾರ್ಯಗಳನೇ ಮಾಡುತಾ, ಇಪ್ಪತ್ತುನಾಲ್ಕು ಗಂಟೇನೂ ಇವರ ಸೇವೇಲೇ ಇರುತೀಯಲ್ಲಾ, ಈ ಮಧ್ಯೆ ನಿನ್ನ ಹೆಂಡತಿ ಮಕ್ಕಳು ನೆನಪಾ ಗೋದೇ ಇಲ್ಲವೋ?

**ದಾಸ** ·— ಆಗಾಕಿಲ್ವಾ ಬುದ್ದೀ! ಇಪ್ಪತ್ತನಾಲ್ಕು ಘಂಟೇನು ಅವರ ನೆಪ್ಪೆ ಆಗ್ತಾ ಇರುತ್ತೈತೆ. ಆದರೇನುಮಾಡೋದು ಬುದ್ದೀ, ಮನಸ್ಸೆಲ್ಲಾ ಮನೇಲಿ; ಮೈಯಿ ಮಾತ್ರ ಚಾಕ್ರೀಲಿ ಮನಸ್ಸಿನಿಂದೆ ಮೈಯನೂ ಕೈ ಬುಟ್ಟುಬುಟ್ಟರೆ ಮಕ್ಕಳು ಮರಿ ಒಟ್ಟೀ ಮೇಲೆ ಒದ್ದೀ ಬಟ್ಟೀನೇ........ ಅಲ್ಲಾ ಬುದ್ದೀ! ಎಂಡರು ಮಕ್ಕಳು ಅಣಕಾಸು, ಅಂಗಿ ಪೇಟ, ಕಡೇಗೀ ಮೈನೇ ಬುಟ್ಟುಬುಡಬೇಕಲ್ಲ – ಗುರುತೇ ಸಿಕ್ಕದಂಗೇ, ಅದಕಿದೊಂದುತರ ಅಭ್ಯಾಸ ಅಲ್ಲವಾ?

**ಶಶಿ :**— ನಿಜಾನ್ನೂ ಬಿಡೋದನ್ನ ಕಲಿಯೋಕೋಸ್ಕರವೇ ನಾವೀ ಪ್ರಪಂಚದಲ್ಲಿ ಹುಟ್ಟೋದು. ನಾವು ತಪ್ಪು ತಿಳಿವಳಿಕೆಯಿಂದ ಕಟ್ಟಿಕೊಳ್ಳುತಾ ಹೋಗುತೇವೆ, ಅದರಿಂದ ಒಂದಕ್ಕೊಂದು ಸಿಕ್ಕಾಗಿ ಹುಚ್ಚು ಹಿಡಿಸುತ್ತವೆ.

**ದಾಸ** —(ಮೆಚ್ಚುಕೆಯಿಂದ) ಆಹಾ! ಬಂಗಾರದ ಮಾತಲ್ಲವಾ ನಮ್ಮಪ್ಪ. ಅಲ್ಲಾ ಬುದ್ದೀ! ನಿಮಗೀ ವಯಸ್ಸಿಗೀ ಬುದ್ಧಿ ಬಾರದು ತಂದೇ. ಅದಕೂ ವಯಸ್ಸು ಬತ್ತೈತೇ

**ಶಶಿ :**— ತಪ್ಪು ದಾಸಾ! ನಿನ್ನ ಅಭಿಪ್ರಾಯ ತಪ್ಪು

**ದಾಸ** — ಔದಾಬುದ್ದೀ?

**ಶಶಿ :**— ಈಗ ನೋಡು. ಮೈ ಮುಪ್ಪಾದ ಮೇಲೆ, ಮನಸ್ಸಿಗೆ ಅರಳು ಮರಳು ಮುಚ್ಚಿಗೊಂಡ ಮೇಲೆ ತಿಳಿವಳಿಕೇ ತಗೊಳ್ಳೋಕಾಗುತ್ತೆಯೇ?

**ದಾಸ :**— ಇಲ್ಲಾ ಬುದ್ದೀ ಎಲ್ಲಾಗುತ್ತೈತೆ! ಕಣ್ಣು ಮಂಜಾಗಿ, ಕೈ ಕಾಲು ಉಡುಗಿ, ಗಂಟಲಾಗೆ ಕಫ ಗರ ಗರಂತ ಕಟ್ಟಿ, ಮೈಯೇ ಸೆರೆಯಾದ ಮೇಕೆ, ತಿಳಿವಳಿಕೇ ತಗೊಳ್ಳೋಕೆ ಪುರುಸತ್ತಿರುತ್ತೈತಾ?

**ಶಶಿ :**— ಅದಕ್ಕಾಗೀ, ಲೋಕದ ರೀತಿನೀತಿ, ಯೋಗ್ಯತೆ, ಬೆಲೆಗಳನ ತಿಳಿಕೊಳ್ಳೋದಕ್ಕೆ ಮೇಲಿನಿಂದ ಬರೋ ಒಂದೇ ಒಂದು ಒತ್ತು ಸಾಕು–

ಬುದ್ಧಿವಂತ ಅಪ್ಪರಲ್ಲೀ ಇವುಗಳ ಯೋಗ್ಯತೆ ತಿಳಿಕೊಂಡು ಆ ಮುಗ್ಗುಲಾಗ ಬೇಕು.

**ದಾಸ**:— ಆಹಾ ! ದೇವರು ನಮ್ಮಪ್ಪ .. ...ಏನೇ ಆಗಲಿ. ಒಸದಾಗಿ ಮದುವ್ಯಾಗಿ, ಮೊದಲನೇ ಬಾರಿ ಅತ್ತೆ ಮನೇಗೆ ಬಂದಿದೀರಾ. ಸತ್ಯಾಂಶ ಎಂಗೇ ಇರಲಿ ಒಸೀ ಈ ಮುಗ್ಗುಲಾಗೇ ಇರಿ ಬುದ್ದೀ.

**ಶಶಿ**:— ದಾಸಾ ! ಈವರೆಗೆ ಎಷ್ಟು ಜನ್ಮಗಳೆತ್ತಿರಬೇಕು ? ಎಷ್ಟು ತಂದೆ ತಾಯಿಗಳಿಗೆ ಮಗನಾಗಿರಬೇಕು ? ಎಷ್ಟು ಜನ ಹುಡುಗೀರನ್ನ ನನ್ನ ಹೆಂಡತೀಂತ ಅಂದುಕೊಂಡು ಒಗೆತನ ಮಾಡಿರಬೇಕು ! ಲೆಕ್ಕವೇನಾದರೂ ಇದೆಯೇ ?

**ದಾಸ**:— ಇಲ್ಲ ನನ್ನಪ್ಪ !

**ಶಶಿ**:— ಇದೆಲ್ಲಾ ಬರೀ ನಾಟಕವಲ್ಲವೇ? ಸ್ವಾರ್ಥಕ್ಕೋಸ್ಕರ ಮನುಷ್ಯ ಹಾಕ್ಕೊಳ್ಳೋ ಹಗಲು ವೇಷಗಳಲ್ಲವೇ ಇವು....(ಸುಮ್ಮನಾಗುವನು.)

**ದಾಸ**:—ಏನು ಯೋಚನೆಮಾಡುತೀರ ಬುದ್ದೀ ?

**ಶಶಿ**:— ನಿಮ್ಮ ಚಿಕ್ಕಮ್ಮಾಅವರು ಮದುವೇಲಂತೂ ಪಾಪ ಕೂತೇ ಇದ್ದರು. ಮನೇಲಿ ಜರುಗಬೇಕಾದರೆ ಹ್ಯಾಗೆ ಮಾಡುತಾರೇ ?

**ದಾಸ**:—(ಸುತ್ತಲೂ ನೋಡಿ ಮೆಲುದನಿಯಲ್ಲಿ) ಈ ಮನೇಲಿ ಅನ್ನೆರಡು ವರುಸದಿಂದ ಚಾಕ್ರೀಲಿದ್ದರೂ, ಮದುವೇ ದಿನದಿಂದ ನಿಮ್ಮ ಮೇಲೆ ಇಷ್ಟೊಂದು ಭಕ್ತಿಬಂದುಬಿಟ್ಟೈತೆ ಬುದ್ದೀ!........ನೀವು ಎಣ್ಣನ್ನ ನೋಡದೇ ಮದುವ್ಯಾದರಾಲ್ಲಾ ! ಈ ಕಾಲದಾಗೆ ಯಾರು ಬುದ್ದಿ ಇಂಗೆ ಮೋಸ ಓಗೋರು ? ಆಳುತನಮಾಡೋ ನಮ್ಮುಡುಗರೇ, ಮದುವ್ಯಾಗೋ ಎಣ್ಣುಗಳ ಅಲ್ಲಿಡಿದು ಅತ್ತುಸಲ ಪರೀಕ್ಸೆಮಾಡಿ, ವಡವೆವಸ್ತು ಚೌಕಾಸಿ ನಡೆಸುತಾರೆ. ಅಲ್ಲಾ ಬುದ್ದೀ ! ನಿಮುಗೆ ನಮ್ಮ ಚಿಕ್ಕವ್ವಾಅವರಿಗೆ (ಸುತ್ತ ನೋಡಿ) ಕಾಲಿಲ್ಲಾಂಬೋದು ಗೊತ್ತಿತ್ತ ಬುದ್ದೀ ?

**ಶಶಿ**:—ಗೊತ್ತಿತ್ತು ದಾಸ ಚೆನ್ನಾಗಿ ಗೊತ್ತಿತ್ತು

**ದಾಸ**:— ಗೊತ್ತಿದ್ದೂ ಎಂಗೊಪ್ಪಿದಿರೀ ನನ್ನ ತಂದೇ ? ನಿಮ್ಮ ತಂದೆ ಗೋಳ ಬಲವಂತಕ್ಕಾ? ನಿಮುಗೆ ಬೇರೆ ಎಣ್ಣು ಸಿಕ್ಕುತಿರಲಿಲ್ಲವರಾ ನನ್ನಪ್ಪಾ ?

(ಶಶಿಯು ಹಿಂಬದಿಯಲ್ಲಿ ಬಂದು ನಿಲ್ಲುವನು.)

**ಶಶಿ.**—ದಾಸಾ! ಚೆನ್ನಾಗಿದೋ ಹೆಣ್ಣನ್ನೇನಪ್ಪಾ – ಯಾರಾದರೂ ಮದುವೆಯಾಗುತಾರೇ; ಆದರೆ ಇಂಥಾ ಹೆಣ್ಣುಮಕ್ಕಳ ಗತಿಯೇನು? (ದಾಸನು ಆ ಬಾಗಿಲಿನಿಂದ ಜಾರುವನು) ಅವರ ತಾಯಿ ತಂದೆಗಳು ಅವರ ಸಂಗಡ ಉದ್ದಕ್ಕೂ ಬದುಕಿದ್ದಾರೇ–ಪ್ರೀತಿಯಿಂದ ಸಾಕಿಯಾರೂ ಅನ್ನೋ ದಕ್ಕೆ? ಇಲ್ಲ ಒಂದುವೇಳೆ ಅಣ್ಣಾತಮ್ಮಂದಿರೂ ಅಕ್ಕತಂಗೀರೂ ಯಾರಾದರೂ ಬಂದು ಇದ್ದರೂ, ಅವರೇನಾದರೂ ಇವರ ಮನಸ್ಸಿಗೆ ನೋವಾಗದಂತೆ ಸಾಕಿ ಕೊಂಡು ಮುಪ್ಪು ನೀಗಿಯಾರೋ? ಹೇಳು ದಾಸಾ!

[ದಾಸನ ಉತ್ತರ ಬಾರದಿರುವುದನ್ನು ಕಂಡು ಹಿಂದಿರುಗುವನು. ಬಾಗಿಲ ಬಳಿ ಚಕ್ರದ ಕುರ್ಚಿಯಲ್ಲಿ ಕುಳಿತಿರುವ ಉಮಾ ಬಲಗೈಲಿ ಉಪ್ಪಿಟ್ಟಿರುವ ಬೆಳ್ಳಿಯ ತಟ್ಟೆಯನ್ನು ಹಿಡಿದು, ಎಡಗೈಲಿ ಚಕ್ರವನ್ನುರುಳಿಸಿಕೊಂಡು ಬಂದು ಕಾದಿರು ವಳು. ಲಕ್ಷಣವಾದ ಮುಖ. ಮುಖದಲ್ಲಿ ನಿಸ್ವಾರ್ಥ ಪ್ರೇಮ ಕೃತಜ್ಞತೆಗಳ ಶಾಂತಿ. ಹುಟ್ಟಿದ ಹಬ್ಬವಾದ್ದರಿಂದ ನೀರು ಜಡೆಹಾಕಿಕೊಂಡು ಹೊಸ ಸೀರೆ ಯುಟ್ಟು ಹರಿದ್ರಾಕುಂಕುಮ ಚಂದ್ರಗಳನ್ನಿಟ್ಟು ಮಂಗಳ ಗೌರಿಯಂತೆ ಕಾಣುತ್ತಿ ದ್ದಾಳೆ. ಶಶಿಯ ಮಾತುಗಳನ್ನು ಕೇಳುತ್ತಿದ್ದವಳು, ಅವನು ಹಿಂದಿರುಗಿ ದಂತೆಯೇ ಲಜ್ಜೆಯಿಂದ ಕತ್ತನ್ನು ತಗ್ಗಿಸಿಬಿಡುವಳು. ಅವಳ ಪರಿಸ್ಥಿತಿಯನ್ನು ನೋಡುತ್ತಾ ಶಶಿಯು ಬಹು ಕನಿಕರದಿಂದ ಎದ್ದುಹೋಗಿ ತಟ್ಟೆಯನ್ನು ಕೈಗೆ ತೆಗೆದುಕೊಳ್ಳುತ್ತಿರುವಂತೆಯೇ, ಉಮಾ ಕುರ್ಚಿಯನ್ನು ಹಿಂದಕ್ಕೆ ತಳ್ಳಿಕೊಂಡು ಹೊರಟುಹೋಗುವಳು. ಶಶಿಯು ಅತ್ತಕಡೆಯೇ ನೋಡುತ್ತಾ ಇದ್ದು, ಕಡೆಗೆ ಇತ್ತ ಬಂದು ಸೋಫಾದ ಮೇಲೆ ಕುಳಿತು ಸುತ್ತಲೂ ನೋಡಿ 'ದಾಸಾ' ಎಂದು ಕೂಗುವನು. ಯಾರೂ ಬಾರದಿರುವುದನ್ನು ನೋಡಿ, ಸುಮ್ಮನಾಗಿ, ಉಪ್ಪಿಟ್ಟನ್ನು ತಿನ್ನಲಾರಂಭಿಸುವನು. ತುಸುಹೊತ್ತಿನಲ್ಲಿ ಹಿಂಬದಿಯಿಂದ ಮತ್ತೆ ಉಮಾ ಒಂದು ತಟ್ಟೆಯಲ್ಲಿ ಒಂದು ಲೋಟ ನೀರು, ಟೀಸೆಟ್ಟಿನಲ್ಲಿ ಹಾಲು, ಸಕ್ಕರೆ, ಕಾಫಿ ಡಿಕಾಕ್ಷನನ್ನು ತರುವಳು. ಶಶಿಯು ಎದ್ದುಹೋಗಿ ಅವನ್ನು ತೆಗೆದು ತಂದು ಮೇಜಿನ ಮೇಲಿಟ್ಟು ನಿಲ್ಲುವನು. ಉಮಾ ಕತ್ತನ್ನು ತಗ್ಗಿಸಿ ಅಲ್ಲೇ ಇರುವಳು. ಶಶಿಯೇ ಅವಳ ಕಡೆಗೆ ನೋಡುತ್ತಿದ್ದು, ಕಡೆಗೆ ಬಳಿಗೆಹೋಗಿ ಮೆಲ್ಲಗೆ ಅವಳ ಕುರ್ಚಿಯನ್ನು ತಳ್ಳಿಕೊಂಡು ಮೇಜಿನ ಮುಂದಕ್ಕೆ ಬರುವನು. ಉಮಾ ಕತ್ತು ತಗ್ಗಿಸಿಕೊಂಡು ಕಾಫಿ ಮಾಡುತ್ತಿರುವಳು. ಶಶಿಯು ಪಕ್ಕದ ಕುರ್ಚಿಯಲ್ಲಿ ಕುಳಿತು ಉಪ್ಪಿಟ್ಟನ್ನು ತಿಂದು ಮುಗಿಸುವನು.]

**ಶಶಿ:**— ಕಾಫಿ ತುಂಬಾ ಬಿಸಿಯಾಗಿದೆಯೇನು?

**ಉಮಾ** :—(ನಾಚಿ - ತಡೆದು) ಇಲ್ಲ. ಹದವಾಗಿದೆ. (ಒಂದು ಲೋಟ ಶಶಿಗೆ ಕೊಡಲು ಹೋಗುವಳು.)

**ಶಶಿ** :—ನೀನು ಉಪ್ಪಿಟ್ಟು ತಿಂದೆಯಾ ? (ಲೋಟವನ್ನು ತೆಗೆದ ಕೊಳ್ಳುವನು.)

**ಉಮಾ** :—ಇಲ್ಲಾ , ಇನ್ನೂ ಗೌರೀಪೂಜೆಯಾಗಿಲ್ಲ

**ಶಶಿ** :—ಹಾಗಾದರೆ ಕಾಫಿ ಕೂಡಾ ಕುಡಿಯುವಂತಿಲ್ಲ?

**ಉಮಾ** :—ಇಲ್ಲ

**ಶಶಿ** :—ಹಾಗಾದರೆ ನಾನೂ ಕುಡಿಯುವುದಿಲ್ಲ (ಲೋಟವನ್ನು ಮೇಜಿನಮೇಲಿಡುವನು.)

**ಉಮಾ** :—(ನೊಂದು) ನೀವು ಕುಡಿಯಬಹುದು. ಕುಡಿಯಬೇಕು

**ಶಶಿ** :—ಅದಿರಲಿ. ನೀನು ಗೌರಿಪೂಜೆ ಮಾಡುವುದು ಯಾರಿಗೋಸ್ಕರ ?

**ಉಮಾ** .—ನಮಗೋಸ್ಕರ

**ಶಶಿ** :—ಅಂದರೆ ?

**ಉಮಾ** .—ನಮ್ಮ ಯೋಗಕ್ಷೇಮಕ್ಕೋಸ್ಕರ.

**ಶಶಿ** :—ನಮ್ಮ ಎಂದರೆ ಯಾರು ? ನೀನು, ನಿಮ್ಮ ತಂದೆ, ನಿಮ್ಮ ತಾಯಿ........

**ಉಮಾ** :—ಅಲ್ಲ

**ಶಶಿ** :—ಹಾಗಾದರೇ ?

**ಉಮಾ** :—ನಮ್ಮಿಬ್ಬರ... ....(ಸುಮ್ಮನಾಗುವಳು )

**ಶಶಿ** :—ನಮ್ಮಿಬ್ಬರ ಎಂದರೆ ನೀನು, ನಿಮ್ಮ ತಾಯಿ .. ...

**ಉಮಾ** :— ಅಲ್ಲ .. ....ನಾನೂ.... .......

**ಶಶಿ** :—ಹುಂ - ನೀನೂ .. . ? ಮತ್ತೆ ಯಾರು ?

[ಉಮಾ ಶಶಿಯ ಕಡೆಗೆ ಬೆರಳು ತೋರಿಸಿ ಕತ್ತು ತಗ್ಗಿಸುವಳು.]

**ಶಶಿ** :—(ನಕ್ಕು) ಹಬ್ಬಾ ! ಅಲ್ಲಾ , ಗಂಡ ಹೆಂಡತಿಯನ್ನ ಏಕ ವಚನದಲ್ಲಿ ನಿರ್ದಾಕ್ಷಿಣ್ಯವಾಗಿ ಮಾತನಾಡಿಸುತಿರುವಾಗ ಹೆಂಡತಿಗೇಕೆ ಇಷ್ಟೊಂದು ಸಂಕೋಚ?........'ನೀವು' ಅನ್ನೋದಕ್ಕೂ ಗಂಟಲು ಬಾರದೇ? ಅಂದಹಾಗೇ ಗೌರೀಪೂಜೇನ ನನಗೋಸ್ಕ ನಿನಗೋಸ್ಕರ ಮಾಡೋಪಕ್ಷಕ್ಕೆ

ಇವತ್ತೊಂದುದಿನ ನನಗಾಗಿ ಜೊತೇಲಿ ಬಂದು ಸ್ವಲ್ಪ ಕುಡಿದುಬಿಡು; ನಾನೂ ನಿಸ್ಸಂಕೋಚವಾಗಿ ಈ ಲೋಟಾನ ಖಾಲಿಮಾಡುತೇನೆ

[ಉಮಾ ಕತ್ತನ್ನು ತಗ್ಗಿಸಿ ಸುಮ್ಮನೆ ಕುಳಿತಿರುವಳು.]

**ಶಶಿ**.—ಹಾಗಾದರೆ ನನ್ನ ಮಾತಿಗಿಷ್ಟೇಯೇ ಬೆಲೆ ? (ನಸುಗೋಪ)

[ಉಮಾ ತಟ್ಟನೆ ಮತ್ತೊಂದು ಲೋಟಕ್ಕೆ ಸ್ವಲ್ಪ ಕಾಫಿ ಬಗ್ಗಿಸುವಳು.]

**ಶಶಿ**.—ತಗೋ ! ಕುಡಿ ! ಈ ದಿನ ನೀನು ಗೌರಮ್ಮನಿಗೆ ಮಾಡಿರೋ ಅಪಚಾರಕ್ಕೆ ನಾನು ಹೊಣೆ

(ಶಶಿಯು ಕಾಫಿ ಕುಡಿಯುತ್ತಿರುವಂತೆಯೇ ಉಮಾ ಸಹ ಎರಡು ಗುಟುಕು ಕುಡಿದು ಲೋಟವನ್ನು ಮೇಜಿನ ಮೇಲಿಟ್ಟು ಕುಳಿತಿರುವಳು.)

**ಶಶಿ**.—(ಕಾಫಿ ಕುಡಿದಾದನಂತರ) ನಿನ್ನ ಹೆಸರೇನು ಹೇಳು ನಿನ್ನ ಬಾಯಿಂದಲೇ ಒಂದು ಸಲ ಕೇಳಬೇಕೂನ್ನಿಸಿದೆ

**ಉಮಾ** :—ಉಮಾ

**ಶಶಿ** :—(ನಿಟ್ಟುಸಿರುಬಿಟ್ಟು) ನನ್ನ ಸ್ನೇಹಿತ ಅನಂತೂಂತ ಇದ್ದ. ಅವನ ತಂಗಿ ಒಬ್ಬಳಿದ್ದಳು—ಅವಳ ಹೆಸರು .......'ಸುಮಾ' ಅಂತ.

**ಉಮಾ** :—ಈಗ ಅವರೆಲ್ಲಿದಾರೆ ?

**ಶಶಿ** :—ಅವನು ಸೋಮಾಲಿಲ್ಯಾಂಡ್‌ಗೆ ಹೊರಟುಹೋದ. ಸುಮಾ ಪೂನಾದಲ್ಲಿ ಯಾವುದೋ ಅಬಲಾಶ್ರಮಕ್ಕೆ ಸೇರಿಕೊಂಡಳು.

**ಉಮಾ**.—ಅಷ್ಟು ದೂರದ ಆ ಆಫ್ರಿಕಾಖಂಡಕ್ಕೆ ಯಾಕೆ ಹೋದರು?

**ಶಶಿ** :—ಕೆಲಸಕ್ಕೆ.

**ಉಮಾ** :—ಆಕೆಗೆ ಮದುವೆಯಾಗಿಲ್ಲವೇ ?

**ಶಶಿ** :—ಆಗಬೇಕಾಗಿತ್ತು. ಆದರೆ ಆಗಲಿಲ್ಲ

**ಉಮಾ** :—ಯಾಕೇ?

**ಶಶಿ** :—ಅವಳ ತಂದೆ ಇರಲಿಲ್ಲ. ಇದ್ದಿದ್ದರೆ ಅವಳು ಮದುವೆಯಾಗ ಬೇಕೂಂತಿದ್ದ ಗಂಡಿನ ತಂದೆಗೆ ಐದು ಸಾವಿರ ರೂಪಾಯಿ ಕೊಟ್ಟು ಗಂಡನ್ನ ಕೊಂಡು ಮದುವೆ ಮಾಡುತಿದ್ದರು.

**ಉಮಾ** :—ವರದಕ್ಷಣೆ ಕೊಡದೇ ಬೇರೆ ಗಂಡು ಸಿಕ್ಕುತಿರಲಿಲ್ಲವೇ ?

**ಶಶಿ** :—ಅವಳು ಆ ಗಂಡನ್ನೇ ಮದುವೆಯಾಗಬೇಕೂಂತಿದ್ದಳು.

**ಉಮಾ** :– ಹೆಣ್ಣು ಮಕ್ಕಳು ಅದೂ ಈ ವಿಚಾರದಲ್ಲಿ ಹಟ ಮಾಡಲೇ ಬಾರದು.

**ಶಶಿ** :—ನೀನು 'ಎಂ. ಎ' ಮಾಡಿರೋ ಗಂಡನೇ ಆಗಿರಬೇಕೂಂತ ಹಟ ಮಾಡಿದೆಯಂತೇ?

[ಉಮಾ ಕತ್ತನ್ನು ತಗ್ಗಿಸಿ ಸುಮ್ಮನಿರುವಳು.]

**ಶಶಿ** ·— .... ... ಉಮಾ........ಏಕೆ ? .. ....ಮಾತಾಡು !

(ಉತ್ತರವಿಲ್ಲ)

**ಶಶಿ** —(ಸ್ವಲ್ಪ ಹತ್ತಿರ ಹೋಗಿ ಅವಳ ಗಲ್ಲವನ್ನೆತ್ತುವನು ಕಣ್ಣು ಗಳಿಂದ ನೀರು ಹರಿಯುತ್ತಿರುವುದನ್ನು ಕಂಡು ನೋಯುವನು) ಉಮಾ!.... ಏಕೆ ಕಣ್ಣೀರು? ನಾನೇದದೂ ತಪ್ಪು ಮಾತಾಡಿದೆನೇ?

**ಉಮಾ** :–(ಕಣ್ಣೊರಸಿಕೊಂಡು) ನಾನಿರುವ ಹುಟ್ಟಿಗೆ ನನಗೆ ಮದುವೆಯೊಂದು ಬೇಕಾಗಿದ್ದಿತೋ?

**ಶಶಿ** :–(ಅವಳ ತಲೆಯನ್ನು ನೇವರಿಸುತ್ತಾ) ಇದೇನು ಹೀಗೆ ಮಾತ ನಾಡುತೀ?

**ಉಮಾ** —ನನ್ನ ಸ್ಥಿತಿಯನ್ನ ನೋಡದೇ ನೀವು ನನ್ನ ಸಂಗಡ ಮದುವೆಗೆ ಹೇಗೊಪ್ಪಿದಿರಿ? ಇದು ನಮ್ಮ ತಂದೆಯ ಮೋಸವಲ್ಲವೇ?

**ಶಶಿ**.—ಛೇಛೇ!! ನಿನ್ನ ಸ್ಥಿತಿಯ ಸಮಾಚಾರವನ್ನು ತಿಳಿದೇ ನಾನ ಮದುವೆಗೆ ಒಪ್ಪಿದ್ದು

**ಉಮಾ**.—ಹೀಗೂ ಉಂಟೇ?...........ನಿಮ್ಮ ವಿದ್ಯಾ, ರೂಪು ಗುಣಕ್ಕೆ........ಎಂಥ ಹಣವಂತರ ಮನೆಯ ರತಿಯಂಥ ಹೆಣ್ಣುಗಳನ್ನ ಮದುವೆಯಾಗಬಹುದಾಗಿದ್ದಿತಲ್ಲಾ!

**ಶಶಿ** :—ಹಣವಂತರ ಮನೆಯ ರೂಪವತಿಯನ್ನ ಯಾರಾದರು ಮದುವೆಯಾಗುತಾರೆ! ಆದರೆ ಅನಂತುವಿನ ತಂಗಿ ಆ ತಬ್ಬಲಿ ಸುಮಾ.... .. ಮತ್ತೆ........

**ಉಮಾ** —ನನ್ನಂಥ ಹೆಳವಿಯರನ್ನ ಯಾರು ಮದುವೆಯಾ ಬೇಕೆಂತಲೇ?... ....ನಮಗೆ........ಅದೂ ನನಗೆ ಮದುವೆ ಬೇರೇಯೇ?....... ಅದೂ ನಿಮ್ಮಂಥವರೊಂದಿಗೆ... (ದುಃಖದಿಂದ) ನಮ್ಮ ತಂದೆ ನಿಮಗೆ ಮೋ

ಮಾಡಿದ್ದಾರೆ. ನಿಮ್ಮನ್ನು ಹಸೆಯ ಮಣೆಯ ಮೇಲೆ ಮೊದಲು ನೋಡಿದಾರಭ್ಯ ನನ್ನ ಹೊಟ್ಟೆಯಲ್ಲಿ ಇದೇ ಸಂಕಟ. ನೀವು ಬಹು ಮೋಸ ಹೋಗಿದ್ದೀರಿ. ನೀವು ನಿಮ್ಮ ತಂದೆಯ ಬಲವಂತಕ್ಕೆ ಸೋತು ಈ ಮದುವೆಗೆ ಒಪ್ಪಿದಿರೆಂದು ಕೇಳಿದೆ. ಆದರೆ ಈಗ ನೀವೇ ವಿಚಾರ ತಿಳಿದೂ ತಿಳಿದೂ ಮೋಸ ಹೋದಂತಿದೆಯಲ್ಲಾ !!

**ಶಶಿ :**— ಉಮಾ ! ನೀನು ನನಗಾಗಿ ವ್ಯಥೆಪಡಬೇಡ

**ಉಮಾ :**— ಅದು ಹೇಗೆ ಸಾಧ್ಯವಾದೀತು?..... ಶೂನ್ಯವಾಗಿರುವ ನನ್ನ ಒಂದು ಕಾಲು ಮತ್ತೆ ಬಂದು, ಎಲ್ಲ ಹೆಣ್ಣು ಹುಡುಗಿಯರಂತೆ ನಿಮ್ಮ ಸೇವೆ ಮಾಡಬಲ್ಲೆನಾದರೆ ಆಗ ನನ್ನವ್ಯಥ ದೂರವಾದೀತು. ಈಗಿರುವಂತೆಯೇ ನಾನು ನಿಮಗೆ ಹೆಂಡತಿಯಾಗಿರಲು ಅಯೋಗ್ಯಳಲ್ಲವೇ? ನಿಮ್ಮ ತಂದೆಯಾದರೂ ಈ ಮೋಸಕ್ಕೆ ಹೇಗೆ ಒಪ್ಪಿದರು ?! (ದುಃಖಿಸುವಳು.)

**ಶಶಿ :**— ಉಮಾ !! ನೀನು ಈ ದುಃಖವನ್ನು ಬಿಡು ನಿನ್ನ ವಿಚಾರವೆಲ್ಲವನ್ನೂ ತಿಳಿದೂ ನಾನೇ ಈ ಮದುವೆಗೊಪ್ಪಿದೆ ಅದಕ್ಕೆ ಎರಡು ಕಾರಣಗಳು ಒಂದು ನಮ್ಮ ತಂದೆಗೆ ನನ್ನ ವಿದ್ಯಾಭ್ಯಾಸಕ್ಕಾಗಿ ಮನೆ ಮಠವನ್ನೆಲ್ಲಾ ಮಾರಿ ಖರ್ಚುಮಾಡಿದ್ದ ನಾಲ್ಕೈದು ಸಾವಿರ ರೂಪಾಯಿ ಹಿಂದಕ್ಕೆ ಬರಬೇಕಾಗಿತ್ತು — ಹೆಣ್ಣಿನ ತಂದೆಯಿಂದ........

**ಉಮಾ :**— ಐದಲ್ಲ... ....ಹತ್ತು ಸಾವಿರ ರೂಪಾಯಾದರೂ ಕೊಟ್ಟು 'ನಮ್ಮಯ್ಯಾಂತ' ನಿಮ್ಮ ಕಾಲಿಗೆಬಿದ್ದು ಮದುವೆಯಾಗುವಂಥ ಹೆಣ್ಣುಗಳಿರಲಿಲ್ಲವೇ ?

**ಶಶಿ .**— ಅದೇನೋ – ನಾ ಕಾಣೆ

**ಉಮಾ :**— ಮತ್ತೊಂದು ಕಾರಣ ...... ಈ ಹೆಳವಿಯನ್ನ ಉದ್ಧಾರ ಮಾಡೋದಕ್ಕೆ

**ಶಶಿ :**— (ಕೈಹಿಡಿದು) ಉಮಾ ! ನಿನ್ನನ್ನು ಬಾರಿಬಾರಿಗೂ 'ಹೆಳವಿ ಹೆಳವಿ' ಅನ್ನಬೇಡ. ಒಂದುಕಾಲು ಸ್ವಲ್ಪ ಊನವಾಗಿದ್ದ ಮಾತ್ರಕ್ಕೆ ನೀನೇನು ಮನುಷ್ಯಳೇ ಅಲ್ಲವೇ ? ನಿನ್ನನ್ನ ನೀನು ಅಷ್ಟೊಂದು ತಿರಸ್ಕಾರವಾಗಿ ಕಂಡುಕೊಳ್ಳಬೇಡ.

**ಉಮಾ :**— ಅಯ್ಯೋ! ನೀವೆಷ್ಟು ದಯಾವಂತರು! ಎಷ್ಟು ನಿಸ್ವಾರ್ಥಿ ಗಳು !!...... ...ದೇವರಿಗೆ ನಿಮಗಿರುವ ದಯೆಯ ನೆರಳಾದರೂ ಇದಿದ್ದರೆ ನನಗೀ ಕಾಲು ಬಂದುಬಿಡುತ್ತಿತ್ತು.

**ಶಶಿ :**— ಈಗಲೂ ಕಾಲು ಬಾರದೆಂದು ಹೇಗೆ ಹೇಳುತೀ ?

**ಉಮಾ :**— ನನ್ನ ಬಾಲ್ಯದಿಂದ ನಮ್ಮ ತಂದೆಯೂ ಪ್ರಪಂಚದ ಎಲ್ಲಾ ವೈದ್ಯಗಳನ್ನೂ ಮಾಡಿಸಿ ಮಾಡಿಸಿ ಸುಮ್ಮನಾಗಿದಾರೆ.

**ಶಶಿ** :— ಮದುವೆಯಾದ ಮೇಲೆ ಕಾಲು ಬರುತ್ತೇಂತ ಜೋತಿಷ್ಯರು ಹೇಳಿದಾರಂತೇ ?

**ಉಮಾ** .— ಅವರ ಭ್ರಮೆಗೆ ನಾನೇನು ಹೇಳಲಿ !

**ಶಶಿ :**— ಬರಬಾರದೇಕೆ ?

**ಉಮಾ :**— ನಿಮ್ಮೆಲ್ಲರ ಈ ಅಪಾರ ಪ್ರೇಮಕ್ಕೆ ನಾನು ಯೋಗ್ಯಳೇ?

**ಶಶಿ** :— ಉಮಾ! ನಿನ್ನನ್ನ ನೀನು ಅಲ್ಲಗಳೆದರೆ ನನ್ನನ್ನು ಅಲ್ಲಗಳದಂತೆ— ನನಗಷ್ಟೇ ವ್ಯಥೆಯಾಗುತ್ತೆ. ಇದುವರೆಗೂ ಗೋಪೀನಾಥರಾಯರ ಮಗ ಳಾಗಿದ್ದೆ, ಜನರೂ ಹಾಗೇ ಅನ್ನುತ್ತಿದ್ದರು. ಇನ್ನು ಮುಂದೆ ಶಶಿಶೇಖರನ ಪತ್ನಿ! ನಿನ್ನನ್ನ ನೀನೇ ತೆಗಳಿದರೂ ಇತರರು ತೆಗಳಿದರೂ ನನ್ನ ಮನಸ್ಸಿಗೆ ತುಂಬಾ ನೋವಾಗುತ್ತೆ. ಕದ್ದರೆ, ಕನ್ನ ಹಾಕಿದರೆ, ಸುಳ್ಳು ಹೇಳಿದರೆ, ಮೋಸ ಮಾಡಿದರೆ, ಜನರಿಗೆ ತೊಂದರೆ ಮಾಡಿದರೆ, ಈ ಜನ ನಮ್ಮನ್ನ ಅನ್ನಲಿ; ನಮ್ಮ ಕರ್ಮದ ಫಲವಾಗಿ ನಮಗೇನೋ ಸುರೂಪೋ, ಕುರೂಪೋ, ಕೆಂಪೋ, ಕಪ್ಪೋ, ಎಂಥದೋ ದೇಹ ಬಂದರೆ ಅದಕ್ಕಾಗಿ ನಮ್ಮನ್ನ ತೆಗಳೋದು ಮಹಾ ಪಾಪ. ಅಲ್ಲವೇ ?

**ಉಮಾ :**— ನೀವು ಮನುಷ್ಯರಲ್ಲ....ದಾಸ ಹೇಳೋಹಾಗೆ ದೇವರು ನಿರ್ಭಾಗ್ಯಳಾದ ನನ್ನ ಭಾಗಕ್ಕಂತೂ ಪ್ರತ್ಯಕ್ಷ ದೇವರು!!

**ಶಶಿ :**— ಮತ್ತೆ ನಿನ್ನನ್ನ ನಿರ್ಭಾಗ್ಯಳೂಂತ ಏಕೆಂದುಕೊಳ್ಳುತೀ ?

**ಉಮಾ :**— (ಶಶಿಯ ಪಾದವನ್ನು ಮುಟ್ಟಲು ಹೋಗಿ) ನನಗೆ ನಿಮ್ಮ ಪಾದದಲ್ಲಿ ಅಷ್ಟು ಸ್ಥಳವಾದರೆ ಸಾಕು !

**ಶಶಿ :**— (ಅವಳ ಕೈಹಿಡಿದು) ಉಮಾ! ಕೇವಲ ಒಂದು ಕಾಲು ಊನ ವಾದ ಮಾತ್ರಕ್ಕೇ ನೀನು ನಿನ್ನನ್ನ ಇಷ್ಟೊಂದು ಹೀನವಾಗಿ ಕಂಡುಕೊಳ್ಳ

ಬೇಕಾದ್ದಿಲ್ಲ; ಅಲ್ಲದೆ ನೀನು ಇತರ ಯಾವ ಹುಡುಗಿಯರಿಗಿಂತಲೂ ಯಾವ ವಿಚಾರದಲ್ಲೂ ನಿಕೃಷ್ಟವಾಗಿರುವೆಯೆಂದು ತಿಳಿಯ ಬೇಕಾದ್ದಿಲ್ಲ. ನಾನಂತೂ ನನ್ನ ಮಟ್ಟಿಗೆ ಹೇಳುವುದಾದರೆ, ನಿನ್ನ ಸಂತೋಷಕ್ಕೆ ಕೈಲಾದ್ದನ್ನು ಮಾಡಲು ಸಿದ್ಧವಾಗಿದ್ದೇನೆ. ಈಶ್ವರಕೃಪೆಯಿದ್ದರೆ ಇಂದಲ್ಲ ನಾಳೆ ನಿನಗೆ ಕಾಲು ಬಂದರೂ ಬರಬಹುದು ಬರಲೆಂದೇ ನಮ್ಮೆಲ್ಲರ ಬಯಕೆಯಲ್ಲವೇ ?

**ಉಮಾ.**— ಧಾರೆಯದಿನ ನಿಮ್ಮನ್ನು ನೋಡಿದಾರಭ್ಯ ನನಗಾಗಿ, ನನ್ನ ಸ್ಥಿತಿಗಾಗಿ ಕೊರಗುವುದನ್ನು ಬಿಟ್ಟು ಬಿಟ್ಟೆ. ಆದರೆ ಅದರ ಸ್ಥಳದಲ್ಲಿ ನಿಮಗಾದ ಮೋಸದ ಚಿಂತೆ ತಲೆಯಲ್ಲಿ ತುಂಬಿತು. ಸತ್ಯವಾಗಿಯೂ ನಿಮ್ಮಂಥವರಿಗೆ ಅಯೋಗ್ಯಳಾದ .......

**ಶಶಿ.**—(ಅವಳ ಬಾಯಿಮೇಲೆ ಕೈಯಿಟ್ಟು) ಉಮಾ! ಮತ್ತದೇ ಮಾತು. ನಾಕು ಬಿಡು. ಎಲ್ಲಿ! ಕಾಫೀ, ಕುಡಿದುಬಿಡೋಣ, ನಂತರ ನೀನು ನಾಗೋಲಿ ದಿವಸ ಹೇಳಿದ ಆ ಹಾಡು, ಹೇಳು ಕೇಳಬೇಕೆನ್ನಿಸಿದೆ. ದೇವರು ನಿನಗೊಳ್ಳೇ ದನಿ ಕೊಟ್ಟಿದಾನೆ ನನಗೊಳ್ಳೇ ಕಿವಿಯನ್ನ ಕೊಟ್ಟಿದಾನೆ.

**ಉಮಾ.**—(ಲೋಟವನ್ನು ಮುಟ್ಟಿ) ಕಾಫೀ ತಣ್ಣಗಾಗಿದೆ, ಬಿಸಿ ಮಾಡಿಸಿ ತರುತ್ತೇನೆ

**ಶಶಿ.**—ಈದಿನ ಬಿಸಿ ಕಾಫೀ ಕುಡಿಯಬಾರದು. ಹಾಂ! ತಗೋ ಕುಡಿದು ಬಿಡು.

[ಇಬ್ಬರೂ ಒಬ್ಬರನೊಬ್ಬರು ನೋಡಿಕೊಂಡು ನಸುನಗುತ್ತಾ ಕಾಫಿಯನ್ನು ಕುಡಿದು ಬಿಡುವರು.]

**ಶಶಿ:**—ಎಲ್ಲಿ ಆ ಹಾಡು ಹೇಳು.

**ಉಮಾ:**—ನಿಮ್ಮ ಮುಂದೆ ಹಾಡು ಹೇಳ್ತೋದಕ್ಕೆ ನಾಚಿಕೆಯಾಗುತ್ತೆ.

**ಶಶಿ:**—ಆ ನಾಚಿಕೆಯೇ ಹೆಂಗಸರಿಗೆ ಒಂದು ಆಭೂಷಣವಲ್ಲವೇ!! ಅವರ ನಾಚಿಕೆಯೇ, ಸಹಜವಾದ ಲಜ್ಜೆಯೇ ಒಂದು ಸೌಂದರ್ಯ. ನಮ್ಮೂರಿನಲ್ಲಿ ಈ ನಾಚಿಕೆಯೊಂದನ್ನ ಕಿತ್ತೆಸೆದ ಎಷ್ಟೋ ಸುಂದರಿಯರನ್ನ ನೋಡುತ್ತಿರುತೇನೆ ಅವರು ಏನೋ ಒಂದು ಅಪೂರ್ವವಾದ ಹೆಣ್ಣುತನವನ್ನು ಕಳದುಕೊಂಡವರ ಹಾಗೆ ಕಾಣಿಸಿ, ಅವರ ಆ ಸೌಂದರ್ಯ ಕಾಗದದ ಹೂವಿನಂತೆ

ನಿರ್ಜೀವವಾಗಿರುತ್ತೆ. ಹೇಳು ಹೇಳು ! ನಿಮ್ಮ ತಂದೆಯೇನೋ ಮನೇಲಿ ದ್ದಾರಂತೆ. ದಾಸ ಹೊರಗಡೆ ಬಾಗಿಲಬಳಿ ಇರುತಾನೆ. ನಿಮ್ಮ ತಾಯೀ?

**ಉಮಾ** :—ಹಿಂದೆ, ಅಡುಗೇ ಮನೇಲಿ.

**ಶಶಿ** :—ಸರಿಮತ್ತೆ. ಎಲ್ಲಿ – ಹಾಡು - ನಿಮ್ಮ ತಾಯಿ ಮತ್ತೆ ಕೂಗಿ ಬಿಟ್ಟಾರೂ.

**ಉಮಾ** :—ಯಾವ ಹಾಡು?

**ಶಶಿ** :— ನಾಗೋಲಿಯ ದಿವಸ........ಅಂ.......

**ಉಮಾ** :—ಅಡಕೆಲೆ ಕೊಡುವಾಗ ಹೇಳಿದ್ದೇ ?

**ಶಶಿ** :— ಅದೇನೋ .....ಪ್ರೇಮಾ - ಜೀವನಾಂತ. .. ಬರುತ್ತೆಲ್ಲಾ, ಅದು.

**ಉಮಾ** .— ಪ್ರೇಮಜೀವನ ಶಾಂತಿಯ ಸದನ .. . ಅನ್ನೋದೇ.

**ಶಶಿ** — ಹಾಂ ಹಾಂ, ಅದೇ ಅದೇ.

**ಉಮಾ**.—(ಶಶಿಯಕಡೆಗೊಮ್ಮೆ ನೋಡಿ ನಾಚಿ, ಕತ್ತನ್ನು ತಗ್ಗಿಸಿ) ಮೆಲು ದನಿಯಲ್ಲಿ ಹಾಡುವಳು. ಬರುಬರುತಾ ದನಿಯು ತುಂಬಿಬರುವುದು.

ಪ್ರೇಮಜೀವನ ಶಾಂತಿಯಸದನ
ಸುಖಸಂತಸದ ನಿದಾನ ||
ಪ್ರೇಮವಾಹಿನೀಮಂಜುಳ ಮೋಹಿನೀ |
ಸಿರುಸುಖ ಸ್ವರ್ಗದ ರಾಣಿ ||
ಪ್ರೇಮವನಂತ ನಿರುತವಸಂತ
ರಾಗದ್ವೇಷಕತೀತ
ಪ್ರೇಮವುಸೌಮ್ಯ ಸುಶಾಂತ ಸುರಮ್ಯ
ಮಮ-ತವ ಮದಕತೀತಾ ||

**ಶಶಿ** :—ಇಷ್ಟು ಬೇಗ ಮುಗಿಸಿಬಿಟ್ಟೆಯಾ ?

[ಒಳಗಡೆಯಿಂದ "ಉಮಾ ' ಪೂಜೆಗೆ ಬರುತೀಯಾ? ' ಎಂಬ ಸರಸ್ವತ್ತಮ್ಮನ ಕೂಗು.]

**ಉಮಾ** :— ನಾನು ಪೂಜೆಗೆ ಹೊರಡಲೇ ? ತಡವಾದರೆ ಊಟಕ್ಕೆ ಹೊತ್ತಾಗುತ್ತೆ!

**ಶಶಿ** :—ಪೂಜೆ ಊಟಗಳಾದಮೇಲೆ ಮತ್ತೀ ರೂಮಿಗೆ ಬರುತೀತಾನೆ?

**ಉಮಾ** :—(ನಾಚಿಕೆಯಿಂದ ಕತ್ತು ತಗ್ಗಿಸಿ) ಹೂಂ!

**ಶಶಿ** :—ಆಗ ಇದೇ ಹಾಡನ್ನ ಇನ್ನೂ ಮೂರು ನಾಲ್ಕುಸಲ ಹಾಡಬೇಕು.

[ಉಮಾ ಶಶಿಯು ಕಡೆಗೊಮ್ಮೆ ಕೃತಜ್ಞತೆಯ ನೋಟವನ್ನು ಬೀರಿ, ಕುರ್ಚಿಯನ್ನು ತಳ್ಳಿಕೊಂಡು ಒಳಕ್ಕೆ ಹೋಗುವಳು]

**ಶಶಿ** :—(ಅತ್ತಕಡೆಯೇ ನೋಡುತ್ತಿದ್ದು) ಹುಟ್ಟಿನಲ್ಲಿ ಸ್ವಲ್ಪ ಕುಂದು ಬಂದರೆ, ಜೀವ ಎಷ್ಟು ಕುಗ್ಗಿ ಹೋಗುತ್ತೆ! .. .. ಪಾಪ! ಪಾಪ!!

[ಇತ್ತಲಿಂದ ದಾಸ ಬಂದು ಕೈ ಜೋಡಿಸಿ ನಿಲ್ಲುವನು.]

**ಶಶಿ** :—ಏನು ದಾಸಪ್ಪಾ ಸಮಾಚಾರ?

**ದಾಸಾ** :—ರಾಯರು ತಮ್ಮನ್ನ ಮಹಡಿ ಮೇಲಕ್ಕೆ ಬರೇಳುತಾರೆ ಬುದ್ದೀ.

**ಶಶಿ** :—ಬಂದೇ!

[ಶಲ್ಯವನ್ನು ಹೊದೆದು ದಾಸನನ್ನು ಹಿಂಬಾಲಿಸಿ ಹೋಗುವನು.]

---

## ಅಂಕ ೨ - ಪ್ರವೇಶ ೩

[ಪಾರ್ಕಿನ ಮೂಲೆಯಲ್ಲಿನ ಒಂದು ಮರದ ಬೆಂಚಿನ ಮೇಲೆ ವಿಷಕಂಠಯ್ಯ ಮತ್ತೂ ಈಶ್ವರಯ್ಯ ಇಬ್ಬರೂ ಕುಳಿತಿರುವರು. ಈಶ್ವರಯ್ಯನು ಸಿಟ್ಟಾಗಿರುವನು. ವಿಷಕಂಠಯ್ಯನು ಅವನನ್ನು ಸಮಾಧಾನಪಡಿಸಲು ಸರ್ವಪ್ರಯತ್ನವನ್ನೂ ಮಾಡುತ್ತಿರುವನು.]

**ಈಶ್ವರಯ್ಯ :**—ಸಾಕು ನಿಲ್ಲಿಸಯ್ಯಾ ನಿನ್ನ ಹರಿಕಥೇನ! ನೀನು ಒಳೊಳಗೇ ಏನೇನೋ ಪ್ಲಾನಗಳನ್ನಿಟ್ಟುಕೊಂಡು, ನಿನ್ನ ಮೂಗಿನ ನ್ಯಾರಕ್ಕೆ ನನ್ನೂ ಎಳೆದಾಡಿ ತಂದು ನಿಲ್ಲಿಸಿ, ಈಗ ನನಗೇ ಉಪದೇಶ ಮಾಡುತೀದೀಯಾ?

**ವಿಷಕಂಠಯ್ಯ :**—ನೋಡಿ ಈಶ್ವರಯ್ಯನೋರೆ! ಪ್ರಪಂಚದಲ್ಲಿ ಸ್ವಾರ್ಥವಿಲ್ಲದೆ ಯಾವ ಹುಲ್ಲು ಕಡ್ಡೀ ಸಹಾ ಅಲುಗಾಡೋದಿಲ್ಲ. ಯಾಜ್ಞವಲ್ಕ್ಯರು ಹೇಳಿರೋಹಾಗೇ ನಮ್ಮ ಹೆಂಡತಿ ಮಕ್ಕಳೂ ನಮ ಪ್ರಿಯವಾಗಿರೋದು ನಮ್ಮ ಸ್ವಾರ್ಥಕ್ಕೆ ಹಿತವಾಗಿರೋವಾಗ-ಅಷ್ಟೇ, ನಾನೂ ನಾಲ್ಕು ಜನದಂತೆ ಸಂಸಾರವಂದಿಗ ಮನೇಲಿ ಮದುವೆಗೊಂದು ಹೆಣ್ಣಿದೆ ನಿಮಗೆ ದೇವರು ಕೊಟ್ಟಿರೋ ಹಾಗೇ ನನಗೆ ಮನೆ ಮಠ ಗದ್ದೇ ಏನೂ ಕೊಟ್ಟಿಲ್ಲ. ಆದರೆ ಬುದ್ಧೀ ಒಂದು ಸಾಕಾದಷ್ಟು ಕೊಟ್ಟಿದಾನೆ ನಾನು ತಾನೇ ಇನ್ನೊಬ್ಬರ ಸಂಸಾರಕ್ಕೆ ಪ್ರವೇಶಿಸಿ, ಅವರ ಹೆಂಡತಿ ಮಕ್ಕಳು, ಕಡೇಗೆ ಅವರಿಂದಾನೇ ಬೈಗಳ ತಿನ್ನಬೇಕಾದರೆ, ಸ್ವಾರ್ಥವಿಲ್ಲದೆ, ಸುಮ್ಮ ಸುಮ್ಮನೇ ಹಾಗೆ ಮಾಡೋವಕ್ಕೆ ಹುಚ್ಚೇ ಸ್ವಾಮಿ........

**ಈಶ್ವರಯ್ಯ :**—ಸ್ವಾರ್ಥ ಅಂದರೆ ಇನ್ನೊಬ್ಬರ ಮನೆ ಮುಳುಗಿಸೋ ಅಷ್ಟು ಸ್ವಾರ್ಥವೇ ?

**ವಿಷಕಂಠಯ್ಯ :**—ನಿಮ್ಮನೆ ಈಗೇನು ಸ್ವಾಮಿ ಮುಳುಗಿರೋದು. ವರೋಪಚಾರದ್ದು ಸಾವಿರಾರು ರೂಪಾಯಿ ವಡವೇ ವಸ್ತುಗಳ ಜೊತೆಗೇ ನಗದು ಐದುಸಾವಿರ ರೂಪಾಯಿ ತಂದು ಮನೇ ತುಂಬಿಸಿಕೊಂಡರಲ್ಲ—ಆ ದುಡ್ಡಿನ ಭಾರಕ್ಕೇನಾದರೂ ಮನೆ ಮುಳುಗುತಾ ಇದೆಯೋನೋ ........ ಅಲ್ಲವೇ ?

**ಈಶ್ವರಯ್ಯ :**—ಐದುಸಾವಿರ ರೂಪಾಯಿನಲ್ಲೂ ಐನೂರು ನೀನು ನುಂಗಿದೆಯಲ್ಲಾ ?

**ವಿಷಕಂಠಯ್ಯ** :—ತುಂಬಾ ನಷ್ಟವಾಯಿತು ಸ್ವಾಮೀ ನಿಮಗೇ? ಅಲ್ಲವೇ? ಪಾಪ! ಅನಾಯಾಸವಾಗಿ ಬಂದ ದುಡ್ಡಿನಲ್ಲಿ ಕೊಡಬೇಕಾದ್ದನ್ನ ಕೊಟ್ಟಿದ್ದಕ್ಕೇ ಇಷ್ಟು ಆಕ್ರೋಶವೇ? ಇನ್ನು ಮಿಡಿದ ದುಡ್ಡಿನಲ್ಲಿ ಒಂದು ರೂಪಾಯೇನಾದರೂ ಕೊಟ್ಟು ಬಿಟ್ಟಿದ್ದರೆ .......ದೇವರೇ ಗತಿ.

**ಈಶ್ವರಯ್ಯ** :—ಅಲ್ಲಯ್ಯಾ! ಆ ಗೋಪೀನಾಥರಾಯನಿಂದ ಜೇಠಿ ಎಂಟುನೂರು ರೂಪಾಯಿ ತಗೊಂಡು, ಸಾಲದಕ್ಕೇ ನನ್ನಿಂದ ಜೇಠಿ........

**ವಿಷಕಂಠಯ್ಯ** :—ಗೋಪೀನಾಥರಾಯ ನನ್ನ ಕಷ್ಟನೋಡಿ ನನಗೆ ಕೊಟ್ಟಿದ್ದಕ್ಕಾ ನಿಮಗೆ ಹೊಟ್ಟೇ ತಳಮಳವೇ ಸ್ವಾಮೀ?..... ...

**ಈಶ್ವರಯ್ಯ** —ನೀನು ಹೀಗೆ ದುಡ್ಡಿನಾಶೆಗೋಸ್ಕರ ನನಗೆ ಟೋಪೀ ಹಾಕುತ್ತೀಯೋ ಅನ್ನೋದು ನಾನು ನನ್ನ ತಲೇಗೂ ಹೊಳಿದೇ ಹೋದದ್ದು ನನ್ನ ದುರಾದೃಷ್ಟ.

**ವಿಷಕಂಠಯ್ಯ** .—ನೀವೂ ದುಡ್ಡಿನಾಶೆಗೋಸ್ಕರವೇ . ಅಲ್ಲವೇ ಸ್ವಾಮೀ ಹಸೇಮಣೇಲಿ ಕೂತು ಮುಗ್ಧ ಮಗನಕೈಲಿ ಆ ಹೆಳವೀಗೆ ತಾಳೀಕಟ್ಟಿಸಿದ್ದೂ?

**ಈಶ್ವರಯ್ಯ** :—ಹೌದೂನ್ನ........ನಾನು ಆ ಹುಡುಗನಿಗಾಗಿ ತೆತ್ತ ದುಡ್ಡು ವಾಪಸ್ಸು ಬರಲೀಂತ ಇಂಥಾ ಅವಿವೇಕಕ್ಕೆ ಒಪ್ಪಿದೆ.... ...

**ವಿಷಕಂಠಯ್ಯ** —ನಾನೂವೇ ನನಗಿರೋ ಆ ಹುಡುಗೀನ ಬಾಳ್ವೋನ ಕೊರಳಿಗಾದರೂ ಗಂಟು ಹಾಕಿ ಕಳಿಸಿಬಿಡೋಣಾಂತ ಹೇಳಿ ಆ ಬರೋನ ಬಾಯಾರಿಕೇಗೆ ತೀರೋಕೋಸ್ಕರ ಈ ಅವಿವೇಕದ ಮಧ್ಯಸ್ಥಿಕೇಗೆ ಕಂಕಣ ಕಟ್ಟಿಕೊಂಡೆ

**ಈಶ್ವರಯ್ಯ** .—ಈಗೇನ್ಲೆ ಚರ್ಚೆಮಾಡಿದರೂ ಏನೂ ಪ್ರಯೋಜನ ವಿಲ್ಲ. ಮೂಗು ಕೊಯ್ದು ಕೊಟ್ಟು ಕನ್ನಡಿ ಹಿಡಿಕೊಂಡಹಾಗಾಯಿತು.

**ವಿಷಕಂಠಯ್ಯ** :—ಬಿಟ್ಟು ಬಿಡಿ ಹಾಗೇ. ನಾನೇನಾದರೂ ಹುಡುಗೀ ವಿಚಾರ ನಿಮ್ಮಿಂದ ಬಚ್ಚಿಟ್ಟು, ನಿಮಗೆ ಸುಳ್ಳುಪಳ್ಳು ಹೇಳಿ, ಎಳಕೊಂಡು ಹೋಗಿ ಬಲವಂತದಿಂದ ಮದುವೆ ಮಾಡಿಸಿದ್ದರೆ ನನ್ನ ತಪ್ಪು-ಒಪ್ಪಿ ಕೊಳ್ಳುತೀನೆ. ಹುಡುಗೀ ವಿಚಾರ ಇರೋಕಿಂತ ಹೆಚ್ಚು ಅವಲಕ್ಷಣ ಕಲ್ಪನೇ

ಮಾಡಿ ನಾನೇ ನಿಮಗೆ ಹೇಳಿದೇನೆ. ಶೇಕಡ ಹತ್ತರಂತೆ ಬರೋ ವರದಕ್ಷಿಣೇಲಿ ಕಮೀರ್ಷ ಕೊಡೋಕೆ ನೀವೇ ಒಪ್ಪಿದೀರಿ.........

**ಈಶ್ವರಯ್ಯ**:—ಅದು ಸರಿಕಾಣಯ್ಯಾ! ನೀನು ಗೋಪೀನಾಥರಾಯನ ಕಡೆಯಿಂದ ಎಂಟುನೂರು ರೂಪಾಯಿ ತಗೊಂಡ ಸಂಗತೀನ ನನ್ನಿಂದ ಮರೆ ಮಾಚಿ, ನನ್ನ ಕೈಯಿಂದ ಬೇರೆ ನಿನ್ನ ಶೇಕಡಾ ಹೇಗೆ ತೆರಿಸಿದೆ?

**ವಿಷಕಂರಯ್ಯ**:—ಅಲ್ಲಾ ಸ್ವಾಮೀ! ಗೋಪಿನಾಥರಾಯ ಕೊಟ್ಟ ಎಂಟುನೂರು ರೂಪಾಯಿಗೂ ನಿಮಗೂ ಏನು ಸಂಬಂಧ? ಅದೇನಾದರೂ ನಿಮ್ಮ ಪಿತ್ರಾರ್ಜಿತವೋ?

**ಈಶ್ವರಯ್ಯ**:—ಅವನ ಹತ್ತಿರಾನೂ ತಗೊಂಡಿದೀನೀಂತ ನೀನು ಯಾಕೆ ನನಿಗೆ ತಿಳಿಸಲಿಲ್ಲ?

**ವಿಷಕಂಠಯ್ಯ**—ನಿಮಗೆ ಅದನ್ನೆಲ್ಲಾ ತಿಳಿಸ ಬೇಕೂಂತ ಏನು ಕಾನೂನು? 'ಬಿ ಎ. ಮಾಡಿದ ಗಂಡನ್ನ ಸೆಟಲ್‌ಮಾಡಿಕೊಟ್ಟರೆ ಐನೂರು ರೂಪಾಯಿ, ಎಂ ಎ. ಮಾಡಿದ ವರನ್ನ ಗೊತ್ತುಮಾಡಿಕೊಟ್ಟರೆ ಎಂಟುನೂರು ರೂಪಾಯಿ ಕಮೀಷನ್ನೇ ಕೊಡುತೀನೀಂತ' ಹೇಳಿದ್ದರು ಅದರಂತೆ ಕೊಟ್ಟರು. ಇದಕ್ಕೆ ನಿಮಗೇನು ಸ್ವಾಮಿ ದುಗ್ಧೀ?

**ಈಶ್ವರಯ್ಯ**:—ಅಲ್ಲೂ ತಗೊಂಡು ಎಂಟುನೂರರ ಗಂಟನ್ನ, ನನ್ನ ಹತ್ತಿರವೂ ಐನೂರು ಹಿರಿದೆಯಲ್ಲಾ—ಇದು ನ್ಯಾಯವೇಂತ?

**ವಿಷಕಂರಯ್ಯ**:—ನಿಮಗೆ ನಾನು ನ್ಯಾಯ ಒಪ್ಪಿಸೋಕೆ ಕೂತಿಲ್ಲ. ಅಲ್ಲದೇ ನೀವಂಥ ನ್ಯಾಯ ಮೂರ್ತಿಗಳೇನೂ ಅಲ್ಲ. ಮೂರು ಸಾವಿರ ರೂಪಾಯಿ ಖರ್ಚುಮಾಡಿ—ಅದರಲ್ಲಿ ಮಗನ ಊಟ ತಿಂಡಿ, ಬಟ್ಟೆಬರೆ, ಪುಸ್ತಕ ಫೀಜು ಎಲ್ಲಾ ಮುಗಿಸಿ, ಅವನ್ನ ನಾಲ್ಕುವರೆ ಸಾವಿರ ರೂಪಾಯಿಗೆ ಮಾರಿ ದೀರಲ್ಲ, ಇದು ಮಹಾ ನ್ಯಾಯವಲ್ಲವೇ? ಪಾಪ!!

**ಈಶ್ವರಯ್ಯ**:—ವಿಷಕಂರಯ್ಯ; ನೀನು ನನ್ನ ಹೊಟ್ಟೆ ಉರಿಸಬೇಡ ಈಗ ನಿನ್ನ ಮಾತಿನಂತೆ ಐನೂರು ರೂಪಾಯಿ ತೆತ್ತು ಕೂತಿದೀನಲ್ಲಾ; ಅಲ್ಲದೇ ಒಂದು ದಿವಸ ಮಾತ್ರ ಅಲ್ಲಿದ್ದ ಶಾಸ್ತ್ರ ಮಾಡಿಕೊಂಡು, ಬೇಗ ಬಂದುಬಿಡೂಂತ ಹೇಳಿ ಆ ಅಯೋಗ್ಯನ್ನ ಕಳಿಸಿದರೆ, ಹೋಗಿ ಒಂದು ವಾರ

ನಾಗಿ ಹೋಯಿತು--ಅವನೂ ಹಿಂದಿರುಗಲಿಲ್ಲಾ !! ಇದಕ್ಕೆಲ್ಲಾ ಯಾರಯ್ಯಾ ಹೊಣೇ ?

**ವಿಷಕಂಠಯ್ಯ**:—ನೀವೇ ಹೊಣೆ ! ನಿಮ್ಮ ಗೃಹಕೃತ್ಯಕ್ಕೆ, ನೀವು, ನಿಮ್ಮ ಹೆಂಡತಿ, ಮಗ ಮಾಡೋದಕ್ಕೆಲ್ಲಾ ಹೊರಗಿನೋರು ಯಾರು ಹೊಣೆ ಯಾಗುತಾರೆ ಸ್ವಾಮೀ ?

**ಈಶ್ವರಯ್ಯ**:—ನನಗೆ ಎರಡು ಕಡೇ ದುಡ್ಡಿನಾಶೆ ತೋರಿಸಿ, ಮರುಳು ಮಾಡಿ, ನಾನು ನನ್ನ ಹೆಂಡತೀ ಆಶೇಗೆ ಮಣ್ಣೆರಚಿ, ಅವಳಿಷ್ಟಕ್ಕೆ ವಿರುದ್ಧವಾಗಿ, ಮಗನ ಕೈಹಿಡಿದು ಹೆಳವೀಗೆ ತಾಳೀ ಕಟ್ಟಿಸೋ ಹಾಗೆ ಪುಸಲಾಯಿಸದೋನು ಯಾರಯ್ಯ ? ನೀನೇ ಅಲ್ಲವೇನಯ್ಯಾ ?

**ವಿಷಕಂಠಯ್ಯ**:—ಹೇಗಿದೇ ಸ್ವಾಮೀ ! ನೋಡೀ ವಿಚಾರ ಮಾಡೀಂತ ಹೇಳಿದಾಕ್ಷಣಕ್ಕೆ ಮುಂದಾಗೋದಕ್ಕೆ ಹೋಗೋದಕ್ಕೆಲ್ಲಾ ನಾನು ಹೊಣೆಯೇ ? ಚೆನ್ನಾಗಿದೆ.

**ಈಶ್ವರಯ್ಯ**:—ಈಗ ನನ್ನ ಮನೆ ಮುಳಿಗಿ ಹೋಗುತಾ ಇದೆ ಬುಲ್ಲಯ್ಯಾ ! ಇಂಥ ಸಂದರ್ಭದಲ್ಲೂ ನೀನು ಅಲಕ್ಷ್ಯಾಗಿದುಬಿಡುತೀಯಾ ! ಹಾಗಾದರೇ ಆ ನಾಗೇಂದ್ರರಾಯರ ಮಗಳ ವಿಚಾರ ಕೈಬಿಟ್ಟು ಬಿಡು ತೀಯಾ ? ನಿನ್ನನ್ನ ನಂಬಿದ್ದಕ್ಕೆ ಇಂಥ ಮೋಸವೇ ? ಹುಡುಗನ ಭವಿಷ್ಯದ ಗತಿಯೇನು ? ಹೀಗೆ ನನ್ನ ಮನೆ ಹಾಳುಮಾಡೋದೇ ? !

**ವಿಷಕಂಠಯ್ಯ**:—ನೋಡೀ; ನೀವು ನನಗೆ ಬರೋ ಎರಡೂವರೆ ಕಾಸಿಗೆ ದುಗ್ಧ ಪಡೋದನ್ನ ಬಿಟ್ಟು ಬಿಟ್ಟು, ನಾನು ಹೇಳಿದಹಾಗೆ ಕೇಳೋ ದಕ್ಕೆ ಒಪ್ಪಿ ಸಮಾಧಾನಕ್ಕೆ ಬಂದರೆ, ನಾನು ಕೈಲಾದ ಸಹಾಯ ಮಾಡ ಬಹುದು. ಜೇನು ಕಿತ್ತು ನಿಮ್ಮ ಕೊಡಕ್ಕೆ ಹಿಂಡಿ, ಕೈ ನೆಕ್ಕಿಕೊಂಡರೂ ನಿಮಗೆ ಸಂಕಟವಾದರೆ, ನಾನು ನಿಮಗೋಸ್ಕರ ದುಡಿಯೋದೂಬೇಡ ; ನೀವು ದುಗ್ಧ ಪಡೋದೂಬೇಡ !

**ಈಶ್ವರಯ್ಯ**:—ಇದು ಶುದ್ಧ ಮೋಸವಲ್ಲವೇ ? ಹೆಳವೀಗೆ ತಾಳಿ ಕಟ್ಟಿದ ಆರುತಿಂಗಳಿಗೇ, ನಾಗೇಂದ್ರರಾಯನ ಮಗಳನ್ನ ಗೊತ್ತುಮಾಡಿ ಕೊಡುತೀನೀ ಅನ್ನೋ ಕಂಡಿಷನ್ ಮೇಲಲ್ಲವೇ ನೀನು ಈ ಅನ್ಯಾಯದ ಮದುವೇಗೆ ನನ್ನನ್ನ ಒಪ್ಪಿಸಿದ್ದೂ ?

ವಿಷಕಂಠಯ್ಯ :—ಅನ್ಯಾಯಾ! ಅನ್ಯಾಯಾ!! ಅಂತ ನೀವು ಕೂಗಾಡಬ್ಯಾಡಿ. ಏನನ್ಯಾಯವಾದ್ದು? ಹುಡುಗನಿಗೆ ಒಂದು ಸೆಟ್ಟು ಬಟ್ಟೆಬರೆ, ಬೆಳ್ಳಿ ಪಾತ್ರೆಗಳು, ಪದಾರ್ಥಗಳು, ನಗದು ನಾಲ್ಕುವರೆಸಾವಿರ ಇದೆಲ್ಲಾ ಬಂದದ್ದು ಅನ್ಯಾಯವೇ?

ಈಶ್ವರಯ್ಯ :—ನಿನ್ನ ನಾಲ್ಕುವರೆ ಮನೆ ಹಾಳಾಯ್ತು! ಹುಡುಗ ಹೋಗಿ ಅಲ್ಲಿ ಸಿಕ್ಕಿಹಾಕಿಕೊಂಡುಬಿಟ್ಟಿದಾನೆ. ಕುರುಡೀನೇ ಚಂದಕ್ಕನ್ನ ಮಾಡಿಕೊಂಡು ಅವರ ಜೇಳ್ವೆ ಮಾತಿಗೆ ಮರುಳಾಗಿಬಿಟ್ಟು, ಆ ಹೆಳವೀನೇ ಹೆಂಡತೀಂದುಕೊಂಡು ಬಿಟ್ಟರೆ, ನನ್ನ ಮನೆ ಹಾಳಾಗಿ ಹೋಗಿ ಬಿಡುತ್ತಲ್ಲಯಾ!

ವಿಷಕಂಠಯ್ಯ :—ನೀವು ಬರೀ ಆ ವಿಚಾರಗಳನ್ನ ಹೇಳಿಕೊಳ್ಳಿ—ನಾನು ದೇವರು ನನಗೆ ಕೊಟ್ಟಿರೋ ಬುದ್ಧೀಲಿ ತೋಚಿದ ಉಪಾಯಾನ ನಿರ್ವಂಚನೆಯಾಗಿ ಹೇಳುತ್ತೇನೆ.

ಈಶ್ವರಯ್ಯ :—ಈಗ ನಾಗೇಂದ್ರರಾಯರ ಮಗಳ ಸಂಗಡ ಶಶಿ ಮದುವೆಮಾಡಿಸೋದು ನಿನ್ನ ಜವಬ್ದಾರೀಂತ ಒಪ್ಪಿಕೊಳ್ಳುತೀಯಾ ಇಲ್ಲವೇ?

ವಿಷಕಂಠಯ್ಯ :—ನಾನು ಮದುಮಗರದ ವ್ಯವಹಾರದಲ್ಲಿ ಕೈಹಾಕಿ ಇಬ್ಬರನೂ ಸಮಾಧಾನವಾಗಿ ನಡೆಸಿಕೊಂಡು ಬಂದು ಸೇವಿಸಿದ್ದಕ್ಕೆ, ನನ್ನ ಶ್ರಮಕ್ಕೆ ತಕ್ಕಷ್ಟಲ್ಲದಿದ್ದರೂ, ಯತ್ಕಿಂಚಿತ್ ದುಡ್ಡು ತಗೊಂಡರೇ, ನೀವು ಹೀಗೆ ಸಂಕಟಪಟ್ಟುಕೊಂಡು ಎರಗಿ ಬೀಳೋಲ್ಲಾಂತ ಆಣೆ ಇಟ್ಟುಕೊಂದರೇ, ಮತ್ತೆ ನಿಮ್ಮ ಮನೇ ವ್ಯವಹಾರಕ್ಕೆ ಮನಸ್ಸು ಕೊಡುತೇನೆ. ಇಲ್ಲದಿದ್ದರೆ ನೀವು ನೀವೇ, ನಾನು ನಾನೇ. ಏನು ನಾಗೇಂದ್ರರಾಯರ ಮಗಳು—ಭಾಗ್ಯಲಕ್ಷ್ಮೀ ಇದ್ದಹಾಗೇ ಇದಾಳೆ ರಮಾ—ಅವಳಿಗೆ ಗಂಡು ಸಿಕ್ಕೋಲ್ಲವೇ? ಎಂ. ಎ. ಮಾಡಿದೋವು ಗಂಡುಗಳು ಬೇಕಾದಷ್ಟಿವೇ ನನ್ನ ಲಿಸ್ಟಿನಲ್ಲೀ. ನಿಮ್ಮ ಮಗ ಒಬ್ಬನೇ ಅಲ್ಲ.

ಈಶ್ವರಯ್ಯ :—ವಿಷಕಂಠಯ್ಯ! ನೀನು ಉರಿಯೋ ಗಾಯಕ್ಕೆ ಉಪ್ಪು ತುಂಬೋ ವಿದ್ಯ ಬಿಟ್ಟು, ನಿನ್ನ ಹಿಂದಿನ ಮಾತುಳಿಸಿ ಕೊಳ್ಳುತೀಯಾ, ಇಲ್ಲಾ ಹೀಗೇ ನನಗೆ ಮೋಸಮಾಡಿ ನಡು ನೀರಿನಲ್ಲಿ ನನ್ನ ಮನೆ ಮುಳುಗಿಸಿ

ಹೊರಟು ಹೋಗುತ್ತೀಯಾ? ಹೇಳಿಬಿಡು - ನಾನಂತೂ ನಮ್ಮಪ್ಪನಾಣೇ ನಿನ್ನ ಕಮೀರ್ಷ ವಿಚಾರಕ್ಕೆ ಬಾಯಿ ಹಾಕೊಲ್ಲ.

**ವಿಷಕಂಠಯ್ಯ** :—ನೀವು ನಿಮ್ಮ ಕಡೇ ಮಾತೊಂದನ್ನ ಹುಷಾರಾಗಿ ನಡೆಸಿಕೊಂಡು ಬನ್ನಿ; ಮಿಕ್ಕದ್ದನ್ನ ನನಗೆ ಬಿಡಿ. ನಾನೂ ಕೈಲಾದ ಸಹಾಯ ಮಾಡುತ್ತೇನೆ.

**ಈಶ್ವರಯ್ಯ** :—ಈಗ ಆ ಹುಡುಗನ್ನ ಗೋಪೀನಾಥರಾಯನ ಮನೆಯಿಂದ ಕರೆಸಿ ಬಿಡಬೇಕಲ್ಲ - ಏನು ಮಾಡೋದು?

**ವಿಷಕಂಠಯ್ಯ** :—ಒಂದು ಕಾಗದ ಹಾಕೀ ಸ್ವಾಮೀ ಬಂದು ಬಿಡುತಾನೆ.

**ಈಶ್ವರಯ್ಯ** :—ಈ ಎಂಟು ದಿವಸದಲ್ಲಿ ಮೂರು ಕಾಗದಗಳಾಯಿತಲ್ಲಾ; ಎಲ್ಲಾ ಅರ್ಜಂಟೇ? ಒಂದಕ್ಕೂ ಜವಾಬೇ ಇಲ್ಲ.

**ವಿಷಕಂಠಯ್ಯ** :—ಹೌದು ಎಂಟು ದಿನದಿಂದಲೂ ಶಶಿ ಅಲ್ಲೇ ಇದಾನೇಂತ ಏನು ಗ್ಯಾರಂಟಿ?

**ಈಶ್ವರಯ್ಯ** :—ಇರದೇ ಎಲ್ಲಿ ಹೋದಾನು?

**ವಿಷಕಂಠಯ್ಯ** :—ಅವನ ಸ್ನೇಹಿತ ಅನಂತನೂರಿಗೆ ಹೋಗಿರಬಹುದು.

**ಈಶ್ವರಯ್ಯ** :—ಅಯ್ಯೋ! ಆ ಹುಡುಗ ಆಸ್ರಿಕಕ್ಕೆ ಹೊರಟು ಹೋದ ಸರ್ವಿಸ್ಸಿಗೇ!

**ವಿಷಕಂಠಯ್ಯ** :—ಅವನ ತಂಗಿ ಇಲ್ಲಿವೇ ಸ್ವಾಮೀ ಶಶಿ ಮದುವೆ ಮಾಡಿಕೋಬೇಕೂಂತಿದ್ದದ್ದು?

**ಈಶ್ವರಯ್ಯ** :—ಆ ಹುಡುಗೀ ಪೂನಾದಲ್ಲೊಂದು ಅಬಲಾಶ್ರಮದಲ್ಲಿ ದೆಯಂತೆ. ಅವಳಣ್ಣನೇ ಕರೆಕೊಂಡು ಹೋಗಿ ಸೇರಿಸಿಬಿಟ್ಟು, ಮುಂದಕ್ಕೆ ಹೋದನಂತೆ.

**ವಿಷಕಂಠಯ್ಯ** :—ಶಶಿ ಪೂನಾಕ್ಕೆ ಹೋಗಿರಬಹುದು.

**ಈಶ್ವರಯ್ಯ** :—(ಗಾಬರಿಗೊಂಡು) ಹೌದೆ, ಹಾಗೂ ಮಾಡಿಯಾನೇ?

**ವಿಷಕಂಠಯ್ಯ** :—ಮಾಡೋದೇನು ಸ್ವಾಮೀ! ನಿಮ್ಮನ್ನ ಮೆಚ್ಚಿಸೋಕೆ ಒಲ್ಲದ ಹುಡುಗೀಗೇ ತಾಳಿ ಕಟ್ಟಿ ಆಯಿತು. ಇನ್ನು ನಿಮ್ಮ ಅತಂಕವೇನು?

**ಈಶ್ವರಯ್ಯ** :— ಈಗ ಗತಿಯೇನು? ಭಗವಂತಾ! ನಾನು ಒಪ್ಪೆತ್ತು ಹೋಗಿ ಬರಲೀಂತ ಕಳಿಸಿದ್ದೇ ತಪ್ಪಾಯಿತೇ ?

**ವಿಷಕಂಠಯ್ಯ** :— ಮುಂಚೆ ಗೋಪೀನಾಥರಾವ್‌ಗೆ ನಾನು ಒಂದು ತಂತೀ ಕೊಡುತೀನಿ.

**ಈಶ್ವರಯ್ಯ** :— ಏನಂತಾ ?

**ವಿಷಕಂಠಯ್ಯ** :— ನಿಮಗೆ ಸಖ್ತ್ ಖಾಯಿಲೆಯಾಗಿಬಿಟ್ಟಿದೇ ಶಶೀನ ತಕ್ಷಣವೇ ಕಳಿಸಿಕೊಡೀಂತ.

**ಈಶ್ವರಯ್ಯ** :—ಆಮೇಲೆ ?

**ವಿಷಕಂಠಯ್ಯ** :— ಶಶಿ ಅಲ್ಲೇ ಇದ್ದರೆ ಕೂಡಲೇ ಬಂದುಬಿಡುತಾನೆ.

**ಈಶ್ವರಯ್ಯ** :— ಅಲ್ಲಿ ಇಲ್ಲದೇ ಹೋದರೇ ?

**ವಿಷಕಂಠಯ್ಯ** —ಇಲ್ಲದೇ ಹೋದರೆ ಸುದ್ದೀನ ತಿಳಿಸೇ ತಿಳಿಸುತಾರೆ.

**ಈಶ್ವರಯ್ಯ** :—ಹಾಗೆಲ್ಲಾ ಹೋಗಿರಲಾರ !

**ವಿಷಕಂಠಯ್ಯ** :— ಹೋಗದೇ ಆ ಹೆಳವಿ ಮುಂದೇ ಕೂತಿರುತಾನೆಯೇ ಸ್ವಾಮೀ ? ನಡೀರಿ ತಂತಿ ಕೊಡೋಣ.

**ಈಶ್ವರಯ್ಯ** :—(ಜೇಬಿಗೆ ಕೈಹಾಕಿ) ಪರ್ಸ್ ತಂದಿಲ್ಲವಲ್ಲಾ?

**ವಿಷಕಂಠಯ್ಯ** :— ನೀವೀ ಸಣ್ಣ ಪುಟ್ಟ ಖರ್ಚಿಗೆಲ್ಲಾ ಸಂಕೋಚ ಪಡಬೇಕಾಗಿಲ್ಲ. ನನಗೆ ದುಡ್ಡಿನ ದರ್ದು ಒದಗಿದಾಗ ನಿಮ್ಮ ಹತ್ತಿರ ಕೇಳುತೇನೆ. ಆಗ ಸಂತೋಷದಿಂದ ಕೊಟ್ಟರೆ ಸಾಕು. ಆವತ್ತು ಲಗ್ನಪತ್ರಿಕೇ ವಿಚಾರವಾಗಿ ಗೋಪೀನಾಥರಾವ್‌ನ ಬರಹೇಳೋದಕ್ಕೆ ತಂತೀ ಕೊಟ್ಟವಲ್ಲ ಅದಕ್ಕೂ ನಾನೇ ದುಡ್ಡು ಕೊಟ್ಟದ್ದೇನೆ. ಧಾರೇ ಹಿಂದಿನ ದಿನ ನೀವು ಚಿಲ್ರೆ ಇಲ್ಲಾಂದದ್ದಕ್ಕೆ ನಾನೇ ಆರು ರೂಪಾಯಿ ಹನ್ನೆರಡಾಣೆ ಚಿಲ್ರೆ ಕೊಟ್ಟದೇನೆ. ಆಮೇಲೆ........

**ಈಶ್ವರಯ್ಯ** :— ಎಲ್ಲಾ ಒಟ್ಟು ಎಷ್ಟಾಗಿದ ಹೇಳಿಬಿಡು; ಕೊಟ್ಟುಬಿಡುತೇನೆ.

**ವಿಷಕಂಠಯ್ಯ** .—ಎಲ್ಲಾ ನನ್ನ ಪುಸ್ತಕದಲ್ಲಿ ಬರೆದಿಟ್ಟಿದೇನೆ. ನನ್ನ ನಿಮ್ಮ ವ್ಯವಹಾರ ನಿಂತುಹೋಯಿತೂನ್ನಿಸಿದ ದಿವಸ ಹೇಳಿಬಿಟ್ಟು ವಸೂಲು ಮಾಡಿಕೊಂಡುಬಿಡುತೇನೆ.

**ಈಶ್ವರಯ್ಯ** :—ಶಶಿ ಬರುತಿದ್ದಹಾಗೇ, ನಾಗೇಂದ್ರರಾಯರಮಗಳ ವಿಚಾರ ಪ್ರಸ್ತಾಪಮಾಡಿ ಸೆಟಲ್‌ಮಾಡಿಬಿಡಬೇಕು. ಈ ಹೆಳವಿ ಹುಡುಗಿ ಯಂತೂ ನೀನು ಭರವಸೆ ಕೊಟ್ಟಿದ್ದಹಾಗೆ ಮೆತ್ತಗಾಗೋದಕ್ಕೆ ಬದಲಾಗಿ ಬರುಬರುತಾ ಚೆನ್ನಾಗೇ ಬೆಳೀತಿದೆಯಂತೆ. ಅಂತೂ ಹದಿನೇಳನೇ ಹುಟ್ಟಿದ ಹಬ್ಬವೂ ಆದಹಾಗಾಯಿತು. ಮುಂದೆ ಹ್ಯಾಗೋ? ಏನೋ?

**ವಿಷಕಂಠಯ್ಯ** :—ನನ್ನ ಬುದ್ಧೀಲಿ ನಿಮಗೆ ನಂಬಿಕೆ ಇದ್ದರೆ, ನಾನೆ ಲ್ಲಾತಕ್ಕೂ ದಾರಿ ಮಾಡುತೀನಿ. ಬನ್ನೀ. ಆದರೆ ನನ್ನ ಮೇಲೆ ಮಟ್ಟಿಗೆ ದುಗ್ಧ ಪಡೋದನ್ನ ಬಿಟ್ಟುಬಿಡಿ.

**ಈಶ್ವರಯ್ಯ** :— ಈ ಹೆಳವೀ ಸಂಗಡ ಮದುವೆ ಮಾಡಿಸಿದ ಉತ್ಸಾಹ ದಲ್ಲಿ ಅರ್ಧಾನಾದರೂ ಉತ್ಸಾಹತಗೊಂಡು, ಆ ಹುಡುಗನಿಗೆ ಲಕ್ಷಣ ವಾಗೊಂದು ಲಗ್ನಮಾಡಿಸಿ ನನ್ನ ಮನೆ ಉಳಿಸಿಬಿಡಪ್ಪಾ ಸಾಕು.

(ವಿಷಕಂಠಯ್ಯನು ಮುಂದೆ, ಈಶ್ವರಯ್ಯನು ಹಿಂದೆ ಹೊರಡುವರು)



## ಅಂಕ ೨ - ಪ್ರವೇಶ ೪

[ಗೋಪೀನಾಥರಾಯನ ಮನೆಯ ಪಜಾರ. ಹಿಂದಿನಂತೆಯೇ, ಹಿಂಬದಿಯಲ್ಲಿ ಉಮಾ ತನ್ನ ತಳ್ಳುವ ಕುರ್ಚಿಯನ್ನು ಬಿಟ್ಟು ಊರುಗೋಲುಗಳನ್ನು ಹಿಡಿದು, ಅವುಗಳ ಸಹಾಯದಿಂದ ಮೆಲ್ಲಗೆ ಗೋಡೆಯ ಪಕ್ಕದಲ್ಲೇ ನಡೆದು ಬರುತ್ತಿದ್ದಾಳೆ. ಎದುರುಗಡೆ ಶಶಿಯು ನಿಂತು ಅವಳ ಹೆಜ್ಜೆ ಇಡುವುದನ್ನೆ ಎಣಿಸುತ್ತಾ ಅವಳನ್ನು ಹುರಿದುಂಬಿಸುತ್ತಿದ್ದಾನೆ. ಈ ಪಾರ್ಶ್ವದಲ್ಲಿ ದಾಸನು ಉತ್ಸಾಹಸಂತೋಷಗಳಿಂದ ನೋಡುತ್ತಿದ್ದಾನೆ.]

**ಶಶಿ** :—ಹಾಗೆ! ಹಾಗೆ! ನಾಲ್ಕು, ನಾಲ್ಕು, ಐದು, ಐದು, ಆರು, ಆರು, .... ಓ ಹೋ ಹೋ....ಭದ್ರ....ಇನ್ನು ನಾಲ್ಕು ಹೆಜ್ಜೆ ಬಂದು ಬಿಟ್ಟರೆ ಸಾಕು –ಇವತ್ತಿಗೆ........ಆರು-ಏಳು-ಏಳು, ಎಂಟು-ಎಂಟು....ಷಾಬಾಷ್ !.... ಹಾಗೇ ! ...ಎಂಟು - ಒಂಭತ್ತು - ಒಂಭತ್ತು....ಒಂಭತ್ತು....ಇನ್ನೊಂದು.... ಒಂಭತ್ತು .ಒಂಭತ್ತು....

(ಉಮಾ ಹತ್ತನೆ ಹೆಜ್ಜೆಯನ್ನಿಡಲು ಹೋಗಿ ಬಲಕ್ಕೆವಾಲುತ್ತಿರುವಂತೆಯೇ ಶಶಿಯು ಓಡಿಹೋಗಿ ಅವಳನ್ನು ಹಿಡಿದುಕೊಳ್ಳುವನು–ದಾಸನು ಹೊರಕ್ಕೆ ಜಾರುವನು)

**ಶಶಿ** :—ಈವತ್ತು ಹತ್ತನೆ ಹೆಜ್ಜೆ ಇಡೋದಕ್ಕಾಗಲಿಲ್ಲ; ನಾಳೆಯ ದಿನಕ್ಕೆ ಹ್ಯಾಗೇ ?

**ಉಮಾ**:—(ನಕ್ಕು) ಈ ದಿನಾಂದರೆ,ಸಂಜೆವರೆಗೂ ಅವಕಾಶವಿದೆಯೆಲ್ಲ.

**ಶಶಿ** :—ಹಾಗಾದರೆ ಸಂಜೆಗೆ ಒಂದು ಸಲ ಹೊರಗಡೆ ತೋಟದಲ್ಲಿ ನಡೆದು ನೋಡು–ಅಂತೂ ಈ ದಿನ ಹತ್ತು ಹೆಜ್ಜೆ ಇಟ್ಟೇ ತೀರಬೇಕು.

**ಉಮಾ** :—ನನ್ನನ್ನು ನನ್ನ ಕುರ್ಚಿಯಲ್ಲಿ ಕೂಡಿಸಿ ಬಿಡುತೀರಾ.

**ಶಶಿ** :—ಮಹಾರಾಣಿಯ ಅಪ್ಪಣೆ.

(ಕೈ ಮೇಲೆ ಕುರ್ಚಿಮಾಡಿ ಕೂಡಿಸಿ ಕೊಳ್ಳುವನು)

**ಉಮಾ** :—ಮಹಾರಾಣಿಯ ಅಪ್ಪಣೆಯಲ್ಲ-ದಾಸಿಯ ಬೇಡಿಕೆ.

[ಎತ್ತಿ ತಂದು ತಳ್ಳುವ ಕುರ್ಚಿಯ ಮೇಲೆ ಕೂಡಿಸಿ, ತಾನು ಬಂದು ಸೋಫಾದ ಮೇಲೆ ಕೂಡುವನು]

**ಉಮಾ** :—ಒಂದು ನಿಮಿಷ-ಬಂದೇ.

[ಕುರ್ಚಿಯನ್ನು ತಳ್ಳಿಕೊಂಡು ಒಳಕ್ಕೆಹೋಗಿ ಕ್ಷಣ ಮಾತ್ರದಲ್ಲಿ ಉಪ್ಪೇರಿ ತಟ್ಟೆಯನ್ನು ಹಿಡಿದುಬರುವಳು]

**ಶಶಿ** :—(ತಟ್ಟೆಯನ್ನು ತೆಗೆದುಕೊಂಡು ಒಂದು ಮೇಜಿನಮೇಲಿಟ್ಟು ಸವಿಯುತ್ತಾ) ಅಂತೂ ಅಳಿಯಾಂದರೆ ಅದೂ ಒಂದು ಗಾಣಾಂತ ಅತ್ತೆ ಮಾವಂದಿರ ಭಾವನೆಯೇನೋ ?

**ಉಮಾ**:—ಅಳಿಯಾಂದರೆ ನಮ್ಮಮನೆಯನ್ನು ಬೆಳಕು ಮಾಡಿದ ದೇವರೂಂತ ನಮ್ಮೆಲ್ಲರ ಭಾವನೆ.

**ಶಶಿ** :—ನಿನ್ನ ಭಾವನೆಯ ವಿಚಾರವಲ್ಲ.....

**ಉಮಾ** —ನಮ್ಮ ತಾಯಿ, ತಂದೆ, ದಾಸ ಸಮಸ್ತರ ಭಾವನೆಯೂ ಒಂದೇ.

**ಶಶಿ** :—ಮಾತಾಡುತಾ ಸುಮ್ಮನೆ ಕೂತುಬಿಟ್ಟೆಯೆಲ್ಲಾ. ಹೆಜ್ಜೆ ಇಡುತಾ ಕಷ್ಟಪಟ್ಟೋಳು ನೀನು; ತಗೋ ಉಪ್ಪೇರಿ.

**ಉಮಾ** :—ಹೆಜ್ಜೇ ಇಡೋದೇನು ಕಷ್ಟ, ಕೈ ಹಿಡಿಯೋರೊಬ್ಬರಿದ್ದಾರೇನ್ನೋ ನಂಬಿಕೆ ಹುಟ್ಟಿದ ಮೇಲೆ ಆಕಾಶಕ್ಕಾದರೂ ಹಾರಬಹುದು.

**ಶಶಿ** :—ಅಬ್ಬಾ! ಎಂಥಾ ಮಾತಾಡಿಬಿಟ್ಟೆ!

**ಉಮಾ** :—ತಪ್ಪಾಯಿತು.

**ಶಶಿ** :—ಏನು ?

**ಉಮಾ** —ಹದ್ದುಮೀರಿನುಡಿದದ್ದು !

**ಶಶಿ** :—(ತಲೆಯನ್ನು ನೇವರಿಸುತ್ತಾ) ಹುಚ್ಚೀ! ಹಾಗ್ಯಾರೆಂದರು! ನಿನ್ನಮಾತುಗಳಿಗೆಲ್ಲಾ ನನಗೆ ಬೇರೆ-ಗಾಢವಾದ ಅರ್ಥ ಹೊಳೆಯುತ್ತೆ. ಅದಕ್ಕೆ ಹಾಗಂದೆ, ಅಷ್ಟೇ!....ಉಮಾ! ನಾನು ನಿಮ್ಮ ಮನೆಗೆ ಬಂದು ಎಂಟು ದಿನಗಳಾಗಿ ಹೋದುವು. ತಂದೆಯುವರು ಈ ಮಧ್ಯೆ "ಹೊರಟು ಬಂದು ಬಿಡು...."ಇತ್ಯಾದಿಯಾಗಿ ಮೂರು ಕಾಗದ ಬರೆದರು. ಒಂದಕ್ಕೂ ಉತ್ತರವಾಗಿ ಹೊರಡಲಾಗಲೇ ಇಲ್ಲ. ಮೊದಲು ಕಾಗದ ಬಂದ ದಿನ ನಿಮ್ಮ ತಂದೆ

ಊರಿನಲ್ಲಿರಲಿಲ್ಲ. ಎರಡನೇ ಕಾಗದ ಬಂದಂದು ನಿಮ್ಮ ತಾಯಿಯವರು ಸ್ವಸ್ಥವಾಗಿರಲಿಲ್ಲ. ಮೂರನೆಯ ಕಾಗದ ಬಂದದಿನ..................

**ಉಮಾ:**—ಏಕೆ ಸುಮ್ಮನಾದಿರಿ.

**ಶಶಿ:**—ಏನೂ ಇಲ್ಲ; ಅದನ್ನ ನೆನಸಿ ಕೊಳ್ಳಲೂ ಮನಸ್ಸು ಬಾರದು. ಅಬ್ಬಾ! ಎಂಥ ಭಯಂಕರ ವಿಚಾರ, ಕೇವಲ ದೇವರ ದಯದಿಂದ ಪಾರಾಯಿತು.

**ಉಮಾ:**—ನಡೆಯುವರೆಲ್ಲರೂ ಎಡವೇ ಎಡವುತಾರೆ. ಹುಟ್ಟಿದಾರಭ್ಯ ನಡೆಯಲಾರದೆ ಇದ್ದು, ಈಗ ಹೊಸದಾಗಿ ನಡೆಯುವುದನ್ನ ಕಲೀತೀರೋ ಈ ದೆಡಗಲಿ ಕೋಲುಜಾರಿ ಬಿದ್ದಿದ್ದೇ ಒಂದು ಭಯಂಕರ ವಿಚಾರವೇ!

**ಶಶಿ:**—ಅದನ್ನ ಮರೆತುಬಿಡೋಣ....ನನಗಂತೂ ಕರುಳು ಬಾಯಿಗೆ ಗುದ್ದಿಕೊಂದು ಬಂದ ಹಾಗಾಯಿತು. ಅಬ್ಬಬ್ಬಾ.... ಎಂಥ ಅಚಾತುರ್ಯ—

**ಉಮಾ:**—ಹೋಗಲಿ ಮರೆತು ಬಿಡಿ. ಮಗುವಿನಲ್ಲೇ ಬೀಳ ಬೇಕಾಗಿತ್ತು; ಆದರೆ ಆಗ ಬಿದ್ದಿದ್ದರೆ ನೋಡಿಕೊಳ್ಳೋರು ಯಾರು ಇರತಿರಲಿಲ್ಲವೇನೋ: ಇದ್ದರೂ ನಿಮ್ಮಷ್ಟೆ ಮರುಗೋರು ಯಾರೂ ಇರುತಿರಲಿಲ್ಲವೋ ಏನೋ; ಅದಕ್ಕೋಸ್ಕರ ಆಶ್ರಯದಾತರು, ಸಂರಕ್ಷರು ನೀವು ಬಂದಮೇಲೆ ಹೆಜ್ಜೆ ಇಡೋದನ್ನ ಕಲೀತಾ ಬಿದ್ದೆ; ಮೂಗೊಡೆ ಕೊಂಡು, ರಕ್ತ ಹರೀತು; ಕೂಡಲೇ ಬಂದು ಕೈ ಹಿಡಿದು, ಉದ್ಧಾರಮಾಡಿ, ಉಪಚರಿಸಿ, ಅಷ್ಟೊಂದು ಅಂತಃ ಕರಣದಿಂದ ಆ ದಿನವೆಲ್ಲಾ ಹತ್ತಿರಿದ್ದಿರಿ. ತಾಯಿಗಿಂತಲೂ ಹೆಚ್ಚಾದ ಮಮತೆಯಿಂದ ಸಮಾಧಾನ ಮಾಡುತಿದ್ದಿರಿ. ನಾನು ಬೀಳದೆ ಹೋಗಿದ್ದರೆ ನನಗೀ ಭಾಗ್ಯ ಸಿಕ್ಕುತಿತ್ತೇ?

(ಶಶಿಯು ಸುಮ್ಮನಿರುವುದನ್ನು ನೋಡಿ)........ತಪ್ಪಾಯಿತು. ನೀವು ಮರೆಯಬೇಕೆಂದಿದ್ದನ್ನ ಮತ್ತೆ ವಿವರಿಸಿ ಬಿಟ್ಟೆ. ನನ್ನ ಅಂತಃಕರಣದಲ್ಲಿ ಸುಡಿಯೋ ಮಾತುಗಳನ್ನೆಲ್ಲಾ ನಿಮ್ಮಮುಂದೆ ಹೇಳಿಕೊಳ್ಳೋದಕ್ಕೆ ಪ್ರಾರಂಭಿಸಿದರೆ ನನಗೆ ಮೈಮೇಲೆ ಎಚ್ಚರವೇ ಇರೋದಿಲ್ಲ. ನಾಲ್ಕುದಿವಸಗಳಿಂದ ಅಮ್ಮ ಕೂಡಾ ಆಗಾಗ್ಗೆ ಹೇಳುತ್ತಿರುತ್ತಾಳೆ-ನೀನು ಮಾತುಕಡಿಮೆ ಮಾಡಿಕೊ ಅವರಿಗೆ ಬೇಜಾರಾದೀತೂಂತ?....ನಿಮಗೆ ಈಗ ಬೇಜಾರಾಯಿತೇ?

**ಶಶಿ**:—ಡಂಭ, ದುರಹಂಕಾರ, ಕೃತ್ರಿಮ, ಕಪಟ, ಮಾತ್ಸರ್ಯ-ಮಮಕಾರದ ಮಾತುಗಳು ಕಿವಿಗೆ ಅಸಹ್ಯವಾಗಿರುತ್ತೆಯೇ ಹೊರತೂ, ಸಂತೋಷ, ದುಃಖ, ಕೃತಜ್ಞತೆ, ಕನಿಕರದ ಮಾತುಗಳು ಎಂದಿಗೂ ಬೇಜಾರಾಗೋದಿಲ್ಲ. ಅಲ್ಲದೆ ...ನೀನು ನಿನ್ನ ತಂದೆ ತಾಯಿಗಳ ಹತ್ತಿರ ಕೂಡಾ ಇಲ್ಲದ ನಂಬಿಕೆ ವಿಶ್ವಾಸಗಳಿಂದ ಹಸುಮಗುವಿನ ಹಾಗೆ ನನ್ನ ಬಳಿ ಆಡೋ ಮಾತುಗಳು ನನಗೆ ಬೇಜಾರೇ!..ಅದು ಹೋಗಲೀ, ನಾನು ಈ ದಿನ ಸಂಜೆಯ ಷಟಲ್ ಗಾಡಿಗೆ ಊರಿಗೆ ಹೋಗಿ ಬರಬೇಕೂಂತ ತೀರ್ಮಾನ ಮಾಡುತಿದ್ದೆ. ಅದಕ್ಕಾಗಿ ಮತ್ತೆ ನಾನು ಬರುವವರೆಗೂ ನೀನು ಊರುಗೋಲು ಹಿಡಿದು ಖಂಡಿತ ನಡೀಬೇಡಾಂತ ಹೇಳಬೇಕೂಂತಿದ್ದೆ. ಆದರೆ ನೀನು ಈ ದಿನ ಹತ್ತು ಹೆಜ್ಜೆ ಪೂರ್ತಿ ಇಡಲಿಲ್ಲ, ಸಂಜೆಗಾದರೂ ಹತ್ತು ಹೆಜ್ಜೆ ಇಡಿಸಲೇಬೇಕು ನಾನು ಮತ್ತೆ ಬಂದಮೇಲೆ ಚೆನ್ನಾಗಿ ತೋಟದಲ್ಲೆಲ್ಲಾ ಸುತ್ತಾಡೋದನ್ನ ಕಲಿತುಬಿಡಬೇಕು ಇಂದಲ್ಲಾ, ನಾಳೆ, ಈ ವರುಷವಲ್ಲ-ಮುಂದಿನ ವರುಷಕ್ಕಾದರೂ ಸರಿ ನೀನೂ ಎಲ್ಲರಂತೆ ಊರಿಗೋಲಿನ ಸಹಾಯವೂ ಇಲ್ಲದೆ, ನಡೆಯಲಾರಂಭಿಸಿ ಬಿಟ್ಟರೆ, ಸಾಕು. ಅಂದಿನ ನಿನ್ನ ಸಂತೋಷಾನ ನೋಡೋದಕ್ಕೆ ನನ್ನ ಕಣ್ಣುಗಳು ಮೀಸಲಾಗಿವೆ. ಉಮಾ! ...ಉಮಾ!

[ಉಮಾ ಕತ್ತೆತ್ತಿ ನೋಡುವಳು ಕಣ್ಣುಗಳು ಕಂಬನಿ ತುಂಬಿರುವುವು.]

**ಶಶಿ**.—ಯಾಕೆ ಕಣ್ಣೀರು?

**ಉಮಾ**:—ನೀವು ಈ ದಿನವೇ ಹೊರಟುಬಿಡಬೇಕೇ?

**ಶಶಿ**:—ಬೇಡವೇ? ನಿನ್ನ ಹುಟ್ಟಿದ ಹಬ್ಬಕ್ಕಾಗಿ ಒಂದು ದಿನದ ಮಟ್ಟಿಗೇಂತ ಬಂದವನು—ಎಂಟು ದಿವಸವಾಯಿತು. ಇನ್ನೂ ಹೊರಡ ಬೇಡವೇ? .. ಅಲ್ಲದೆ ನನ್ನ ತಾಯಿ ನಿನ್ನಂತೇ ನನಗಾಗಿ ಹಾತೊರೆಯುವ ತಾಯಿ ..ಆಕೆಯ ದೇಹಸ್ಥಿತಿ ಬೇರೆ ನೆಟ್ಟಗಿರಲಿಲ್ಲ; ಅವರನ್ನ ನೋಡಲೇ ಬೇಕು.

**ಉಮಾ**:—ನೀವು ಈವತ್ತೇ ಹೊರಟುಬಿಟ್ಟರೆ ಮತ್ತೆ ಬರೋದು ಯಾವತ್ತು?

**ಶಶಿ**:—ಯಾವತ್ತು ಬರಬೇಕು ಹೇಳು.

**ಉಮಾ**.—ನಾಳೆ ನಾಳಿದ್ದು ಅಲ್ಲೇ ಇರಿ. ಆಚೆ ನಾಳಿದ್ದು ಇಲ್ಲಿಗೆ ಬಂದು ಬಿಡಿ ...ಆದರೆ ನಿಮ್ಮ ತಾಯಿ ತಂದೆ ನಿಮ್ಮನ್ನ ಮತ್ತೆ ಇಲ್ಲಿಗೆ ಕಳುಹಿಸುತಾರೆಯೇ ?

**ಶಶಿ**:—ಉಮಾ! ಇದೇಕೆ ಹೀಗೆ ಮಾತನಾಡುತೀ ? ಈಗ ಕಳುಹಿಸಲಲ್ಲವೇ ?

**ಉಮಾ**:—ಮದುವೆಯಾದ ನಾಲ್ಕೈದು ತಿಂಗಳಿಂದ, ನಮ್ಮ ತಂದೆ ಅಷ್ಟುಬಾರಿ ಕಾಗದ ಬರೆದರೂ, ಹೇಳಿಕಳುಹಿಸಿದರೂ ನಿಮಗೆ ಬರಲಾಗಲಿಲ್ಲ. ಈ ಬಾರಿ ಹುಟ್ಟಿದ ಹಬ್ಬದ ನೆಪಹಾಕಿದ್ದಕ್ಕೆ, ಏನೋ ನನ್ನ ಪುಣ್ಯದಿಂದ ಬಂದಿರಿ. ನಾನೂ ಸಹ ನೀವು ಬರುವುದಿಲ್ಲ–ನನ್ನಂಥ ಹೆಳವಿಗೆ ನಿಮ್ಮಂಥ ಪುಣ್ಯಾತ್ಮರ ದಯೆಯು ಎಲ್ಲಿಂದ ಬರಬೇಕೂ, ಎಂದುಕೊಂಡಿದ್ದೆ–ಆದರೆ ಈ ಎಂಟು ದಿವಸಗಳಲ್ಲಿ ನಾನು ಎಂಟುನೂರು ವರುಷಗಳಿಂದ ನಿಮ್ಮೊಂದಿಗೆ ಎಡಬಿಡದೆ ಇದ್ದಂತಿದೆ. ನೀವು ಹೊರಟುಹೋದರೆ ಎರಡು ದಿನಗಳನ್ನಾದರೂ ಹೇಗೆ ಕಳೆಯೋದು !!

**ಶಶಿ**:—ಬೆಳಗಾಗುತ್ತೆಂಬ ಭರವಸೆಯಿಂದ ರಾತ್ರಿಯನ್ನು ನಿಶ್ಚಿಂತೆಯಾಗಿ ನಿದ್ರಿಸಿ ಕಳೆಯುವಹಾಗೆ; ಜಗತ್ತಿನ ನಿಯಮವೇ ಇದು ಉಮಾ !

**ಉಮಾ**:—ನನಗೆ ಜಗತ್ತಿನ ಮಾತು ಯಾಕೋ ರುಚಿಸುವುದಿಲ್ಲ. ನಾನು ತುಂಬಾ ಸ್ವಾರ್ಥಿಯಾಗಿದ್ದೇನೋ ಏನೋ, ನನಗೆ ನಾನು-ನನ್ನ ಸುಖ ಸಂತೋಷ-ಇವೇ ದೊಡ್ಡದಾಗಿವೆ—ಹುಟ್ಟುದರಿದ್ರ ಎಂದೂ ಕಾಣದ ನಿಧಿಯನ್ನ ಕಂಡಂತಾಗಿದೆ ನನ್ನ ಸ್ಥಿತಿ. ನೀವು ಹೊರಡಲೇಬೇಕಾಗಿದ್ದರೆ ನಾಳೆ ಬೆಳಗ್ಗಿಯ ಮೆಯಿಲ್ ಗಾಡಿಯಲ್ಲಿ ಹೊರಟುಬಿಡುವಿರಿ. ಈ ದಿನ ಮಟ್ಟಿಗೆ ಹೊರಡುವ ಮಾತುಬೇಡ. ನನ್ನಮೇಲೆ ಕೃಪೆಮಾಡಿ ಸಂಜೆಗೂ ಅಪ್ಪನ ಸಂಗಡ ಹೋಗದೇ, ಇಲ್ಲೇ ಇದ್ದುಬಿಡಿ. ಅಪ್ಪನಿಗೆ ನಾನು ಹೇಳುತೇನೆ.

**ಶಶಿ**:—ಹುಚ್ಚೀ ! ನೀನೇನು ಹೇಳುವುದು, ನಾನೇ ಸರಿಯಾಗಿ ಹೇಳುತೇನೆ. ಸರಿ ನಾಳೆ ಹೊರಟುಬಿಡುವುದು ...ಅಲ್ಲಿ ಅಪ್ಪ ತುಂಬಾ ಸಿಟ್ಟಾಗಿರುತ್ತಾರೆ.

**ಉಮಾ**:—ತಂದೆಗಳು ಗಂಡು ಮಕ್ಕಳನ್ನ ಮಾತ್ರ ಹೀಗೆ ಸಿಟ್ಟು

ಕೋಪದಿಂದ ಹೆದರಿಸೋದು....ಹೆಣ್ಣುಮಕ್ಕಳನ ಮಟ್ಟಿಗೆ ಮುದ್ದಿಸೋದು.

**ಶಶಿ :**—ಎರಡಕ್ಕೂ ಪ್ರೀತಿಯೇ ಕಾರಣ. ಅದು ಹೋಗಲಿ....ಎಲ್ಲಿ; ಮೊನ್ನೆ ತೋಟದಲ್ಲಿ ಹೇಳಿದೆಯಲ್ಲಾ ಆ ಊರುಗೋಲು ಹಿಡಿದು—ಆ ಹಾಡ್ನ ಒಂದುಸಲ ಮೆಲ್ಲಗೆ ಹೇಳಿಬಿಡು ಕೇಳೋಣ. ಇನ್ನು ಹೊರಡೋ ಗಡಿ ಬಿಡೀಲಿ, ನಿಮ್ಮಮ್ಮ ಮಾಡೋ ಔತಣದ ಅವಾಂತರದಲ್ಲಿ ಮತ್ತೆ ಅವಕಾಶವಿರ ಲಾರದು.

**ಉಮಾ :**—(ಸುತ್ತಲೂ ನೋಡಿ) ಈಗಲೇ ಹೇಳಬೇಕೇ?

**ಶಶಿ :**—ಹೇಳೂಂತ ಕೇಳುತಾ ಇದೇನೆ-ಹೇಳು-ನಿಮ್ಮ ತಂದೆ ಪೇಟೆಗೆ ಹೋಗಿದಾರೆ; ನಿಮ್ಮ ತಾಯಿ ಅಡುಗೆಮನೆ ಬಿಟ್ಟೇಬರೊಲ್ಲ. ದಾಸ ತೋಟ ದಲ್ಲಿರಬೇಕು. ಇಲ್ಲಿ ನಾನೂ ನೀನೂ ಇಬ್ಬರೇ.

**ಉಮಾ .**—ನಿಮಗೆ ಸಂಗೀತಾಂದರೆ ಇಷ್ಟೊಂದು ಇಷ್ಟಾಂತ ನನಗೆ ಗೊತ್ತಿದ್ದಿದ್ದರೆ, ಆ ಸಂಗೀತದ ಮೇಷ್ಟ್ರನ್ನ ದಿನಾ ಅಷ್ಟೊಂದು ಸತಾಯಿಸಿ ಕಳಿಸಿ ಬಿಡುತಿರಲಿಲ್ಲ.

**ಶಶಿ :**—ದೇವರು ಕೊಟ್ಟಿರೋ ಗಂಟಲಿನ ಮಾಧುರ್ಯ, ಜೊತೇಗೆ ಆ ಹಾಡಿನ ಮಾತುಗಳನ್ನನುಡಿಯೋದರಲ್ಲಿ ಬೆರೆಯೋ ಅಂತಃಕರಣದ ನಾದ-ಇವುಗಳಿಂದ ಹಾಡು ಇಂಪಾಗುತ್ತೆಯೇ ಹೊರತು, ಕೇವಲ ಸಂಗೀತ ಶಾಸ್ತ್ರ ದಿಂದಲ್ಲ.

**ಉಮಾ :**—ನಿಮ್ಮ ಮಾತು ಅರ್ಥವಾಗಬೇಕಾದರೆ ನನಗೊಂದು ನಿಘಂಟೇ ಬೇಕು ನೀವಾಡೋಮಾತುಗಳಲ್ಲಿ ನನಗರ್ಥವಾಗದೇ ಹೋಗೋವ ನೆಲ್ಲಾ ನೆನಪಿಟ್ಟುಕೊಂಡು, ರಾತ್ರೆ ಹಾಸಿಗೆ ಮೇಲೆ ಬಿದ್ದುಗೊಂಡಾಗ ಒಬ್ಬಳೇ ಯೋಚಿಸುತಾ ಇರುತೇನೆ. ಆಗ ಒಂದೊಂದು ಅರ್ಥವಾಗುತ್ತವೆ.

**ಶಶಿ :**—ಬರೀ ಮಾತಿನಲ್ಲೇ ಕಾಲ ಕಳೀತಾ ಇದೆ. ಹಾಡಿಬಿಡು.

**ಉಮಾ :**—(ಹಾಡುವಳು)

ತುಂಬಿ ಬಂದಿದೆ ಮಧುಮಾಸಲೋಕವಾ
ತುಂಬಿ ಪುಷ್ಪದಿ ಮಧು ಪಾನಕೆಳಸಿದೆ ||ಅಪ||
ಕನಸ ಮನಸ ಮುಚ್ಚಿ

ಹೊಸ ಬೆಳಕ ಹಚ್ಚಿ
ಚಿಂತೆ ಸಂತೆಯ ಕೊಚ್ಚಿ
ಕುಣಿಸುತ ತಣಿಸುತ
ಕಾಣದಾನಂದ ಪ್ರವಾಹದೀ || ೧ ||
ಬಿರಿದ ಸುಮದ ಕಂಪು
ಎಳೆಗಾಳಿಯ ತಂಪು
ತರುಲತೆಗಳ ಸೊಂಪು
ಮನಕಿಂಪು ಬಲುಪೆಂಪು
ಕೋಕಿಲ ಗಾನಸುಮಾನದೀ || || ೨ ||

[ಒಳಗಿನಿಂದ "ಉಮಾ'ಉಮಾ" ಎಂಬ ಸರಸ್ವತಮ್ಮನ ಧ್ವನಿ]

**ಉಮಾ** :—ಬಂದೇ !

[ಕುರ್ಚಿಯನ್ನು ತಳ್ಳಿಕೊಂಡು ಹೋಗುವಳು; ತುಸು ಹೊತ್ತಿನಲ್ಲಿ ದಾಸನು ಒಳಕ್ಕೆ ಬಂದು ನಿಲ್ಲುವನು.]

**ಶಶಿ** :—ಏನು ದಾಸಪ್ಪಾ ? ರಾಯರು ಬಂದರೇ ?

**ದಾಸ** :—ಬಂದಾರೆ ಬುದ್ದೀ....ತಮ್ಮನ್ನ ನೋಡಬೇಕಂತ ಅಮ್ಮಾರ ಅವರ ಹತ್ತಿರ ಮಾತಾಡುತಿದ್ದರು.

**ಶಶಿ** :—ಏನು ಸಮಾಚಾರ ?

**ದಾಸ** :—ಬಂದೋರೇ, ಎದುರು ಮನೆ ಸಾಹುಕಾರ್ ರುದ್ರಪ್ಪನ್ನೋರಿಗೊಂದು ಕಾಗದ ಕೊಟ್ಟು ಕಳಿಸಿದರು; ನಾನು ಅವರ ಮಂಡೀತಾಕೋಗಿ ಕೊಟ್ಟೆ. ಅವರು ಕಾಗದಾ ನೋಡಿಕೊಂಡು, ಅವರ ಡ್ರೈವರ್ ಚನ್ನಪ್ಪನ್ನ ಕರೆದು "ಗೋಪೀನಾಥರಾಯರ ಮನೇಯಿಂದ ಯಾರೋ ಅರ್ಜೆಂಟಾಗಿ ಬೆಂಗಳೂರಿಗೋಗಬೇಕಂತೆ. ಕಾರಿಗೆ ಪೆಟ್ರೋಲಾಕಿಸಿಕೊಂಡು ಓಗಿಬಿಟ್ಟು ಸಂಜೇಗೇ ವಾಪಸ್ ಬಂದುಬಿಡೋ"ಂದರು. ಆ ಮೇಲೆ ನನ್ನ ಕಡೆಗೆ ತಿರುಗಿ ಕಾರು ತಕ್ಕಾನೆ ನೀನು ಓಗಪ್ಪಾ ಅಂದರು.

**ಶಶಿ** :—(ಗಾಭರಿಯಾಗಿ) ಏನು ಸಮಾಚಾರ; ಗೊತ್ತಾಗಲಿಲ್ಲವೇ !! (ಮೇಲೇಳುವನು)

[ಇತ್ತಲಿಂದ ಉಮಾ ತಟ್ಟೆಯಲ್ಲಿ ಕಾಫಿ ತರುವಳು. ದಾಸನು ಹೊರಟು ಹೋಗುವನು.]

**ಶಶಿ** :—ಉಮಾ! ಏನು ಸಮಾಚಾರ?

**ಉಮಾ** :—ಮೊದಲು ಕಾಫಿ ತಗೊಳ್ಳಿ.

**ಶಶಿ** :—ನೀನು ಯಾಕೆ ಮಂಕಾಗಿದೀ?

**ಉಮಾ** :—ಕಾಫಿ ತಗೊಳ್ಳೀ-ಹೇಳುತೇನೆ.

**ಶಶಿ** :—ಹೀಗೇಕೆ ಸತಾಯಿಸುತೀರಿ-ದಾಸನೇನೋ ಅರ್ಧರ್ಧ ಸಮಾಚಾರ ಹೇಳಿಬಿಟ್ಟು ಹೊರಟುಹೋದ.

**ಉಮಾ** :—ತಪ್ಪಾಯಿತೂ ಕ್ಷಮಿಸಿ, ಹಾಗಲ್ಲ. ನಿಮ್ಮ ತಂದೆಗೆ ಹುಷಾರಿಲ್ಲಾಂತ ವಿಷಕಂಠಯ್ಯನೋರಿಂದ ತಂತೀ ಬಂದಿದೆಯಂತೆ. ನಿಮ್ಮನ್ನು ಹೇಗಿದ್ದರೆ ಹಾಗೇ ಕಳಿಸೀಂತ ತಂತಿ ಕೊಟ್ಟಿದಾರಂತೆ. ಮುಂಚೆ ಕಾಫಿಕುಡಿದುಬಿಡೀ! (ಬೇಡುವಳು)

**ಶಶಿ** :—(ಕಾಫಿಯನ್ನು ತೆಗೆದುಕೊಂಡು) ವಿಷಕಂಠಯ್ಯನ ತಂತೀ ತಾನೇ!....ಸರಿ, (ಕಾಫಿಯನ್ನು ಕುಡಿಯುತ್ತಾ) ನಿಮ್ಮ ತಂದೆ ರುದ್ರಪ್ಪನೋರ ಕಾರಿಗೇಪಾರ್ಟು ಮಾಡಿದ್ದಾರಂತೆ. ಇಷ್ಟೆಲ್ಲಾ ತೊಂದರೆ ತಗೊಂಡರೇ!

**ಉಮಾ** :—ನಿಮ್ಮ ತಂದೆಗೆ ಖಾಯಿಲೇಂತ ತಂತಿ ಬಂದರೆ, ತಡ ಮಾಡೋದಕ್ಕಾಗುತ್ತೆಯೇ!! ಅಲ್ಲಾ! ಅದೇನು ವಿಷಕಂಠಯ್ಯನ ತಂತಿ ತಾನೇಂದರಲ್ಲಾ!!

**ಶಶಿ** :—ಏನೂ ಇಲ್ಲ, ಅವನೊಬ್ಬನೇ ನಮ್ಮ ತಂದೆಗೆ ಆಪ್ತ ಸ್ನೇಹಿತ. ಅದಕ್ಕೆ ಹಾಗಂದೆ. ಸರಿ ಹೋಗಿ ಸ್ವಲ್ಪ ಬಟ್ಟೆ ಬರೇ ನೋಡಿಕೊಳ್ಳುತೇನೆ.

**ಉಮಾ** :—ಎಲ್ಲಾನೂ ನಮ್ಮ ತಾಯಿ ಪೆಟ್ಟಿಗೇಲಿಟ್ಟು ಸರಿಮಾಡುತಿದಾರೆ, ನೀವು ನಾಳೆ ಹೊರಡೋದಕ್ಕೆ ಒಪ್ಪಿದ್ದಿರಿ. ನಾಳೆಯ ವರೆಗೂ ನಿಮ್ಮ ಪಾದದಲ್ಲಿ ಸಂತೋಷವಾಗಿರೋ ಸೌಭಾಗ್ಯ ಅಕಸ್ಮಾತ್ ಮಾಯವಾಯಿತು; ದೇವರಿಗೇ ಬೇಡವಾಯಿತೇನೊ.

ಶಶಿ :—ಇದನ್ನೆಲ್ಲಾ ದೇವರ ತಲೆಯ ಮೇಲೆ ಹೊರಸಿದಹಾಗೆಯೇ, ಒಂದು ದಿನಕ್ಕೇಂತ ಬಂದೋನು ಎಂಟು ದಿವಸವಿರೋಹಾಗೆ ಮಾಡಿದ ಭಾಗ್ಯಾನೂ ದೇವರದಯಾಂತ ತಿಳಿಯಬಾರದೇಕೇ !! ನಿಲ್ಲೋದಕ್ಕೆ ಹೆದರು ತಿದ್ದೋಳೂ ಈವತ್ತಿಗೆ ಒಂಭತ್ತು ಹೆಜ್ಜೆಯಿಟ್ಟೆಯಲ್ಲಾ—ಇದೂ ದೇವರ ದಯಾನ್ನೋದನ್ನ ತಿಳಿದು ಅವನಿಗಾಗಿ ಅಂತಃಕರಣ ಮಿಡೀಬಾರದೇ !!

ಉಮಾ —ತಪ್ಪಾಯಿತೂ. ನನ್ನ ಸ್ವಾರ್ಥದಲ್ಲಿ ದೇವರನ್ನ ಕೂಡ ಕುರುಡು ಕುರುಡಾಗಿ ನಿಂದಿಸಿ ಪಾಪ ಮಾಡುತೀನಿ ನೀವು ಈಗ ಹೊರಟು ಹೋದರೆ, ಕನಿಷ್ಠಪಕ್ಷ ಎಷ್ಟು ದಿವಸದಲ್ಲಿ ಬಂದುಬಿಡುತೀರಾ ?

ಶಶಿ .—ತಂಬಾ ಜಾಸ್ತಿ ಅಂದರೆ ಒಂದು ವಾರದಲ್ಲಿ.

ಉಮಾ :—ಒಂದುವಾರ ಅಂದರೆ ಏಳುದಿವಸಗಳೇ ?

ಶಶಿ :— ಹೌದು. ಯಾಕೆ ತುಂಬಾ ಹೆಚ್ಚಾಯಿತೇ ! ಅಷ್ಟರೊಳಗೇ ಬಂದು ಬಿಡುತೀನೀಂತ ಹೇಳಿದ್ದು. ಈ ಬಾರಿ ಬಂದಮೇಲೆ, ನಿನ್ನನ್ನೂ ನಮ್ಮ ಮನೇಗೇ ಕರಕೊಂಡು ಹೋಗೋದಕ್ಕೆ ಏರ್ಪಾಟು ಮಾಡಿಕೊಂಡೇ ಬರೋದು.

ಉಮಾ :—(ಸಂತೋಷದಿಂದ) ಹೌದೇ ?

ಶಶಿ .—ಬರುತೀತಾನೇ ?

ಉಮಾ:— ನಿಮ್ಮೊಂದಿಗೆ ಎಲ್ಲಿಗಾದರೂ ಬರೋದಕ್ಕೆ ಸಿದ್ಧವಾಗಿದ್ದೇನೆ

ಶಶಿ —(ನಕ್ಕು) ಅಲ್ಲಾ ! ಹದಿನೇಳುವರುಷದಿಂದ ಹೆತ್ತು ಹೊತ್ತು ಸಾಕಿ ಸಲಹಿದ ತಾಯಿ ತಂದೆಗಳನ್ನ ಬಿಟ್ಟು, ಎಲ್ಲೋ ಹುಟ್ಟಿ ಬೆಳೆದ, ಕಂಡೂ ಕೇಳದ ಬೇರೊಬ್ಬನೊಂದಿಗೆ ಬಂದುಬಿಡೋದಕ್ಕೆ ಸಿದ್ಧವಾಗೋ ಮನಸ್ಸಾಗಿ ಬಿಡುತ್ತಲ್ಲಾ ! ಎಂಥಾ ಆಶ್ಚರ್ಯ !

ಉಮಾ :—ಇದು ತಪ್ಪೇ ?

ಶಶಿ :—(ಕೈಹಿಡಿದು) ತಪ್ಪಲ್ಲ ಉಮಾ ! ಸಹಜ ! ಆದರೆ ಆಶ್ಚರ್ಯ ವಲ್ಲವೇ ! ಸ್ವಪ್ನದಲ್ಲಾಗೋ ಸಂಗತಿಗಳಷ್ಟೇ ವಿಚಿತ್ರವಾದದ್ದು. ಎರಡೂ ಮಾಯಾಪ್ಲುತವಾದ ಸ್ಥಿತಿಗಳಲ್ಲವೇ !

**ಉಮಾ** :—ನನಗೆ ನಿಮ್ಮ ಮಾತು ಅರ್ಥವೇ ಆಗೋದಿಲ್ಲ.

**ಶಶಿ** :—ನನಗೇ ಅರ್ಥವಾಗುತಿರಲಿಲ್ಲ, ಈಗೀಗ ಅರ್ಥವಾಗುತಾ ಇದೆ.

**ಉಮಾ** :—ಅಂತೂ ಬೇಗಬಂದುಬಿಡಿ. ಇಲ್ಲಿಂದ ಮತ್ತೆ ಹೋಗಲೇ ಬೇಕಾದರೆ ನನ್ನನ್ನೂ ಜೊತೇಲಿ ಕರಕೊಂಡು ಹೋಗುವಿರಿ. ನಿಮ್ಮ ಸಂಗಡ ಎಲ್ಲಿಗೆ ಬೇಕಾದರೂ ಬರುತೇನೆ. ನನಗೆ ಗೊತ್ತು ನಿಮಗೆ ಹೊರೆಯಾಗಿರು ತೇನೇಂತ, ಆದರೂ ಸಾಧ್ಯವಾದಷ್ಟು ಬೇಗ ಸುಮಾರಾಗಿ ನಡೆಯೋದನ್ನ ಕಲಿತು ಬಿಡುತೇನೆ. ಒಂದು ವೇಳೆ ಆಗದೇನೇ ಹೋದರೆ ತೆವಳಿಕೊಂಡೇ ಅಡುಗೆ ಪಡುಗೆ ಮಾಡುತೇನೆ. ನಿಮ್ಮ ಸೇವೆ ಮಾಡಿಕೊಂಡಿರುತೇನೆ. ನಿಮ್ಮ ದಯಾ ಭಿಕ್ಷೆಯ ಬೆಳಕಿನಲ್ಲಿ ಬದುಕಿರುತೇನೆ (ಪಾದಗಳನ್ನು ಮುಟ್ಟಲು ಹೋಗುವಳು, ಶಶಿಯು ಅವಳ ಕೈಗಳನ್ನು ಹಿಡಿದು ತಲೆಯನ್ನು ನೇವರಿಸು ವನು. ಗೋಪೀನಾಥರಾಯನು ಹೊರಗಿನಿಂದಲೇ "ಉಮಾ! ಉಮಾ" ಎಂದು ಕೂಗುತ್ತಾ ಬರುವನು).

**ಶಶಿ** :—(ಮುಂದೆ ಹೋಗಿ) ತಂತಿ ಬಂದಿದೆಯೇ?

**ಗೋಪಿನಾಥರಾಯ** —ಬನ್ನಿ ಕೂತುಕೊಳ್ಳಿ, (ಇಬ್ಬರೂ ಸೋಫಾ ದಮೇಲೆ ಕೂಡುವರು)

**ಗೋಪಿನಾಥರಾಯ** :—(ದುಃಖದಿಂದ) ನಿಮ್ಮ ತಂದೆಗೆ ತುಂಬಾ ಖಾಯಿಲೆಯಾಗಿದೇಂತ ವಿಷಕಂಠಯ್ಯ ತಂತೀ ಕೊಟ್ಟಿದಾರೆ; ಕೂಡಲೆ ಕಳಿಸಿಕೊಡೀಂತ ನನ್ನ ಹೆಸರಿಗೇನೋ ವೈರ್ ಮಾಡಿದಾರೆ. ರುದ್ರಪ್ಪನೋರ ಕಾರಿಗೆ ಹೇಳಿದೇನೆ. ಇನ್ನೇನು ಇಷ್ಟರಲ್ಲೇ ಬರಬಹುದು, ನೀವು ಮನೆಗೆ ಹೋಗುತಿದ್ದ ಹಾಗೆಯೇ ನಿಮ್ಮ ತಂದೆಯವರನ್ನ ನೋಡಿ, ದೇಹಸ್ಥಿತಿ ಹ್ಯಾಗಿ ದೇನ್ನೋದನ್ನ ತಿಳಿದು, ಡ್ರೈವರ್ ಚನ್ನಪ್ಪನ ಕೈಲಿ ಮರೀದೇ ಹೇಳಿ ಕಳಿಸ ಬೇಕು; ನಾವೆಲ್ಲಾ ತುಂಬಾ ಆಂಕ್ಷಸ್ ಆಗಿದೇವೆ.

**ಶಶಿ** :—ಖಂಡಿತವಾಗಿಯೂ ಹೇಳಿಕಳಿಸುತೇನೆ.

**ಗೋಪಿನಾಥರಾಯ** :—ಉಮಾ! ಅಮ್ಮಾ ಕರೀತಾ ಇದ್ದಾಳೆ ನೋಡು-ಹೋಗು.

[ಉಮಾ ಕುರ್ಚಿಯನ್ನು ತಳ್ಳಿಕೊಂಡು ಹೋಗುವಳು]

**ಗೋಪಿನಾಥರಾಯ** :—ನೀವು ಎಲ್ಲರಂತೆ ಸಾಮಾನ್ಯರಲ್ಲ; ನಮ್ಮ ಮನೆದೇವರು.

**ಶಶಿ** :—(ನಾಚಿ) ಅಷ್ಟು ದೊಡ್ಡಮಾತೇಕೆ !

**ಗೋಪಿನಾಥರಾವ್** :—ಹಾಗಲ್ಲ, ಅದು ಬರೀಮಾತಲ್ಲ, ನಮ್ಮ ಮನೆಯೋರೆಲ್ಲರ ಅಂತಃಕರಣಗಳ ಒಂದೇ ನುಡಿ. ನಮ್ಮ ಪುಣ್ಯವೋ,ಆ ಬಡ ಪಾಯಿ ಉಮಾ ಮಾಡಿದ ಹಿಂದಿನ ಜನ್ಮದ ಪೂಜೆಯ ಫಲವೋ, ಅವಳ ಸ್ಥಿತಿಗಾಗಿ ಅಂತಃಕರಣಪೂರ್ಣವಾಗಿ ಮರುಗೋ ಅಂಥ ನೀವು ಅವಳಿಗೊಂದು ದಿಕ್ಕಾಗಿ ಸಿಕ್ಕಿದಿರಿ. ಸಾಕಷ್ಟು ಅನುಕೂಲವಿದ್ದರೂ ನಾವೀ ಹದಿನಾರು ವರುಷದಿಂದ, ಗಂಡ ಹೆಂಡತೀರಿಬ್ಬರೂ ಹೊಟ್ಟೆ ತುಂಬ ಊಟಾ ಮಾಡಿರ ಲಿಲ್ಲ; ಕಣ್ಣುತುಂಬಾ ನಿದ್ದೆಮಾಡಿರಲಿಲ್ಲ; ಪುಣ್ಯಾತ್ಮರಾದ ನೀವು ನಮ್ಮ ಮನೆಗೆ ಕಾಲಿಟ್ಟ ಅಮೃತಘಳಿಗೇ ನಮ್ಮ ಮನಸ್ಸಿನಲ್ಲಿ ಹಿಮಾಲಯ ಪರ್ವತದ ಹಾಗೆ ಹೇರಿಕೊಂಡಿದ್ದ ಚಿಂತೆ ಮಂಜಿನಹಾಗೆ ಮಾಯವಾಗಿ ಹೋಯಿತು. ನೀವು ನಿಮ್ಮ ಮುಂದಿನ ಸುಖದ ಬಹು ಭಾಗ್ಯ ಆ ಹುಡುಗಿಯ ಮೇಲಿನ ಕನಿಕರಕ್ಕಾಗಿ ಕೈ ಬಿಟ್ಟಿದ್ದೀರಿ. ಇದು ಸಾಮಾನ್ಯರು ಮಾಡೋ ದಾನವಲ್ಲ. ನಮ್ಮ ಮನೆಯೋರೆಲ್ಲರೂ ನಿಮಗೆ ಎಷ್ಟು ಋಣಿಗಳಾಗಿದ್ದರೂ ಕಡಿಮೆಯೇ ...(ದಾಸನು ಬಂದು ನಿಲ್ಲುವನು) ಏನಯ್ಯ ?

**ದಾಸ** :—ಚನ್ನಪ್ಪ ಕಾರು ತಂದವರೇ ಬುದ್ದೀ !

**ಗೋಪಿನಾಥರಾವ್** :— ಬಹಳ ಆತುರದಲ್ಲಿ ಹೊರಡ ಬೇಕಾಯಿತು. ಊಟಕ್ಕೆ ತುಂಬಾ ಅರ್ಲಿ; ತಿಂಡೀಗೆ ತುಂಬಾ ಲೇಟ್, ಎಡವಟ್ಟಾಯಿತು. ತಂತೀ ನನಗೇ ಬಂದಿರೋದರಿಂದ ನಾನು ನಿಮ್ಮನ್ನ ಅವಸರಿಸ ಬೇಕಾಗಿದೆ.

**ಶಶಿ** :—(ಎದ್ದು, ಕೋಟನ್ನು ಧರಿಸಿ, ಚಪ್ಪಲಿ ಮೆಟ್ಟಿ,) ತಿಂಡಿ ಆಯಿತು, ಕಾಫಿಯೂ ಆಯಿತು. ನಾನು ಹೋಗಿ ಬಿಟ್ಟುಬರುತೇನೆ.

**ಗೋಪಿನಾಥರಾವ್** :—ನಿಮ್ಮ ತಂದೆಯವರಿಗೆ ಗುಣವಾಗುತಿದ್ದ ಹಾಗೆ ತಿರುಗಿ ಬಂದುಬಿಟ್ಟು ಕೆಲಸಕ್ಕೆ ಆರ್ಡರ್ ಬರೋವರಗೂ ಇಲ್ಲೇ ಇರ ಬೇಕೂಂತ ನಾವೆಲ್ಲರೂ ಕೋರೋದು.

**ಶಶಿ** :—ಆಗಬಹುದು-ಅದಕ್ಕೇನು. ಹೋಗಿಬಿಟ್ಟಬರಲೇ ದಾಸಪ್ಪ !

**ದಾಸಪ್ಪ**:—(ಗದ್ಗದಿತನಾಗಿ) ಓಗಿ ಬೇಗ ಬಂದುಬಿಡಿ ನಮ್ಮಪ್ಪ!

**ಗೋಪಿನಾಥರಾವ್**:—ದಾಸನಿಗಂತೂ ನೀವೂಂದರೆ ........ ಅವನೊಬ್ಬನಿಗೇ ಏನೂ ...ದಾಸ! ನೀನು ಇಲ್ಲೇ ಇರು. (ಬಾಗಿಲಕಡೆ ತಿರುಗಿ) ಉಮಾ! ನೀನು ಇಲ್ಲೇಇರು. ಬಾಗಿಲಿಂದಾಚೆಗೆ ಬರಬಾರದು-ದಾಸಾ! ಹಾಸಿಗೆ ಟ್ರಂಕನ್ನೆಲ್ಲಾ ಕಾರಿನಲ್ಲಿಟ್ಟೆಯಾ?

**ದಾಸಪ್ಪ**:—ಇಟ್ಟೆ ಬುದ್ದೀ.

**ಗೋಪೀನಾಥರಾವ್**.—ಲೇ ಸರಸೂ! ನೀನೇನೋ ಕಳಿಸಬೇಕೂಂತಿದ್ದೆಯಲ್ಲಾ....

**ದಾಸಪ್ಪ**:—ಅಮ್ಮಾ ಅವರು ಕೊಟ್ಟ ಬುಟ್ಟಿಗಳೆರಡನೂ ಕಾರಿನಾಗಿಟ್ಟು ಬಂದೇ ಬುದ್ದೀ.

**ಶಶಿ**:—ಏನವೂ?

**ಗೋಪೀನಾಥರಾವ್**.—ಏನೂ ಇಲ್ಲ. ನಮ್ಮೂರಿನ ಸ್ಪೆಷಲ್ ತರಕಾರಿಗಳು ಒಂದು ಬುಟ್ಟಿ, ಇನ್ನೊಂದು ಮನೇಗೆ ಸ್ವಲ್ಪ ತಿಂಡಿ. ಬೆಂಗಳೂರಿಗೆ ಯಾವುದೂ ಅಪೂರ್ವವಲ್ಲ ಬಿಡೀ, ಏನೋ ಅವಳ ಆಶೆ.

[ಎದ್ದು ಮುಂದೆ ಹೊರಡುವನು. ಶಶಿಯು ಹಿಂಬಾಲಿಸುವನು. ಬಾಗಿಲು ತಟಾಯುವುದಕ್ಕೆ ಮುಂಚೆ ಹಿಂದಿರುಗಿ ಒಮ್ಮೆ ದಾಸನ ಕಡೆಗೂ ಮತ್ತೊಮ್ಮೆ ಹಿಂಬದಿಯಲ್ಲಿ ಕುರ್ಚಿಯಮೇಲೆ ಕುಳಿತು ಕಂಬನಿದುಂಬಿ ನೋಡುತ್ತಿರುವ ಉಮಾ ಕಡೆಗೂ ಪ್ರೇಮ ಪೂರ್ಣ ದೃಷ್ಟಿಯಿಂದ ನೋಡಿ, ಹೊರಟು ಹೋಗುವನು.]

**ದಾಸ**:—ದೇವರು ನಮ್ಮಪ್ಪ? (ಕಣ್ಣೊರಸಿಕೊಳ್ಳುವನು) ಬಡಬಗ್ಗರನ್ನ ಕಷ್ಟದಾಗಿರೋರನ್ನ ಕಂಡರೆ ನಮ್ಮಪ್ಪನ ಮನಸ್ಸು ಕರಗಿ ನೀರಾಗೋಗಿ ಬಿಡುತ್ತೈತೆ!!

[ಅತ್ತ ತಿರುಗುವನು, ಉಮಾ ಕತ್ತು ತಗ್ಗಿಸಿ ಕಣ್ಣೊರಸಿಕೊಳ್ಳುತ್ತಿರುವಳು. ದಾಸನು ಬಾಗಿಲ ಬಳಿಗೆ ಬಂದು ನಿಲ್ಲುವನು. ಕ್ಷಣಕಾಲಾನಂತರ ಇತ್ತಲಿಂದ ಗೋಪೀನಾಥರಾಯನೂ ಸರಸ್ವತಮ್ಮನೂ ಮಾತನಾಡುತ್ತಾ ಒಳಕ್ಕೆಬಂದು ಸೋಫಾದ ಮೇಲೆ ಕೂಡುವರು.]

**ಸರಸ್ವತಮ್ಮ**:—ಏಳೆಂಟು ದಿವಸಗಳಿಂದ ನನಗಂತೂ ದೊಡ್ಡನಿಧಿಯೇ ಸಿಕ್ಕಿದ ಹಾಗಿತ್ತು; ಏನೋ ಸಡಗರ; ಏನೋ ಸಂಭ್ರಮ; ಅಡುಗೆ

ಮನೆ ಬಿಟ್ಟು ಬರದೆ, ಅವರ ಸಂಗಡ ಮಾತುನಾಡದೇ ಇದ್ದರೂಕೂಡ, ಮನಸ್ಸಿನ ತುಂಬಾ ಏನೋ ಉತ್ಸಾಹ ; ಏನೋ ಸಂತೋಷ

**ಗೋಪೀನಾಥರಾವ್** :—ಏನೋ ! ಉಮಾ ಒಂದು ಭಾಗದಲ್ಲಿ ತುಂಬಾ ಪುಣ್ಯವಂತಳು ; ದೇವರಂಥ ಗಂಡ ಸಿಕ್ಕಿದಾನೆ. ವಿಷಕಂಠಯ್ಯ ನಿಜವಾಗಿಯೂ ಮಹದುಪಕಾರ ಮಾಡಿದಾರೆ. ಆತನಿಗೆ ಇನ್ನೂ ಒಂದು ಸಾವಿರ ರೂಪಾಯಿ ಕೊಟ್ಟಿದ್ದರೂ ನ್ಯಾಯವಾಗಿಯೇ ಇತ್ತು.

**ಸರಸ್ವತಮ್ಮ** :— ವಿಷಕಂಠಯ್ಯನ್ನ ನೀವು ಹೊಗಳಬೇಡಿ. ಹುಡುಗ ಚಿನ್ನದಂಥೋನೂ ; ತಂದೇ ಮಾತನ್ನ ತೆಗೆದು ಹಾಕೋನಲ್ಲ ; ಆ ತಂದೇಗೆ ದುಡ್ಡು ಬೇಕಾಗಿತ್ತು, ಅದಕ್ಕಾಗಿ ಮದುವೆಯಾಯಿತು. ಹುಡುಗ ದೇವ ರಂಥೋನು ; ಉಮಾ ವಿಚಾರದಲ್ಲಿ ಅಷ್ಟೊಂದು ಮಮತೆಯಿಂದಿದಾನೆ. ಇದ ರಲ್ಲಿ ವಿಷಕಂಠಯ್ಯಂದೇನು....ಅಲ್ಲಾಂದರೇ ! ನನಗೊಂದಾಶ್ಚರ್ಯವೇ ನೂಂದರೆ-ಇಂಥ ರತ್ನದಂಥಾ ಹುಡುಗ ಇದ್ದೂವೇ, ಅವರಿಗೇ ಐದು ಸಾವಿರ ರೂಪಾಯಿ ವರದಕ್ಷಣೆ....

**ಗೋಪೀನಾಥರಾವ್** :—ಸ್ವಲ್ಪ ಇರು ಸರಸೂ ! ಉಮಾ ! ಡ್ರಾಯಿಂಗ್ ರೂಮಿಗೆ ಹೋಗಿ ರೇಡಿಯೋ ಆರಿಸಿಬಿಡಮ್ಮ ; ಅಳಿಯ ಬಂದಿದ್ದರಿಂದ ಮನೆಗೊಂದು ರೇಡಿಯೋ ಬಂತು.

(ಉಮಾ ಕುರ್ಚಿಯನ್ನು ತಳ್ಳಿಕೊಂಡು ಹೋಗುವಳು.)

[ದಾಸನೂ ಹೊರಕ್ಕೆಹೋಗುವನು.]

**ಗೋಪೀನಾಥರಾವ್** :—ದಾಸಾ ! ಮಹಡಿ ಮೇಲೆ ಕೆಲವು ಕಾಗದ ಪತ್ರನಾ ಹರಡಿ ಬಿಟ್ಟದೀನಿ. ಎಲ್ಲಾನೂ ತೆಗೆದು ಬೀರೂನಲ್ಲಿಟ್ಟು, ಬೀಗ ಹಾಕ್ಕೊಂಡು ಬೀಗದ ಕೈ ಗೊಂಚಲನ್ನ ತಂದುಕೊಡು....ಏನಂದೇ ಸರಸೂ?

**ಸರಸ್ವತಮ್ಮ** :—ಅಲ್ಲಾ ! ಇಂಥ ರತ್ನದಂಥಾ ಹುಡುಗನಿಗೆ ಲಕ್ಷಣ ವಾಗಿರೋ ಹುಡುಗೀನ ಐದು ಸಾವಿರ ರೂಪಾಯಿ ವರದಕ್ಷಣೇ ಸಮೇತ ಕೊಟ್ಟು ಮದುವೇ ಮಾಡಿ ಕೊಡೋರು ಮತ್ತೆ ಯಾರೂ ಸಿಕ್ಕಲಿಲ್ಲವೇಂತ ನನಗೆ ಯೋಚನೆ ಒಂದೊಂದು ಸಲ.

**ಗೋಪೀನಾಥರಾವ್** :— ನೋಡೂ, ಹೀಗಿದ್ದು ಈ ಸಂಬಂಧಕ್ಕೆ ಒಪ್ಪಿಸಿದ್ದಾರಲ್ಲಾ ವಿಷಕಂಠಯ್ಯ ಆತನ ಸಾಹಸನೋಡು.

**ಸರಸ್ವತಮ್ಮ** :—ನನಗೇನೋ ಅರ್ಥವಾಗೊಲ್ಲ; ನಿಮ್ಮ ಬೀಗರನ್ನ ನೋಡಿದರೆ 'ದುಡ್ಡು ದುಡ್ಡೂ'ಂತಿರೋರ ಹಾಗೆ ಕಾಣಿಸುತಾರೆ. ಹುಡುಗನಲ್ಲೇನೂ ಐಬಿಲ್ಲ. ಹೀಗಿದ್ದೂ ಅವರೀಸಂಬಂಧಕ್ಕೆ ಒಪ್ಪಿದ್ದರಲ್ಲಿನ್ನೇನೋ ಇರಬೇಕೂಂತನ್ನಿಸುತ್ತೆ.

**ಗೋಪೀನಾಥರಾವ್** :—ಅದೆಲ್ಲಾ "ಉಮಾ" ಅದೃಷ್ಟ, ಅಷ್ಟೇ! ಇನ್ನೇನು ಕೂತಿರುತ್ತೆ, ಹುಡುಗ ಉಮನ ವಿಚಾರದಲ್ಲಿ ಬೇಜಾರು ಪಟ್ಟುಕೊಂಡಾನೂಂತಿದ್ದೆ, ಪಾಪ, ಎಷ್ಟೋ ವಿಶ್ವಾಸವಾಗಿದಾನೆ—ನಮ್ಮ ಪುಣ್ಯ.

**ಸರಸ್ವತಮ್ಮ** :—ಅಂತೂ ನಿಮ್ಮ ವಿಷಕಂಠಯ್ಯನ್ನ ಮಟ್ಟಿಗೆ ನಂಬಬೇಡಿ; ನನಗೇನೊ ಆತನ ಮಾತುಕಥೆ ನೋಡಿದರೆ ಯಾರ ವಿಚಾರದಲ್ಲೂ ಮಮತೆಯೇ ಇದ್ದ ಹಾಗಿಲ್ಲ....ಸದ್ಯ ಈ ಹುಡುಗನ ಮನಸ್ಸನ್ನ ಕೆಡಸದೇ ಹೋದರೆ ಸಾಕು.

**ಗೋಪೀನಾಥರಾವ್** :—ಅವರ ತಂದೆ ಮಾತಿಗೇ ಕೆಡದಿರೋ ಮನಸ್ಸು ವಿಷಕಂಠಯ್ಯನ ಮಾತಿಗೆ ಕೆಡುತ್ತೆಯೇ! ಅದು ಅಸಾಧ್ಯ

**ಸರಸ್ವತಮ್ಮ** :—ಹುಡುಗನ ವಿಶ್ವಾಸ ನೋಡಿದರೆ, ಹಿಂದಿನ ಜನ್ಮದಲ್ಲಿ ನಮ್ಮೀ ಮನೆಗೆ ಮಗನಾಗಿದ್ದನೇನೋ ಅಂತನ್ನಿಸುತ್ತೆ, "ಉಮಾಗೆ ಕಾಲು ಬಂದೇ ಬರುತ್ತೆ–ಇನ್ನೊಂದೆರಡು ಮೂರು ತಿಂಗಳಲ್ಲಿ ಅವಳೇ ತೋಟದಲ್ಲೆಲ್ಲಾ ನಡೆದಾಡುತಾಳೆ" ಅಂತ ಬಾಯಿ ತುಂಬಾ ಹೇಳುತಾನೆ.

**ಗೋಪೀನಾಥರಾವ್** :—ಬರೀ ಹೇಳೋದೇ ಅಲ್ಲ, ಆ ಮಾತಿಗೆ ನಮಗಿಂತಾ ಹೆಚ್ಚಾಗಿ ಸಂತೋಷಪಡುತಾನೆ.

**ಸರಸ್ವತಮ್ಮ** :—ಆಕೆಗಂತೂ ಈ ಮದುವೆ ಸ್ವಲ್ಪವೂ ಇಷ್ಟವಿದ್ದ ಹಾಗೆನಿಸಲಿಲ್ಲ.

**ಗೋಪೀನಾಥರಾವ್** :—ಅವರ ಮನೆ ಜಗಳ ಏನೋ ಹೇಗೋ? ಕಂಡೋರು ಯಾರು? ಅಂತೂ ಆಕೇನೂ ವಿಷಕಂಠಯ್ಯನ ಕಂಡರೆ ದುರುಗುಟ್ಟಿಕೊಂಡು ಕಿಡಿ ಕಾರುತಿದ್ದರು.

**ಸರಸ್ವತಮ್ಮ** :—ನೋಡಿದಿರಾ! ವಿಷಕಂಠಯ್ಯ ಅಲ್ಲೇ ಗಂಡ ಹೆಂಡತೀರ ಮಧ್ಯೆ ಏನೋ ತಂದು ಹಾಕಿರಬೇಕು.

**ಗೋಪೀನಾಥರಾವ್ :—** ಹೊಸದಾಗಿ ತಂದು ಹಾಕೋದೇನು ; ಈ ಸಂಬಂಧ ಮಾಡಿದರೆ, "ನಿಮಗೆ ನಗದು ಐದು ಸಾವಿರ ರೂಪಾಯಿ ಸಿಗುತ್ತೆ; ಅಲ್ಲದೇ ಮುಂದೆ ಈ ಲಕ್ಷರೂಪಾಯಿ ಆಸ್ತಿಯೆಲ್ಲಾ ನಿಮ್ಮ ಮಗನಿಗೇ ಸಿಗುತ್ತೇ"ಂತ ವಿಷಕಂಠಯ್ಯ ಆತನಿಗೆ ಹೇಳಿ ಒಪ್ಪಿಸಿರಬೇಕು; ಆದರೆ ಆಕೆ 'ಸೊಸೆ' ಸರಿಯಾಗಿಲ್ಲವಲ್ಲಾಂತ ಈ ಸಂಬಂಧ ಬೇಡಾಂದಿರಬೇಕು.

**ಸರಸ್ವತಮ್ಮ :—** ಇರಬೇಕೂ ! ಇರಬೇಕೂ ! ಬೇರೆ ಯಾರಾದರೂ ಐದು ಸಾವಿರ ರೂಪಾಯಿ ವರದಕ್ಷಣೆ ಕೊಟ್ಟರೂ ಆಸ್ತಿ ಸಿಕ್ಕೋ ಛಾನ್ಸ್ ಇರುತಿರಲಿಲ್ಲವಲ್ಲ ; ಅದಕ್ಕೇ ಈಶ್ವರಯ್ಯ ಇದಕ್ಕೆ ಒಪ್ಪಿ, ಹೆಂಡತೀಗೆ ಇಷ್ಟ ವಿರದಿದ್ದರೂ ಹಠ ಮಾಡಿರಬೇಕು.

**ಗೋಪೀನಾಥರಾವ್ :—** ಹೇಗೋ ! ಹುಡುಗನಂತೂ ಬಂಗಾರದ ಹಾಗಿದಾನೆ....ಅಲ್ಲಾ! ಉಮಾ ಅವನ ಸಂಗಡ ಎಷ್ಟು ಬೇಗ ಹ್ಯಾಗೆ ಹೊಂದಿಕೊಂಡುಬಿಟ್ಟಲು ನೋಡಿದೆಯಾ ?

**ಸರಸ್ವತಮ್ಮ :—** ಅಯ್ಯೋ ! ಬಂದು ನಾಲ್ಕು ದಿವಸದ ಮೇಲೆ, ಆ ಹುಡುಗ ಹೊರಡುತೀನೀಂದಾಗ, ಉಮಾ ಗೋಳಾಡೋದನ್ನ ನೋಡೋಕಾಗದೆ, ನಾನು ಸುಮ್ಮ ಸುಮ್ಮನೆ ಮೈಗೆ ಹುಷಾರಾಗಿಲ್ಲಾಂತಾ ಹಾಸಿಗೆ ಮೇಲೆ ಮಲಗಿದ್ದಾಯಿತಲ್ಲ-ಅವನನ್ನ ನಿಲ್ಲಿಸಿಕೊಳ್ಳೋದಕ್ಕೆ.

[ಇಬ್ಬರೂ ನಗುವರು]

**ಗೋಪೀನಾಥರಾವ್ :—** ಹುಚ್ಚು ಹುಡುಗಿ ! ...ನಡೀ ಸರಸೂ ! ನಾನು ಸ್ವಲ್ಪ ಗುಬ್ಬಿಗೆ ಹೋಗಿಬಿಟ್ಟು ಬರಬೇಕು. ಚನ್ನಂಜಪ್ಪನ ಹತ್ತಿರ ಒಂದು ಹತ್ತು ಪಲ್ಲಾ ಭತ್ತ ತಗೊಂಡು ಬರಬೇಕು.

**ಸರಸ್ವತಮ್ಮ :—** ಈಗ ಹ್ಯಾಗೆ ಹೋಗೋದು ?

**ಗೋಪೀನಾಥರಾವ್ .—** ಗುಮಾಸ್ತೆ ವೆಂಕಣ್ಣನ್ನೂ ಕರಕೊಂಡು ಬಸ್ಸಿನಲ್ಲಿ ಹೋಗಿ, ಭತ್ತ ಅಳೆಸಿಹಾಕಿಬಿಟ್ಟು ಅವನ್ನ ಗಾಡಿ ಸಂಗಡ ಬರೋಕೆ ಹೇಳಿಬಿಟ್ಟು ನಾನು ರಾತ್ರೇಗೇ ಬಂದುಬಿಡುತೇನೆ—

(ಗೋಪೀನಾಥರಾಯನೂ ಹಿಂದೆ ಸರಸ್ವತಮ್ಮನೂ ಹೊರಡುವರು.)

# ಅಂಕ ೨ - ಪ್ರವೇಶ ೫

[ರಸ್ತೆಯಿಂದ ತುಸು ದೂರದ ಮರದಡಿ. ಈಶ್ವರಯ್ಯ ಮತ್ತು ವಿಷಕಂಠಯ್ಯ ನಿಂತು ಮಾತನಾಡುತ್ತಿರುವರು. ಈಶ್ವರಯ್ಯನು ಬಹು ಬೇಸರಗೊಂಡಂತಿದೆ.]

**ಈಶ್ವರಯ್ಯ** :—ಎಂಥಾ ದುರವಸ್ಥೆಗಳೇ ಮೇಲಿಂದ ಮೇಲೆ ಬರುತಾ ಇವೆ. ಸಾಕಪ್ಪಾ ಸಾಕು. ಒಂದೇ ಒಂದು ತಪ್ಪು ಹೆಜ್ಜೆಯಿಂದ, ಕೊನೆಯಿಲ್ಲದ ಸಿಕ್ಕಿಗೆ ಬಲಿಯಾದ ಹಾಗಾಯಿತು.

**ವಿಷಕಂಠಯ್ಯ** :—ಇದು ಕೆಲಸ ಸಾಧಿಸೋರ ಲಕ್ಷಣವಲ್ಲಾ! ಖಂಡಿತವಾಗಿಯೂ ಅಲ್ಲ!!

**ಈಶ್ವರಯ್ಯ** :—ಅಲ್ಲಯ್ಯಾ! ನಿನ್ನ ತಂತಿಯಿಂದ ಅವನೇನೋ ನಿಂತು ನಿಂತಹಾಗೇ ಮನೆಗೆ ಬಂದು ಬಿಟ್ಟ, ನಾನು ಕಲ್ಲುಗುಂಡಾಗಿ ಮನೆಗೆ ಹಿಂದಿರುಗಿದ್ದನ್ನ ಕಾಣುತಿದ್ದಹಾಗೆ ಎಂಥೆಂಥಾ ಮಾತಾಡಿಬಿಟ್ಟಾ, ವಿಷಕಂಠಯ್ಯಾ! ಹೊಟ್ಟೆ ಕುದಿಯುತ್ತೆ ನೆನಸಿಕೊಂಡರೆ, ಈಗಲಾದರೂ ನಾನು ಆದದ್ದು ಆಗಿಹೋಯಿತೂಂತ ಸುಮ್ಮನಾಗಿ ಬಿಡೋದೇ ಕ್ಷೇಮಾಂತ ಕಾಣಿಸುತ್ತೆ

**ವಿಷಕಂಠಯ್ಯ** :—ಸಾರ್ಥಕವಾಯಿತು ಬಿಡೀ; ಅಲ್ಲಾ "ಸೊಸೇ! ಸೊಸೇ!!" ಅಂತ ಹಂಬಲಿಸುತಿರೋ ಆ ಭಾಗಮ್ಮನೋರ ದುಃಖ ನೋಡಲಾರದೇನಾದರೂ, ನಾಗೇಂದ್ರರಾಯರ ಮಗಳ ಸಂಗಡ ಮದುಗೆ ಒಪ್ಪಿಸಬೇಕು. ಇಲ್ಲದಿದ್ದರೇ, ನಿಮಗೆ ಎರಡು ಕಡೇಯಿಂದಾಲೂ ತುಂಬ ಅನ್ಯಾಯವಾಗಿ ಬಿಡುತ್ತೆ.

**ಈಶ್ವರಯ್ಯ** .—ಅಲ್ಲಯ್ಯಾ! "ಸುಳ್ಳು ಸುಳ್ಳೇ ತಂತಿ ಕೊಟ್ಟು ನನ್ನ ಕರಿಸಿಬಿಟ್ಟಿರಲ್ಲಾ! ತಾಳಿ ಕಟ್ಟಿದ ಹೆಂಡತಿ ಸಂಗಡ ನಾಲ್ಕುದಿನಾ ಇರೋದನ್ನ ನೋಡಿ ಸೈರಿಸಲಾರದಂಥಾವರೇ ನನ್ನ ತಂದೇ?" ಅಂತ ಎದುರಿಗೇ ಕೇಳಿಬಿಟ್ಟು ಕಣ್ಣೀರು ಸುರಿಸದನಲ್ಲಯ್ಯಾ ಶಶಿ. ಎಂಥ ಅವಿವೇಕವಾಯಿತು ನೋಡು. ನಮ್ಮ ಏರ್ಪಾಟುಗಳಿಂದ ಹುಡುಗನ ಕಣ್ಣಿನಲ್ಲಿ ನೀರು ತರಿಸುತಾ ಇದೇವೆ ಅಷ್ಟೆ.

**ವಿಷಕಂಠಯ್ಯ:**—ಎಂಥಾ ಹುಡುಗ ಅವನು ತಾನೇ ಬಿಡಿ ಸ್ವಾಮೀ; ಸ್ವಲ್ಪವಾದರೂ ವ್ಯವಹಾರಜ್ಞಾನವಿಲ್ಲ. ಶುದ್ಧ ಎಳವು.

**ಈಶ್ವರಯ್ಯ** :—(ನೊಂದು) ವಿಷಕಂಠಯ್ಯಾ' ನೀನು ಶಶೀನನ್ನ ಬೇಡಾ ! ಅವನು ಕೇಳಿದ್ದು ನ್ಯಾಯವಾದ ಪ್ರಶ್ನೆಯೇ.

**ವಿಷಕಂಠಯ್ಯ** :—ಸರಿಹೋಯಿತು ಬಿಡಿ. ಅಲ್ಲಿಗೆ ಎಲ್ಲಾ ಸರಿ ಹೋಯಿತು. ಅಲ್ಲಾ ಸ್ವಾಮೀ! ಆ ಹಳ್ಳಿ ಮುಕ್ಕ—ಅನಂತು ತಂಗೀನ ನೋಡಿಬಿಟ್ಟ ; ಅದನ್ನ ಮದುವೆಮಾಡಿಕೊಳ್ಳುತೀನೀಂತ ಕುಣಿದಾಡಿಬಿಟ್ಟ. ಸರಿ, ಆಯಿತು—ಏನೋ ಅವನ ಅದೃಷ್ಟ ಚೆನ್ನಾಗಿತ್ತು. ಅನ್ನರೇಖೆ, ಧನ ರೇಖೆ ಘಟ್ಟಿಯಾಗಿತ್ತು ; ಅನುಕೂಲವಾಗಿ ಅಷ್ಟು ದುಡ್ಡು-ಸಾಮಾನು ಕೈಗೆ ಬಂತು ದಿಂಡಾಗಿ. ಈಗ ಆ ಹೆಳವೀನೇ ಇವನ ಕಣ್ಣಿಗೆ ತ್ರಿಪುರಸುಂದರಿಯಾಗಿ ಬಿಟ್ಟಳು—ಆ ಹಳ್ಳೀ ಮುಕ್ಕನ ನೆನಪಾದರೂ ಇಲ್ಲ.

**ಈಶ್ವರಯ್ಯ** :— ಹಾಗೇಂತ ಹ್ಯಾಗೆ ಹೇಳೋದು ?

**ವಿಷಕಂಠಯ್ಯ** —ಹ್ಯಾಗೇನು ಸ್ವಾಮೀ! ಇದೇನು ಮಹಾಶಾಸ್ತ್ರವೇ? ಈ ಹುಡುಗರಿಗೆ ಒಂದು ಹೆಣ್ಣು ಬೇಕು. ಅಷ್ಟೇ ; ತಿಳೀತೇ? ನಿಮ್ಮ ಮಗಾ ಎಂ. ಎ. ಪ್ಯಾಸ್ ಮಾಡಿದಾನೇ—ಪ್ರಪಂಚಕ್ಕೇ ಅತಿವಸ್ತೂಂತ ತಿಳೀಬೇಡಿ. ಅವನೂ ಎಲ್ಲರ ಹಾಗೆ ಹುಡುಗ. ವಯಸ್ಸು—ಹೆಣ್ಣು ಬೇಕು—ಹೆಣ್ಣಿನ ಸಂಗಡ ಇರಬೇಕು-ಅಷ್ಟೇ, ನೀವು ಸ್ವಲ್ಪ ಹಿಂದಿನ ಹಾಗೆ ಹಠಮಾಡಿ, ಯಜಮಾನಿಕೆ ನಡೆಸಿ, ಎಲ್ಲಾ ಸರಿಹೋಗುತ್ತೆ.

**ಈಶ್ವರಯ್ಯ** :—ಮೊದಲನೇ ಮದುವೇ ಅಷ್ಟು ಸುಲಭವಾಗಿ ಕಾಣಲಿಲ್ಲಪ್ಪಾ ಈ ಎರಡನೇದು.

**ವಿಷಕಂಠಯ್ಯ** :— ನೀವೇ ಹಾಗಂದುಬಿಟ್ಟರೆ ಆದಹಾಗೇ ಆಯಿತು ಬಿಡಿ. ನೋಡೀ ಯಾವ ಪ್ಲಾನೂ ಅರ್ಧದಲ್ಲಿ ಅವಿವೇಕವಾಗಿ ಕಾಣಿಸುತ್ತೆ. ಆ ಮನೆಯೇ ತಗೊಳ್ಳಿ, ಅಷ್ಟು ದೊಡ್ಡ ಮನೆ ರಂಗರಾಯರದು. ತಾರಸಿ, ಗಾರೆ ಸುಣ್ಣಬಣ್ಣ ಆಗೋದಕ್ಕೆ ಮುಂಚೆ ಎಷ್ಟು ಅವಲಕ್ಷಣವಾಗಿ ಕಾಣಿಸುತಾ ಇತ್ತು ! ಈಗ ಹ್ಯಾಗೆ ಜಿಗೀಜಿಗೀಂತ ಮೆರೀತಾ ಇದೆ. ಪ್ರಪಂಚದಲ್ಲಿ ಎಲ್ಲಾ ಅಷ್ಟೇ. ಯಾವ ಕೆಲಸಾನೂ ಅರ್ಧಾಂತರದಲ್ಲಿ ನಿಲ್ಲಿಸಿಬಿಟ್ಟು ಕೈ ಕೈ

ಹಿಸಿಕ್ಕೋಬಾರದು. ಈಗ ನೋಡಿ; ನಮ್ಮ ಹಿಂದಿನ ಪ್ಲಾನ್‌ನಂತೆ ಆದರೆ, ಮನೆಗೆ ಲಕ್ಷ್ಮೀ ಅಂಥ ಸೊಸೆ ಬರುತಾಳೆ-ಭಾಗಮ್ಮನೋರ ಮನಸ್ಸಿಗೆ ನೆಮ್ಮದಿಯಾಗುತ್ತೆ. ನಿಮ್ಮ ಕೈಗೆ ಇನ್ನೊಂದ್ಹೈದಾರುಸಾವಿರ ರೂಪಾಯಿ ಹಣ ಬಂದು, ನೀವೀ ಊರಿನಲ್ಲೊಂದು ಮನೆಮಠ ಮಾಡೋದಕ್ಕನುಕೂಲವಾಗುತ್ತೆ. ನಿಮ್ಮ ಮಗನಿಗೂ ಸಲಕ್ಷಣವಾದ ಹೆಂಡತಿಸಿಕ್ಕಿ, ಹಿಂದಿನದೆಲ್ಲಾ ಮರತು, ಮನಸ್ಸು ಸಮಾಧಾನವಾಗುತ್ತೆ; ನಿಮ್ಮ ವಂಶಾನೂ ಬೆಳೆಯುತ್ತೇ.

**ಈಶ್ವರಯ್ಯ** :—ನೀನು ಹೇಳೋದೆಲ್ಲಾ ನ್ಯಾಯವಾಗಿ ಕಾಣುತ್ತೇ. ಅದರಂತೆ ನಡೆಯೋದಕ್ಕೆ ಹೋದರೆ ಇಲ್ಲದ ಮುಜುಗುರಗಳೆಲ್ಲಾ ಸುತ್ತಿಕೊಳ್ಳುತ್ತವೆ.

**ವಿಷಕಂಠಯ್ಯ** :—ಹೌದೇ ಹೌದು ಸ್ವಾಮೀ! ಜಗತ್ತಿನಲ್ಲಿ ಯಾವ ಕೆಲಸ ತಾನೇ ಮುಜುಗರವಿಲ್ಲದೆ ಆಗಬಹುದು! ನಿತ್ಯದ್ದೊಂದೂಟ ತಗೊಳ್ಳೀ; ಗಂಡಹೆಂಡತೀರ ವ್ಯವಹಾರ ತಗೋಳ್ಳಿ, ಏತಿ ಪ್ರೀತಿಗಳಿಲ್ಲದೆ ಪ್ರಪಂಚದ ವ್ಯವಹಾರವೇ ಇಲ್ಲ.

**ಈಶ್ವರಯ್ಯ** :—ಈಗೇನು ಮಾಡೋದು - ಹ್ಯಾಗೆ ಮಾಡೋದು ಹೇಳಪ್ಪ; ನೀನು ಭರವಸೆ ಕೊಟ್ಟಿದ್ದಹಾಗೆ ಆ ಹುಡುಗಿ ಮೆತ್ತಗಾಗೋದು ಹಾಗಿರಲಿ, ಇವನೇ ಹೋಗಿ ಅಲ್ಲಿ ಮೆಚ್ಚಿ ಕೂತುಕೊಳ್ಳೋ ಹಾಗಾಗಿದೆ. ಈಗ ಅಲ್ಲಿಂದ ಕರೆಸಿದ್ದಕ್ಕೆ ಸಿಟ್ಟಾಗಿ ತಿರುಗಿಬಿದ್ದಿದಾನೆ.

**ವಿಷಕಂಠಯ್ಯ** :—ಆ ಹುಡುಗೀ ವಿಚಾರ ಬಿಡಿ. ಹುಡುಗೊಬ್ಬ ಸರಿಹೋದರೆ, 'ಹೆಳವಿ ಹೆಣ್ಣು; ಆರುತಿಂಗಳು ನೋಡಾಯಿತು, ಸಂಸಾರಕ್ಕೆ ಅನುಕೂಲವಾಗಲಿಲ್ಲಾಂತ, ಬೇರೆ ಹೆಣ್ಣನ್ನ ಮದುವೆ ಮಾಡಿಕೊಳ್ಳುತೇನೇ'ಂತ, ಗೋಪೀನಾಥರಾಯನಿಗೆ ಒಂದು ಕಾಗದ ಹಾಕಿಸಿಬಿಟ್ಟರಾಯಿತು; ಮುಂದಿನ ಕೆಲಸ ನಾನು ನೋಡಿಕೊಳ್ಳುತೇನೆ.

**ಈಶ್ವರಯ್ಯ** :—ಅವನು ಹಾಗೆ ಬರೆದಾನೇ ವಿಷಕಂಠಯ್ಯ! ನಿನಗವನ ಸಮಾಚಾರ ಗೊತ್ತಿಲ್ಲ ಆವತ್ತು ಅದೇನು ತಿಕ್ಕಲು ತಿರುಗಿತ್ತೋ ಏನೋ; ಅವರಮ್ಮ ಆ ಹುಡುಗೀನ-ಅನಂತೂ ತಂಗೀನ ಮಾಡಿಕೋ

ಬೇಡಾಂದ ಸೇಡಿಗೆ, ಈ ಹೆಣ್ಣನ್ನ ಮಾಡಿಕೋತಿನೀಂತ ಒಪ್ಪಿದನೇ ಹೊರ ತೂವೆ, ಈಗ ಮತ್ತೆ ಮದುವೇಂದರೆ, ಇನ್ನು ಪೂರ್ತಿ ಎದುರು ಬಿದ್ದು ಬಿಡುತಾನೆ.

**ವಿಷಕಂಠಯ್ಯ** :—ಹೌದು ಈಶ್ವರಯ್ಯನೋರೇ, ಎದುರು ಬೀಳು ತಾನೆ; ಆ ಮೇಲೆ ನೀವು ಹರಹಿಡಿದು ಸಮಾಧಾನ ಹೇಳಬೇಕು ನಿಮ್ಮ ಮಾತುನಡೆಯೋ ಹಾಗೆ ಮಾಡಿಕೋ ಬೇಕು. ಇಲ್ಲದಿದ್ದರೆ ನೀವು ತಂದೆ ಯಾಗಿ ಶಶಿ ಮಗನಾದ್ದಕ್ಕೇನು ಗುರುತು? ಏನಿಬ್ಬರೂ ಹೊರಗಡೆ ಸ್ನೇಹಿತರೇ' ನೀವು ಹೇಳೋಕೇ, ಅವನು ಕೇಳಿ ವರಸಿಹಾಕಿಬಿಡೋಕೇ !!

**ಈಶ್ವರಯ್ಯ** :—ಏನೋ ! ನಿನ್ನಸಲಹೆಯಂತೆ ಏನೋ ಒಂದು ವಕ್ರದ ದಾರಿ ಹಿಡಿದರೂ, ಎಲ್ಲಾ ಸರಿಯಾಗಿ ಬಿಟ್ಟರೆ ಸಾಕೂನ್ನಿಸಿ ಬಿಟ್ಟಿದೆ.

**ವಿಷಕಂಠಯ್ಯ** :—ವಕ್ರದ ದಾರಿಯೇ ' ಅದೇನು ಸ್ವಾಮಿ ಸಲ ಸಲಕ್ಕೂ ಹಾಗಂತಿದೀರಾ ? ಎರಡುಕಡೆಯಿಂದ ಗಂಟು ಸಿಕ್ಕೋದಾರಿ ತೋರಿಸಿದರೇ........

**ಈಶ್ವರಯ್ಯ** .—ಅಯ್ಯೋ ! ಸುಮ್ಮನಾಗು. ನಿನ್ನ ಗಂಟಿನ ಮನೆ ಹಾಳಾಯಿತು. ಯಾಕಾದರೂ ಈ ಗಂಟಿಗೆ ಆಶೆ ಪಟ್ಟೋನೇ ' ಹಾಳುಗಂಟಿ ನಾಶೆಯಿಂದ ಮನೆಯೇ ಮುರಿದು ಹೋಗೋಸ್ಥಿತಿಗೆ ಬಂದಿದೆ. ಈಗವನೇ ನಾದರೂ ಎದುರು ಬಿದ್ದು ಬಿಟ್ಟರೆ, ಮತ್ತೆ ನನಗೇ ಶಶೀಗೇ ಇಷ್ಟು ವರುಷ ಬೆಳೆದುಬಂದ ಮಧುರ ಬಾಂಧವ್ಯ ಮುರಿದು ಮುಟ್ಟುಗೋಲಾಗಿ ಬಿಡುತ್ತೆ. ನನ್ನ ಅವಳ ಸಂಬಂಧವಂತೂ ಖೈಂಯಾಗೇ ನಿಂತುಬಿಡಿತ್ತೆ

**ವಿಷಕಂಠಯ್ಯ** :—ಈಗೇನು ಮಾಡಿತೀರಿ ಹೇಳಿ ನಿಮಗೆ ಎಷ್ಟು ಹೇಳಿದರೂ' ನೀವು "ಹೆಂಡತಿ ಮಕ್ಕಳು ನನ್ನಡಿಯಾಳುಗಳೂ"ನ್ನೋದನ್ನ ತಿಳೀಲಾರರಿ.

**ಈಶ್ವರಯ್ಯ** :—ಶಶೀಗೆ ಈ ಹೊಸ ಸೂಚನೇ ತಿಳಿಸುತೇನೆ. ಅವಳೂ ಎದುರಿಗಿರೋವಾಗಲೇ ಪ್ರಸ್ತಾಪ ಮಾಡುತೇನೆ ಏನಾದರೂ ಒಪ್ಪಿಸೋದಕ್ಕೆ ಸಾಧ್ಯವಾದರೆ ಸರಿ. ಇಲ್ಲದೇ ಹೋದರೆ ನೀನು ಇನ್ನೇನಾ

**ವಿಷಕಂಠಯ್ಯ**—ನಡೀರಿ. ನಿಮ್ಮಂತೆ ನೀವು ನಿಮ್ಮಮನೇಲಿ ಪ್ರಯತ್ನ ಮಾಡಿ. ನಾನೂ ಹ್ಯಾಗೂ ನಿಮ್ಮನೇಲಿ ಸಾಕಷ್ಟು ನಿಷ್ಠುರವಾಗಿ ಬಿಟ್ಟಿದೀನಿ; ಏನಾದರೂ ಸರಿ, ಶಶೀಗೆ ನಾಗೇಂದ್ರರಾಯನ ಮಗಳನ್ನ ಮದುವೆ ಮಾಡಿಸಲೇ ಬೇಕು.

[ವಿಷಕಂಠಯ್ಯನು ಮುಂದೆ, ಈಶ್ವರಯ್ಯನು ಹಿಂದೆ ಹೋಗುವರು.]

---

# ಅಂಕ ೨ - ಪ್ರವೇಶ ೬

[ಈಶ್ವರಯ್ಯನ ಮನೆಯ ನಡುವೆ. ಮೇಜಿನ ಪಕ್ಕದಲ್ಲಿನ ಕುರ್ಚಿಯೊಂದರಲ್ಲಿ ಶಶಿಯು ತಲೆಯನ್ನೂ ಕೈಗಳನ್ನೂ ಮೇಜಿನಮೇಲೆ ಚಾಚಿ ಕುಳಿತಿರುವನು. ಪಕ್ಕದ ಕುರ್ಚಿಯಲ್ಲಿ ಕುಳಿತಿರುವ ಈಶ್ವರಯ್ಯನು ಮಗನನ್ನು ಬಹುವಾಗಿ ಸಮಾಧಾನ ಮಾಡುತ್ತಿರುವನು]

**ಈಶ್ವರಯ್ಯ:**—ಅಲ್ಲವಯ್ಯಾ ಶಶೀ! ಹುಡುಗೀ ಹುಟ್ಟಿದ ಹಬ್ಬಕ್ಕೇಂತ ಹಠಮಾಡಿ ಹೊರಟು, ಒಂದು ದಿನದ ಮಟ್ಟಿಗೆ ಇದ್ದು ಬರುತೇನೇಂತ ಹೋದೋನು, ಎಂಟು ದಿನವಾದರೂ ಬರದೇನೇ, ಬರೆದ ಒಂದು ಕಾಗದಕ್ಕೂ ಜವಾಬೇ ಕೊಡದೇ ಕೂತು ಬಿಟ್ಟರೆ, ನಾವೇನಂತ ತಿಳಿಕೋಬೇಕು? ನೀನು ಅಲ್ಲೇ ಇದೀಯೋ, ಇಲ್ಲಾ ಬೇರೆಲ್ಲಿಗಾದರೂ ಹೋಗಿದೀಯೋ, ಇಲ್ಲ ನಿನ್ನ ಮೈಗೆ ಹುಷಾರಿಲ್ಲವೋ ಅಂತ ನೂರಾರುಧರ ಯೋಚನೆ ಮಾಡುತಾ ಹಗಲೂ ರಾತ್ರೆ ಕುದೀತಿದ್ವಲ್ಲಾ! ಅದೇನು ನಿನ್ನ ಮನಸ್ಸಿಗೆ ಬರಲಿಲ್ಲಾ ಅಲ್ಲವೇ? ಹ್ಯಾಗಾದರೂ ನಿನ್ನನ್ನ ಮತ್ತೆ ಮನೇಲಿ ನೋಡಿದರೆ ಸಾಕೂಂತ ಆಶೆಯಿಂದ, ಏನೋ ನನಗೆ ಖಾಯಿಲೇಂತ ತಂತೀ ಕೊಟ್ಟದ್ದೇ ಮಹಾಪರಾಧವಾಗಿ ಹೋಯಿತೇ?

**ಶಶಿ:**—(ಕತ್ತೆತ್ತಿ ದುಃಖದಿಂದ) ಅಪ್ಪಾ! ಮತ್ತೆ ಮತ್ತೆ ಅದೇ ಮಾತನ್ನೇಕೆ ನನಗೆ ಹೇಳುತಾ ಇದೀರಿ? 'ಮನೆಗೊಬ್ಬಮಗಾ, ಅವನ ಮದುವೆ ಹೀಗಾಗಬೇಕು-ಹಾಗಾಗ ಬೇಕೂಂತಿದ್ದಿರೀ. ಆಯಿತು. ನನ್ನ ಮನಸ್ಸಿನ ಆಶೆಗಳಿಗೆಲ್ಲಾ ಬೆಂಕಿ ಇಟ್ಟು, ಅನ್ಮನಾಶೆಗಳನ್ನೆಲ್ಲಾ ತುಳಿದು ಮೆಟ್ಟಿ, ನಿಮ್ಮಾಶೆಯಂತೆ ನೀವು ಹೇಳಿದ ಹುಡುಗೀನೇ ಹೆಂಡತೀಂತ ಮದುವೆಯಾದ್ದಾಯಿತು. ಮದುವೆಯಾಗಿ ಆ ಹುಡುಗೀ ಕೊರಳಿಗೆ ದೇವತೆಗಳ ಸಾಕ್ಷಿಯಾಗಿ ತಾಳಿ ಕಟ್ಟಿದ ಮೇಲೆ, 'ಅವಳು ಹಾಗೇ; ಹೆಂಡತಿ ಯಾಗೋದಕ್ಕೇ ಯೋಗ್ಯಳಲ್ಲ-ನೀನು ಅಲ್ಲಿಗೆ ಹೋಗಲೇ ಬ್ಯಾಡಾ'ಂತ, ನನ್ನನ್ನ ಅಡ್ಡಿ ಮಾಡೋದು ಯಾವ ಧರ್ಮಾಪ್ಪಾ. ಕುರುಡಿಯೋ, ಕುಂಟಿಯೋ, ಹೆಳವಿಯೋ, ಕಿವಿಡಿಯೋ ನಿಮ್ಮ ಮಾತಿನಂತೆ ಮದುವೆಯಾದ್ದಾಯಿತು. ಇನ್ನು ನಾನು ಅವಳನ್ನ-ಆ ನನ್ನ ಹೆಂಡತೀನ ಮುಂದೆ ನನ್ನ ಸಂಗಡ ಸಂಸಾರ

ಮಾಡೋದಕ್ಕೆ ಸರಿಯಾಗೋ ಹಾಗೆ ಮಾಡಿಕೊಂಡೇ ಬಾಳಬೇಕು. ಇನ್ನು ನಿಮ್ಮ ಯಾವ ಮಾತನ್ನೂ ಕೇಳಲಾರೆ. ಹುಟ್ಟಿದಾರಭ್ಯ ನಿಮ್ಮ ಮಾತಿಗೆ ಬದಲು ಹೇಳದೇ ಬಂದೆ. ಕಡೇಗೆ ನನ್ನ ಹೊಟ್ಟೆಯು ಸಂಕಟ ಬೆಟ್ಟದಷ್ಟಿದ್ದರೂ ನುಂಗಿ, ನೀವು ನನಗಾಗಿ ಹಾಕಿದ ಬಂಡವಾಳಾನ ಹಿಂದಿರುಗಿಸುವ ಒಂದೇ ಉದ್ದೇಶದಿಂದ ಹೇಳವೀನ ಮದುವೆಯಾದೆ. ಮದುವೆಯಾಗದಿದ್ದರೆ ಆ ಹುಡುಗಿ ನನ್ನ ಭಾಗಕ್ಕೆ ಹೆಳವಿ, ಕುರೂಪಿ. ಈಗ ಅವಳು ನನ್ನ ಹೆಂಡತಿ. ನಾವಿಬ್ಬರೂ ಸುಖದುಃಖದಲ್ಲಿ ಸಮಭಾಗಿಗಳು. ಅವಳನ್ನ ಯಾರೇನಂದು ಹೀಯಾಳಿಸಿದರೂ, ನನ್ನನ್ನೇ ಅಂದ ಹಾಗೆ; ಅವಳ ಕಣ್ಣಲ್ಲಿ ಯಾರು ನೀರು ತರಿಸಿದರೂ, ನನ್ನ ಕಣ್ಣುಗಳಿನ್ನೇ ಕುಕ್ಕಿದಹಾಗೇ, ಇದು ನನ್ನ ತೀರ್ಮಾನದ ಮಾತುಗಳು ನಿಮ್ಮ ಮಗ ನಿಮ್ಮ ಕಣ್ಣೆದುರಿಗೇ ಬದುಕಿರ ಬೇಕೂಂತಿದ್ದರೆ, ನನ್ನ ಅಲ್ಲಿಗೆ ಹೋಗಲು ಬಿಡಿ ನನ್ನ ಹೆಂಡತೀಗೆ ನಡೆಯುವಷ್ಟು ಕಾಲು ಬಂದಾಗ, ಇಲ್ಲಿಗೆ ಕರೆತರುತೇನೆ-ಆಗ ನೋಡಿದವರು ನಗದೇ ಇದ್ದಾರು; ನನಗೂ, ಅವಳಿಗೂ, ನಿಮಗೂ, ಅಮ್ಮನಿಗೂ, ಸಂಕಟವಾಗದೇ ಹೋದೀತು. ಅದುವರೆಗೂ ನನ್ನನ್ನ ಬಿಡಿ

**ಈಶ್ವರಯ್ಯ**.—ನಿನ್ನ ತಲೆ ತುಂಬಾ ಕೆಡುತಾ ಇದೆ. ವಿಷಕಂಠಯ್ಯ ಹೇಳಿದಹಾಗೆ ನಿನಗೆ ಹೆಣ್ಣಿನ ಹುಚ್ಚು....

**ಶಶಿ**:—(ಸಿಡಿದು) ವಿಷಕಂಠಯ್ಯನ ಕಣ್ಣಿಂಗಿತು—ಅವನ ನಾಲಗೆ ಸೇದಿತು. (ಎದ್ದುಹೊಗಲಿರುವನು.)

**ಈಶ್ವರಯ್ಯ**:—(ಕೈ ಹಿಡಿದು) ಅಷ್ಟೊಂದು ಸಿಟ್ಟಾಗಬೇಡ ಶಶಿ. ಕೂತುಕೋ. ಅವನು ನಮಗೋಸ್ಕರ ಎಷ್ಟು ವದ್ದಾಡುತಿದಾನೇಂತ ನನಗೆ ಗೊತ್ತು.

**ಶಶಿ**:—ನಮ್ಮ ಮನೇನ ಮುಳುಗಿಸೋವರೆಗೂ ಅವನ ವದ್ದಾಟ ನಿಲ್ಲೊಲ್ಲ.

**ಈಶ್ವರಯ್ಯ**:—ಹೋಗಲೀ ಅವನ ಮಾತು ಬಿಡು. ಈಗ ನೀನು 'ಕುರುಡೀನ ಚಂದಕ್ಕನ್ನ ಮಾಡುತೀನಿ ಅನ್ನೊ' ಮಾತನ್ನ ಸ್ವಲ್ಪ ಮರೆತರೆ ನಾನೇನಾದರೂ ಮಾತನಾಡಬಹುದು.

[ಶಶಿ ಸುಮ್ಮನಿರುವನು]

**ಈಶ್ವರಯ್ಯ** ·—ಹೇಳಲೇ? ನೀನು ಹೇಳೊಂದರೆ, ಸಮಾಧಾನ ವಾಗಿ ಕೇಳುತೀನೀಂದರೆ ಹೇಳುತೀನಪ್ಪ

[ಶಶಿ ಸುಮ್ಮನಿರುವನು.]

**ಈಶ್ವರಯ್ಯ** ·—ಈಗ ನಿಮ್ಮಮ್ಮ ದಿನಾ ಕಣ್ಣೀರಿಡುತಾ ಇದಾಳೆ– ಮನೇಗೆ ಸೊಸೆ ಬರಲಿಲ್ಲಾಂತ. ಹತ್ತಾರು ವರುಷಗಳಿಂದ ಅವಳ ಮನಸ್ಸಿನಲ್ಲಿದ್ದ ಆಸೆ ಭಂಗವಾಗಿ ನಿಂತಿದೆ

[ಶಶಿಯು ಕಡೆ ನೋಡುವನು. ಅವನು ಕತ್ತು ತಗ್ಗಿಸಿ ಕುಳಿತಿರುವನು]

**ಈಶ್ವರಯ್ಯ** :—ಏನೋ ನನ್ನ ಅವಿವೇಕದಿಂದ, ಯಾವುದೋ ದುರಾಶೆಯಿಂದ ಈ ಹುಡುಗಿಯನ್ನ ಮದುವೆಯಾದ್ದಾಯಿತು. ಪಾಪ! ಅದರ ದುರಾದೃಷ್ಟ! ಅದು ನಿನಗೆ ಸರಿಯಾದ.........ಏನೋ.........ಈ ಸಂಬಂಧದಲ್ಲಿ ವರಸಾಮ್ಯ ಅಷ್ಟು ಸಮಂಜಸವಾಗಿಲ್ಲಾ, ಅಲ್ಲದೆ ಅವಳ ಮನಸ್ಸಿಗೆ ನೆಮ್ಮದಿಯಾಗಿಲ್ಲ ಈಗ ಆ ಹುಡುಗಿಯಂತೂ ತಂದೆಯ ಮನೇಲಿ ನೆಮ್ಮದಿಯಾಗಿದೆಯಲ್ಲಾ, ಈಗ ನಿಮ್ಮಮ್ಮನಿಗೋಸ್ಕರ, ಮುಂದೆ ನಿನಗೋಸ್ಕರವೂ ನೆಮ್ಮದಿಯಾಗಿರೋ ಹಾಗೆ, ವರಸಾಮ್ಯ ಚೆನ್ನಾಗಿರೊ ಅಂಥ ಒಂದು ಸ್ಫುರದ್ರೂಪಿ, ವಿದ್ಯಾವತಿ, ಹೆಣ್ಣನ್ನ ತಂದು ಮದುವೆ ಮಾಡೋಣಾಂತಾ........

**ಶಶಿ** ·—(ತಟ್ಟನೆ ಕತ್ತೆತ್ತಿ ಗಟ್ಟಿಯಾಗಿ) ಅಪ್ಪಾ!! (ಎಂದು ಕೂಗಿ ಮತ್ತೆ ಕತ್ತನ್ನು ತಗ್ಗಿಸುವನು.)

**ಈಶ್ವರಯ್ಯ** :—ನೋಡೂ ಮಗೂ! ಈಗ ನೋಡಿರೋದು ಫಾರೆಸ್ಟ್ ಆಫೀಸರ್ ನಾಗೇಂದ್ರರಾಯರ ಮಗಳು–ರಮಾಂತ. ಹದಿನೆಂಟು ವರುಷ ತುಂಬಿದೆ. ಮೆಟ್ರಿಕ್ಯುಲೇಷ‌ನ್ ಪ್ಯಾಸಾಗಿದೆ. ಸಂಗೀತಾನೂ ಚೆನ್ನಾಗಿ ಬರುತ್ತಂತೇ. ವರಸಾಮ್ಯ ಚೆನ್ನಾಗಿದೆ ನೀನೊಪ್ಪಿಬಿಟ್ಟರೆ.........

**ಶಶಿ** :—ಅಮ್ಮಾ!! (ಎಂದು ಚೀರುತ್ತಾ ಎದ್ದು ಒಳಕ್ಕೆ ಓಡಿ ಹೋಗುವನು.)

[ಈಶ್ವರಯ್ಯನು ಗಾಬರಿಗೊಂಡು ಮೇಲೇಳುತ್ತಿರುವಂತೆಯೇ ಇತ್ತಲಿಂದ ಭಾಗಮ್ಮನು ಓಡಿ ಬರುವಳು]

ಭಾಗಮ್ಮ :—ಇದೇನು ಮಾಡಿದಿರಿ ಹುಡುಗನ್ನಾ !!

ಈಶ್ವರಯ್ಯ —ನಾನೇನು ಮಾಡಿದೆನೇ! ಸಮಾಧಾನ ಮಾಡುತಾ ಇದ್ದೆ.

ಭಾಗಮ್ಮ :—ಎಲ್ಲವನು ?

ಈಶ್ವರಯ್ಯ :—ಅಗೋ ನೋಡು, ರೂಮಿಗೆ ಹೋಗಿ ಬಾಗಿಲು ಹಾಕಿಕೊಂಡ.

ಭಾಗಮ್ಮ :—ಯಾಕೆ 'ಅಮ್ಮಾ'ಂತ ಕಿರಿಚಿಕೊಂಡನಲ್ಲಾ ?

ಈಶ್ವರಯ್ಯ :— ಏನೂಂತ ಹೇಳಲೀ, ಆ ಹುಡುಗತನದ ಅವಿವೇಕ !!

ಭಾಗಮ್ಮ .—ನಿಮ್ಮ ಮನೆ ಹಾಳು ವಿವೇಕವೇನದು ? ಏನು ಹೇಳು ತಿದ್ದಿರಿ ಅವನಿಗೇ ?

ಈಶ್ವರಯ್ಯ .—ಏನೂ ಇಲ್ಲ, ವಿಷಕಂಠಯ್ಯ....

ಭಾಗಮ್ಮ :—ಇನ್ನೂ ಬದುಕಿದಾನೆಯೇ ಆ ಮನೆ ಹಾಳಾ !

ಈಶ್ವರಯ್ಯ —ಅವನನ್ನ ಯಾಕಂತೀ?

ಭಾಗಮ್ಮ —ಏನು ಮಾಡಲೀ! ನನ್ನ ಹೊಟ್ಟೆ ಉರಿಸಿಬಿಟ್ಟು ನಿಮ್ಮ ನೆತ್ತಿಗೆ ವಿಷ ಒತ್ತಿ... ನಾನು ಗಂಡಸಾಗಿದ್ದರೆ ಅವನ್ನ ಹಿಡಿಕೊಂಡು ಸೀಳಿ ಬಿಡುತಿದ್ದೆ.

ಈಶ್ವರಯ್ಯ —ರಾಮರಾಮ ! ಎಂಥ ಮಾತು !! ಉಂಟೇ ! ಉಂಟೇ !!

ಭಾಗಮ್ಮ —ನಿಮ್ಮ ಕಣ್ಣುಗಳು ಮಬ್ಬಾಗಿ ಹೋದವೇ? ನನ್ನ ಸಂಕಟಾನ ನೋಡ್ತಿಲ್ಲವೇ? ಮನೇಗೊಂದು ಮುತ್ತಿನ ಮಣಿ ಅಂಥ ಹುಡುಗ-ಆ ಹುಡುಗನನಿಗೆ ...

ಈಶ್ವರಯ್ಯ .—ಅದಕ್ಕೋಸ್ಕರವೇ ಭಾಗ್ಯ ಈ ಏರ್ಪಾಟು ಮಾಡು ತಿರೋದು.

ಭಾಗಮ್ಮ :—ಏನು ನಿಮ್ಮ ಚಂಡಾಲೇರ್ಪಾಟೂ? ಹೇಳಿಬಿಡಿ; ಕೇಳಿಬಿಟ್ಟು ಕಿವೀಗೆ ಸೀಸ ಹುಯ್ಕೊಂಡು ಬಿಡೋಣ !!

ಈಶ್ವರಯ್ಯ :—ಶಿವಶಿವಾ ! ಇದು ಯಾಕೆ ನಿಮಗೆಲ್ಲಾ ಹೀಗೆ ತಲೆ ಕೆಟ್ಟುಕೂತಿದಿಯೋ ದೇವರೇ ಬಲ್ಲಾ.

**ಭಾಗವ್ಮ್ಮ :**— ನೀವೂ ಆ ನಿಮ್ಮ ಮನೆಮುರುಕ ಸ್ನೇಹಿತನೂ ಸೇರಿ ಮನೆಗೇ ಇಟ್ಟಿರೋ ಕಿಚ್ಚಿನಿಂದ. ತಿಳೀತೇ!

**ಈಶ್ವರಯ್ಯ :**— ನೋಡೂ ಭಾಗ್ಯ! ನಾನೇನೋ ತಪ್ಪು ಹೆಜ್ಜೆ ಇಟ್ಟು ಬಿಟ್ಟೆ. ಅವಿವೇಕವಾಯಿತು ಏನೋ ದೂರಾಲೋಚನೆಯಿಂದ ಈ ಸಂಬಂಧ ಮಾಡಿದ್ದಾಯಿತು....

**ಭಾಗವ್ಮ್ಮ ,**— ದೂರಾಲೋಚನೆಯಲ್ಲಿ ಬಂತೂ, ದುರಾಲೋಚನೇನ್ನಿ, ಮನೆಹಾಳಯೋಚನೇನ್ನಿ.

**ಈಶ್ವರಯ್ಯ :**— ನೀನು ಏನುಬೇಕಾದರೂ ಹೇಳು ತಪ್ಪಂತೂ ಆಗಿ ಹೋಯಿತು ಆದರೆ ಆ ತಪ್ಪನ್ನ ತಿದ್ದುಕೊಳ್ಳೋದಕ್ಕೇನೇ ನೀವಿಬ್ಬರೂ ಅವಕಾಶ ಕೊಡದೇ ನನ್ನ ಮಟುಕುತಾ ಇದ್ದರೆ, ನಾನು ಯಾವ ದೇವರ ಹತ್ತಿರ ಹೋಗಿ ಹೇಳಿಕೊಳ್ಳಲೀ?

**ಭಾಗವ್ಮ್ಮ :**— ದೇವರ್ಯಾಕೆ ಈ ಪಿತೂರೀಗೇ-ಇದಾನಲ್ಲ ಆ ದೆವ್ವ-ನಮ್ಮ ಭಾಗದ ಅಷ್ಟಮ ಶನೀ–ಅವನ ಮುಂದೆ ಒಪ್ಪಿಸಬಹುದಲ್ಲಾ.

**ಈಶ್ವರಯ್ಯ :**— ಈಗ ನಾಗೇಂದ್ರರಾಯರ ಮಗಳು ರಮಾ.... ...

**ಭಾಗವ್ಮ್ಮ . .**ಈ ಮನೆ ಹಾಳು ಪ್ಲ್ಯಾನ್ನ ಆ ಹುಡುಗನ ಮುಂದೆ ಹೇಳುತಾ ಇದ್ದಿರಾ?

**ಈಶ್ವರಯ್ಯ ·**— ಮನೆ ಹಾಳು ಪ್ಲ್ಯಾನೋ ಮನೇ ಉದ್ಧಾರ ಮಾಡೋ ಪ್ಲ್ಯಾನೋ?

**ಭಾಗವ್ಮ್ಮ . ..** ಅಯ್ಯೋ! ನಿಮಗೆ ಆ ನೀಚ ಏನೋ ಮಂಕುಬೂದಿ ಹಾಕಿಬಿಟ್ಟಿದಾನೆ. ಚೆನ್ನಾಗಿ ತಿರುಗಿಸಿ ಬಿಟ್ಟಿದಾನೆ ಅಲ್ಲಾಂದ್ರೇ! ಹಿಂದೆ ನೀವೀ ಮಾತೆತ್ತಿದಾಗ ಏನೋ ತಮಾಷೀಗೆ ಹೇಳುತಿದೀರಿ-ಒಂದು ವೇಳೆ ಶಶಿ ಕೇಳಿದರೂ ಸಹ ಹೆಳವಿ ಹುಡುಗೀನ ಮದುವೆಯಾಗೋದಕ್ಕೆಲ್ಲಿ ಒಪ್ಪುತಾನೇಂತ ಸುಮ್ಮನಾಗಿದ್ದೆ, ಅಂತೂ ನಿಮ್ಮ ಪ್ಲ್ಯಾನ್ನ ಸುಸೂತ್ರವಾಗಿ, ಹಿಡಿದ ಹಠಸಾಧಿಸುತಾ ಜರುಗಿಸುತಿದೀರಾ? ನಿಮ್ಮ ಪ್ಲ್ಯಾನ್ನನಲ್ಲಿ ಯಾರು ಸತ್ತರೇನು-ಯಾರು ಹಾಳಾದರೇನು? ನಿಮ್ಮ ಕೈಗೆ ದುಡ್ಡು ಬಂದರೆ ಸರೀ! ಅಯ್ಯೋ ಹಾಳು ದುಡ್ಡೇ! ಹೆಂಡತೀ ಮಕ್ಕಳಿಗಿಂತ ಹೆಚ್ಚಾಗಿ ಹೋಯಿತೇ ಹಾಳು ದುಡ್ಡೂ!!

**ಈಶ್ವರಯ್ಯ :**— ಅಯ್ಯೋ ಭಾಗ್ಯ! ನಿನ್ನಾಣೆಗೂ ನನಗೆ ದುಡ್ಡಿನ ಹುಚ್ಚಿಲ್ಲ ಏನೋ ಒಂದು ತಪ್ಪು ಹೆಜ್ಜೆ ಇಟ್ಟುಬಿಟ್ಟೆ ಈಗ ಹ್ಯಾಗಾದರೂ ಮಾಡಿ ಸುದಾರಿಸಿಕೋ ಬೇಕು.

**ಭಾಗಮ್ಮ .**— ಶಶೀನ ಸಾಕಷ್ಟು ಅರೆಜೀವ ಮಾಡಿಬಿಟ್ಟಿದಿರಾ. ಆ ಹುಡುಗ ಒದ್ದಾಡುತಿದ್ದ-ಸುಮನ್ನ ಮದುವೆ ಮಾಡಿಕೋಬೇಕೂಂತ. ನಾನಾದರೂ ದೊಡ್ಡಸ್ತಿಕೇ ಗಾಳಕ್ಕೆ ಗಂಟಲು ಕೊಡದೇ ಅವನಾಶೆಗೆ ಒಪ್ಪಿ ಬಿಟ್ಟಿದ್ದರೆ, ಅಯ್ಯೋ ಪಾಪ! ಆ ತಬ್ಬಲಿ ಹುಡುಗ ದೇಶಾಂತರಾನೂ ಹೋಗುತಿರಲಿಲ್ಲ, ಆ ಮೈನೆರದ ಹುಡುಗಿ ಮರಕ್ಕೆ ನೇರಿಕೊಳ್ಳುತಾನೂ ಇರಲಿಲ್ಲ; ಅವರಮ್ಮ-ಆ ಹೆತ್ತು ಹೊಟ್ಟೆ ಸಂಕಟ ತಡೀಲಾರದೆ ಭಾವೀಗೆ ಮಗುಚಿಕೊಳ್ಳುತಾನೂ ಇರಲಿಲ್ಲ. ಇಷ್ಟು ಅನಾಹುತಕ್ಕೂ ನಾನೇ ಕಾರಣ ಒಂದು ವರುಷದಿಂದ ನನ್ನಹತ್ತಿರ ನೆಪನೆಪವಾಗಿ ಹೇಳ್ತಿತ್ತುಪಾಪ! 'ಸುಮನ್ನ ಮದುವೆಯಾಗ ಬೇಕೂ'ಂತ ಅಷ್ಟೊಂದು ಆಶೆ ಇಟ್ಟುಕೊಂಡಿತ್ತು ಅದರಾಶೆಗೆ ನಾನು ಪುಳ್ಳೆ ಇಟ್ಟೆ, ನನ್ನಾಶೆಗೆ ದೇವರು, ಮಣ್ಣೆರಚಿದ. ನ್ಯಾಯವೇ. ಈ ಮಧ್ಯೆ ನಿಮ್ಮಾಶೆ ಹಬ್ಬೀ ಕುಣೀತಿದೆ....ನೋಡೀ! ಶಶೀಗೆ ಮದುವೆ ಮಾಡಾಯಿತು ಅವನಿಗೆ ಆ ಹುಡುಗೀಗೆ ಕಾಲು ಬಂದು ಹತ್ತು ಜನದ ಹಾಗಾಗ ಬೇಕೂನ್ನೋ ಆಶೆ ಬಂದಿದೆ ಏನೋ ಆ ಹುಡುಗಿ ಪುಣ್ಯ ಅದರ ಮೇಲೆ ಅವನಿಗೆ ಅಷ್ಟೊಂದು ಮರುಕ ಅವನಿಗೇ ಬೇಸರಿಕೆಯಾಗಿದ್ದಿದ್ದರೆ, ನಾವು ಬೇರೆ ಯೋಚನೆ ಮಾಡಬೇಕು ನಮಗೆ ಸೊಸೇ ಮನೆಗೆ ಬರದಿದ್ದರೂ ಚಿಂತೆಯಿಲ್ಲಾ, ಅವನ ಮನಸ್ಸಿಗೆ ಹೆಂಡತೀ ಬಂದಾಳಲ್ಲಾ ಅಷ್ಟೇ ಸಾಕು. ನೀವು ಇನ್ನು ಮಿಕ್ಕ ಯೋಚನೆಗಳನ್ನೆಲ್ಲಾ ಕೈ ಬಿಟ್ಟುಬಿಟ್ಟು, ನಿಮ್ಮ ಮನೆ ಮಂತ್ರೀನ ಹತ್ತಿರ ಸೇರಿಸದ ಹಾಗೆ ಒದ್ದೋಡಿಸಿ, ಶಶೀನ ಅವರತ್ತೆ ಮನೆಗೆ ಕಳಿಸಿ, ಕೆಲಸಕ್ಕೆ ಆರ್ಡರ್ ಬರೋವರೆಗೂ ಅಲ್ಲೇ ಇರಲಿ

**ಈಶ್ವರಯ್ಯ** — ನೀನು ಮಂಗಳ ಹಾಡಿಬಿಟ್ಟೇ!

**ಭಾಗಮ್ಮ :**—ಇಲ್ಲಾ, ಆ ಚಂಡಾಲನ ಕೈಲೇ ಹಾಡಿಸುತೀರೇನೂ?

. **ಈಶ್ವರಯ್ಯ :**—ಅವನ ಮಾತು ಯಾಕೆ ಭಾಗ್ಯ? ಅವನೇನಾದರೂ ನಮ್ಮೀಮನೆ ಹೊಸಲು ತುಳೀತಿದಾನೆಯೇ ಆವತ್ತಿನಿಂದ?

**ಭಾಗಮ್ಮ :**— ತುಳಿದರೆ ಮೂಳೆಗಳು ನೆಗ್ಗಿ ಹೋಗುತ್ತವೆ!

**ಈಶ್ವರಯ್ಯ** :—ಶಿವಶಿವಾ! ಹೆಂಗಸರಿಗಿಷ್ಟೊಂದು ಕೋಪ ಇರ ಬಾರದು........ಅವನ ಮಾತು ಬಿಡು ಭಾಗ್ಯಾ, ಈಗ ನಾಗೇಂದ್ರ ರಾಯರಿ ಗೇನೂಂತ ಜವಾಬು ಹೇಳೋದು ?

**ಭಾಗಮ್ಮ** :—ನನ್ನ ಮಗನಿಗೆ ಮದುವೆಯಾಗಿ ಹೋಯಿತು ಐದು ಸಾವಿರ ರೂಪಾಯಿ ಕೊಟ್ಟರೆ ನಾನೇ ಮಾಡಿಕೊಳ್ಳುತೀನೀ ನಿಮ್ಮ ಹುಡುಗೀ ನಾಂತ ಹೇಳಿಬಿಡಿ.

**ಈಶ್ವರಯ್ಯ** :—(ಸಿಟ್ಟಾಗಿ) ನೀನೇನು ಹುಡಗಾಟ ಆಡುತ್ತಿದೀಯೋ? ತಮಾಷಿ ಮಾಡುತಿದಿಯೋ ?

**ಭಾಗಮ್ಮ** :—ನಿಮಗೆ ದುಡ್ಡು ತಾನೇ ಬೇಕಾಗಿರೋದು ?

**ಈಶ್ವರಯ್ಯ** :—ಪ್ರಮಾಣವಾಗಿಯೂ ಇಲ್ಲ; ಹೋಗಲೀ, ನೀನೇ ಸರಿಯಾದೊಂದು ಹೆಣ್ಣು ನೋಡಿ ಶಶೀಗೆ ಮದುವೆ ಮಾಡಿಬಿಡು ಈಗ ಗೋಪೀನಾಥರಾಯ ಕೊಟ್ಟಿರೋ ನಾಲ್ಕುವರೆಸಾವಿರಾನೂ ನಿನ್ನ ಕೈಗೆ ಕೊಟ್ಟುಬಿಡುತೀನಿ ಹಾಗಾದರೂ ಮಾಡು ಹೋಗು, ನಿನ್ನ ದಮ್ಮಯ್ಯ.

**ಭಾಗಮ್ಮ** :—ಹಾಗಾದರೆ ಗೋಪೀನಾಧರಾಯನಿಗೆ ಏನು ಹೇಳ ಲೀಂತ ಯಾಕೆ ಒದ್ದಾಡುತೀರೀ ? ಅಲ್ಲದೇ ಈ ಎರಡನೇ ಮದುೀಗೆ ಯಾಕೆ ಹೀಗೆ ಕಂಕಣ ಕಟ್ಟಿಕೊಂಡು ಕುಣೀತಿದೀರೀ ? ನೋಡೀ! ಎನೋ ಪಾಪ ಯಾವನೋ ಪಾಪಿಷ್ಟನ ಮಾತು ಕೇಳಿಕೊಂಡು ಹುಡುಗನಿಗೆ ಒಂದು ಹೆಳವೀ ಹುಡುಗೀನ ತೋರಿಸಿ, 'ಇವಳನ್ನೇ ಮದುವೆ ಮಾಡಿಕೋ'ಂದಿರಿ ಆ ಮೂರ್ಖ ಹುಡುಗ ಯಾವುದೋ ಸಿಟ್ಟಿನಲ್ಲಿ ಒಪ್ಪಿಕೊಂಡ, ಮದುವೇನೂ ಮಾಡಿಕೊಂಡುಬಿಟ್ಟ. ಈಗ ಅಲ್ಲೇ ಎನೋ ಒಂದು ರೀತಿ ಮನಸ್ಸನ್ನ ಒಗ್ಗಿಸಿ ಕೊಂಡು ನೆಮ್ಮದಿಯಾಗಿದಾನೆ. ಮತ್ತೆ ಯಾಕಾ ಹುಡುಗನ್ನ ತಿವಿದು ಚುಚ್ಚಿ ಸಂಕಟ ಪಡಿಸುತೀರಿ ? ಸುಮ್ಮನಿದ್ದುಬಿಡಿ. ಅಲ್ಲದೇ ಅಲ್ಲೇ ಇದ್ದರೆ ಮುಂದೆ ಗೋಪೀನಾಥರಾಯನ ಲಕ್ಷ ರೂಪಾಯಿ ಆಸ್ತಿಗೂ ಇವನೇ ಹಕ್ಕು ದಾರನಾಗುತಾನೆ. ಹ್ಯಾಗೋ ಅವನು ಸುಖವಾಗಿ ನೆಮ್ಮದಿಯಾಗಿದ್ದ ರಾಯಿತು.

**ಈಶ್ವರಯ್ಯ** :—ಅಂತೂ ಹಾಳು ದುಡ್ಡೇ ಮುಖ್ಯವಾಯಿತು.

**ಭಾಗಮ್ಮ** :— ನಮಗೇಂದರೇ! ನಮಗಲ್ಲ ಹಾಳು ದುಡ್ಡಿಗೋಸ್ಕರ ಮೆದೆಗೆ ಬೆಂಕಿ ಇಟ್ಟುಬಿಟ್ಟೇ ಆಯಿತಲ್ಲಾ; ಹಾಳಾಗಿ ಹೋಗಲೀಂತ ಉಳಿದ ಅರಳನಾದರೂ ಆರಿಸಿ ತಿನ್ನೋದಕ್ಕೆ ಸಮಾಧಾನ ಮಾಡಿಕೊಳ್ಳುತಿರೋದು.

**ಈಶ್ವರಯ್ಯ** :— ಹಾಗಾದರೆ ಸೆಟ್ಟಿಗೆ ನ್ಯಾರಿಗಿರೋ ಸೊಸೇ ಮನೆಗೆ ಬರೋದು ನಿನಗಿಷ್ಟವಿಲ್ಲಾನ್ನೂ

**ಭಾಗಮ್ಮ** :— ನಿಮ್ಮನಿಷ್ಟವೊಂದೂ ನನಗಿಲ್ಲ, ನೀವು ಸುಮ್ಮನಿದ್ದರೆ ಸಾಕು

**ಈಶ್ವರಯ್ಯ** :— ಇನ್ನು ನಾನು ಯಾರಿಗೋಸ್ಕರ ಒದ್ದಾಡಬೇಕು?

**ಭಾಗಮ್ಮ** :— ಆ ಮನೆ ಹಾಳನಿಗೋಸ್ಕರ'

(ಎಂದು ಹೇಳುತ್ತಾ ಒಳಕ್ಕೆಹೋಗಿ "ಶಶೀ ! ಶಶೀ!" ಎಂದು ಎದುರು ಕೋಣೆಯ ಬಾಗಿಲನ್ನು ಬಡಿಯುವಳು. "ಬಾಮ್ಮಾ" ಎಂದು ಶಶಿಯು ಕರೆಯುವನು)

**ಈಶ್ವರಯ್ಯ** :— ಇನ್ನು ನನ್ನ ಮಾತೇನೂ ಈ ಮನೆಯಲ್ಲಿ ನಡಿಯುಲಾರದು! ದೇವರೇ ಗತೀ.

[ಈಶ್ವರಯ್ಯ ಕುರ್ಚಿಯಮೇಲೆ ಕೂತುಬಿಡುವನು]

# ಅಂಕ ೨ - ದೃಶ್ಯ ೭

[ಈಶ್ವರಯ್ಯನ ಮನೆಯ ಸಮೀಪದ ಮಾವಿನ ತೋಪು. ವಿಷಕಂಠಯ್ಯನು, ಈಶ್ವರಯ್ಯನೂ ನಿಂತು ಗೋಪ್ಯವಾಗಿ ಮಾತುನಾಡುತ್ತಿರುವರು.]

**ಈಶ್ವರಯ್ಯ** :—ಈಗಿರೋ ಹಾಗೇ ಇನ್ನೊಂದು ಮದುವೆ ವಿಚಾರ ಸಾಧ್ಯವೇ ಇಲ್ಲವಾಯಿತು.

**ವಿಷಕಂಠಯ್ಯ** —ಎಲ್ಲಾ ತಿಳೀತು ಸ್ವಾಮೀ

**ಈಶ್ವರಯ್ಯ** ·—ತಿಳೀತೂ ? ಅದು ಹ್ಯಾಗೆ ತಿಳೀತು ?

**ವಿಷಕಂಠಯ್ಯ**:—ನಿಮ್ಮೆಲ್ಲರ ಸಂಭಾಷಣೆ ವಾಗ್ವಾದಗಳನ್ನು ಕೇಳುತ್ತಾ ನಿಂತಿದ್ದನಲ್ಲಾ !

**ಈಶ್ವರಯ್ಯ** :—(ಆಶ್ಚರ್ಯ ಚಿಂತೆಗಳಿಂದ) ನಿಂತಿದ್ದೇ ? ಎಲ್ಲಿ ?

**ವಿಷಕಂಠಯ್ಯ** —ನಿಮ್ಮ ನಡುಮನೆಯ ಹತ್ತಿರದ ಕಾಂಪೌಂಡಿನ ಪಕ್ಕದಲ್ಲಿರೋ ಹೂವರ್ಚಿಗಿಡದ ಕೆಳಗೆ.

**ಈಶ್ವರಯ್ಯ** ·—ರಾಮರಾಮ! ಅಲ್ಲಾ ವಿಷಕಂಠಯ್ಯಾ! ಬಂದೋನು ಬಂದೆ. ಅಲ್ಲಿಯಾಕೆ ಕೂತು ಬಿಟ್ಟದ್ದೆ ? ಒಳಕ್ಕೆ ಬರೋಕಿಲ್ಲವೇ ?

**ವಿಷಕಂಠಯ್ಯ** ·—ಏನು ಜೇಳ್ವೆ ಮಾತುಗಳಾಡುತೀರಿ ಸ್ವಾಮೀ ! ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿಯುತ್ತಲ್ಲ ಹಾಗೇ, ಚೆನ್ನಾಗಿದೆ ಅಲ್ಲಾ ನಿಮ್ಮ ಹೆಂಡತಿ ನನ್ನ 'ಪಾಪಿ, ಚಂಡಾಲ, ಸೀಳಿಬಿಡುತೀನಿ, ಮೂಳೆ ನೆಗ್ಗಿಬಿಡುತೀನಿ' ಅಂತೆಲ್ಲಾ ಬೈತಿರೋವಾಗ ಔಷಧೀಗೆ ಸ್ವಲ್ಪನಾದರೂ ಸ್ವಲ್ಪ ಯಜಮಾನಿಕೆ ರೋಫ್ ತೋರಿಸದೆ ಹೋದ ನಿಮ್ಮಂಥಾ ಪ್ರಾಣ ಸ್ನೇಹಿತರನ್ನ ನಂಬಿಕೊಂಡು ನಾನು ಒಳಕ್ಕೆ ಬೇರ ಬಂದು ಆ ಸಮಯದಲ್ಲಿ ನಿಮಗೆ ಪ್ರತಕ್ಷವಾಗಬೇಕಾಗಿತ್ತೇ ?

**ಈಶ್ವರಯ್ಯ** :—(ಪಶ್ಚಾತ್ತಾಪದಿಂದ) ಅಲ್ಲಾ ವಿಷಕಂಠಯ್ಯಾ ! ಹಿಂದೆ ಒಂದು ಸಮಯ ಗಂಡಸು ಹೇಳಿದರೂ, ಹೇಳಿದಂತೆ ಮಾಡೋದ ದುಸ್ಸಾಧ್ಯವಾಗಿರೋರು, ಹೆಣ್ಣುಹೆಂಗಸರು ಸಿಟ್ಟಿನಲ್ಲಿ ಹೇಳೋ ಮಾತುಗಳಿಗೆ ಅಷ್ಟು ಲಕ್ಷ್ಯ ಗಂಡಸರು ಕೊಡುತಾರೋ ! ಅಥವಾ ಕೊಡೋದು ನ್ಯಾಯವೋ ?

**ವಿಷಕಂಠಯ್ಯ :**— ನೀವೇ ಹೇಳಿಬಿಡಿಸ್ವಾಮೀ. ಕೇಳುತೇನೇ ... ನೋಡೀ....ಕೆಲವು ಮನೆಗಳಲ್ಲಿ ಗಂಡಸರು ಬಾಯಿಲಾಡಿ ಸುಮ್ಮನಾಗು ತಾರೆ ಇನ್ನು ಕೆಲವು ಮನೆಗಳಲ್ಲಿ ಹೆಂಗಸರು ಬಾಯಿಲಾಡಿ ಕೈಲಿ ನಡೆ ಸುತಾರೆ

**ಈಶ್ವರಯ್ಯ :**—ನಿನ್ನ ಮಾತು ನನಗರ್ಥವಾಗಲಿಲ್ಲ

**ವಿಷಕಂಠಯ್ಯ :**— ನಷ್ಟವೇನೂ ಇಲ್ಲ ಬಿಡಿ

**ಈಶ್ವರಯ್ಯ** —ಈಗ ಮುಂದಕ್ಕೆ ಗತಿಯೇನು ?

**ವಿಷಕಂಠಯ್ಯ :**— ನೀವಿನ್ನು ಯಾಕೆ ಸ್ವಾಮಿ ವೃಥಾ ಒದ್ದಾಡು ತೀರಾ ? ಹೆಳವಿ ಹೆಂಡತೀನ ಮಗ ಮೆಚ್ಚಿಕೊಂಡಿದಾನೆ. ಕುಂಟ ಸೊಸೇನ ಅತ್ತೆ ಒಪ್ಪಿಕೊಂಡಿದಾರೆ ಇನ್ನು ನಿಮಗೆಲ್ಲಿ ತರ್ಲೆ ದುಡ್ಡು ? ನಿಮ್ಮ ಹೆಂಡತಿ ಹೇಳಿದಹಾಗೆ ಗೋಪೀನಾಥರಾಯನ ಲಕ್ಷರೂಪಾಯಿನೂ ನಿಮ್ಮದೇ?

**ಈಶ್ವರಯ್ಯ :**— ನೀನು ಬೇಕಾದ್ದು ಹೇಳಿದರೂ, ಈಗ ನಾನು ಸುಮ್ಮನಿರೋದಕ್ಕೆ ನನ್ನಿಂದ ಸಾಧ್ಯವಿಲ್ಲ.

**ವಿಷಕಂಠಯ್ಯ :**—ಸರೀ ಸ್ವಾಮೀ !

**ಈಶ್ವರಯ್ಯ** ·—ಹಾಗಾದರೇನು ಮಾಡೋಣ ?

**ವಿಷಕಂಠಯ್ಯ** ·—ಯಾವುದಕ್ಕೆ ಸ್ವಾಮೀ ?

**ಈಶ್ವರಯ್ಯ :**—ನಾಗೇಂದ್ರರಾಯನ ಮಗಳ ಮದುವೇಗೆ ?

**ವಿಷಕಂಠಯ್ಯ :**— ಅವಳಿಗೇನು ಸ್ವಾಮೀ ! ಗಜಲಕ್ಷ್ಮೀ ಇದ್ದ ಹಾಗಿದಾಳೆ, ಲಕ್ಷ್ಮಣವಂತೆ, ವಿದ್ಯಾವಂತೆ, ವರದಕ್ಷಿಣೆ ಹಾಗಿರಲೀ ; ಕನ್ಯಾದಕ್ಷಿಣೆ ಕೊಟ್ಟು ಕಾಲಿಗೆ ಬಿದ್ದು ಮದುವೆಮಾಡಿಕೊಂಡು ಹೋಗು ತಾರೆ ಎಂ ಎ. ಬಿ. ಎಲ್. ಮಾಡಿದೋರು. ನಿಮಗೇಕೆ ಆ ಹುಡುಗೀ ವಿಚಾರದಲ್ಲಿ ಪಶ್ಚಾತ್ತಾಪ ? ನೆಮ್ಮದಿಯಾಗಿರಿ

**ಈಶ್ವರಯ್ಯ** —ಅಯ್ಯಾ ! ನೀನು ಮಗೂಗೆ ಹೇಳಿದಹಾಗೆ ಹೇಳ ಬೇಡ, ನನ್ನ ಹೆಂಡತಿ ಹೇಳಿದ ಮಾತುಗಳನ್ನ ಮರತುಬಿಡು ದೊಡ್ಡೋ ರಾದ ನಾವು ಯೋಚನೆ ಮಾಡೋಣ.

**ವಿಷಕಂಠಯ್ಯ** —ಯಾರು ಸ್ವಾಮೀ ದೊಡ್ಡೋರೂ? ನಾನೊಬ್ಬ ಮನೆ ಹಾಳು; ನೀವೊಬ್ಬರು ಮೆದೇಗೆ ಬೆಂಕಿ ಇಡೋರು. ನಾವು ದೊಡ್ಡೋರೇ! ಬೇಡಿ ಸ್ವಾಮೀ ಆ ಪದವಿ. ಅದು ನಿಮ್ಮ ಮನೆಯೋರಿಗೇ ಇದ್ದು ಹೋಗಲೀ.

**ಈಶ್ವರಯ್ಯ**:—ಇದೇನು ವಿಷಕಂಠಯ್ಯ ಹೀಗೆ ಮಾತನಾಡುತಾ ಇದೀಯೆ?

**ವಿಷಕಂಠಯ್ಯ**:—ಇನ್ನುಹ್ಯಾಗೆ ಮಾತಾಡಲೀ ಸ್ವಾಮೀ? ಹೇಳಿ. ನಿಮ್ಮ ಮನೆಯೋರು ಹೇಳಿದ ಬಿರುದುಗಳನ್ನ ಜ್ಞಾಪಿಸಿತಿದೀನಿ—ಅಷ್ಟೇ.

**ಈಶ್ವರಯ್ಯ**:—ಅವರ ಮಾತುಗಳನ್ನ ಬಿಟ್ಟುಬಿಡೂಂದೆನಲ್ಲಾ.

**ವಿಷಕಂಠಯ್ಯ**.—ಎಲ್ಲಾ ಮಾತುಗಳನ್ನೂ ಬಿಟ್ಟು ಬಿಟ್ಟೆಸ್ವಾಮಿ.

**ಈಶ್ವರಯ್ಯ**:—ಸರೀ, ಈಗ ಹೇಳು—ಮುಂದಕ್ಕೇನು ಮಾಡೋದು?

**ವಿಷಕಂಠಯ್ಯ**:—ನನ್ನೇನು ಕೇಳುತೀರಾ ಸ್ವಾಮೀ? ನಾನು ಹೇಳಿ ದಂತೆ ನಡೆಯೋರ್‍ಯಾರೂ?

**ಈಶ್ವರಯ್ಯ**:—(ಸಿಟ್ಟಾಗಿ) ನಿನ್ನ ಮಾತುಕೇಳೇ ನಾನೀ ಹಾಳು ಕೆಲಸಮಾಡಿ, ಗುಟ್ಟನಲ್ಲಿ ಮೂಗು ಕುಯ್ದುಕೊಂಡು ಕೂತಿರೋದು. ನಿನ್ನ ಮಾತು ಕೇಳೇ, ಅಲ್ಲವೇ ನಿನ್ನ ಮಾತು ನಂಬಿಕೊಂಡೇ ಅಲ್ಲವೇ, ಬಾಳೇ ಗೊಂದೇಗೊನೆ ಹಾಗೆ ಹೊಟ್ಟೇಲಿ ಹುಟ್ಟಿದ ಒಬ್ಬ ಮಗನಿಗೆ—ರತ್ನದಂಥ ಮಗನಿಗೆ, ಹೆಳವಿ ಹುಡುಗೀನ ತಂದು ಗಂಟುಹಾಕಿ, ಕೈ ಹಿಡಿದ ಹೆಂಡತೀಗೆ ಕೆಟ್ಟೋನಾಗಿ, ಮಗನಿಗೆ ಮೋಸ ಮಾಡಿ ಹೊಟ್ಟೆಗೆ ವಿಷ ಹುಯ್ಕೊಂಡಿದ್ದು? ನೀನು, ನಂಬಿಸಿದ ಮಾತುಗಳಿಗೆ ಮರುಳಾಗಲ್ಲವೇ ನನ್ನ ಕಾಲಿನ ಕೊಂಬೇನ ನಾನೇ ಕತ್ತರಿಸಿ ಹಾಕಿದ್ದು? ಈಗ ಮರುಳಿಹಾಗೆ 'ನನ್ನೇನು ಕೇಳುತೀರ ಸ್ವಾಮಿ!' ಅಂತ ಜಾರಿಕೊಳ್ಳುತೀಯಾ? ವಿಷಕಂಠಯ್ಯಾ! ನಿನ್ನ ಮನೇಗೆ ಒಂದು ಸಾವಿರದ ಮುನ್ನೂರು ರೂಪಾಯಿ ತುಂಬಿಕೊಳ್ಳೋ ಸ್ವಾರ್ಥಕ್ಕೋಸ್ಕರ ನನ್ನ ಕಣ್ಣಿಗೆ ಮಣ್ಣು ತೂರಿ, ನನ್ನ ಮನೇನ ಮುಳುಗಿಸಿ ಒಳಗೊಳಗೇ ಸಂತೋಷಪಡುತಾ ಇದೀಯಾ? ನೀನಿಂಥಾ ರಾಕ್ಷಸಾಂತ ನನ್ನ ಹೆಂಡತಿ ಹೇಳುತಿದ್ದರೂ ನಾನು ನಂಬದೇ ನಿನ್ನ ಬಲೆಗೆ ಬಿದ್ದು ಕೆಟ್ಟನೇ! ಭಗ

ವಂತಾ!!.... ...ಲೋ ವಿಷಕಂಠಯ್ಯಾ; (ರೋಷದಿಂದ ಕೈಹಿಡಿದು) ಇಷ್ಟೆಲ್ಲಾ ಮಾಡಿದ ನಿನ್ನ ಸುಲಭವಾಗಿ ಜಾರಿಕೊಳ್ಳೋದಕ್ಕೆ ಬಿಡುತೀನಿಂತ ತಿಳಿಕೊ ಬೇಡಾ!!

ವಿಷಕಂಠಯ್ಯ:—(ಗಾಬರಿಗೊಂಡು) ಸ್ವಾಮೀ ಈಶ್ವರಯ್ಯನೋರೇ! ನೀವು ಯಾಕೆ ಇದ್ದ ಕಿದ್ದ ಹಾಗೆ ಇಷ್ಟು ಸಿಟ್ಟಾಗುತಿದೀರಿ' ನಾನೇನು ಮಾಡಲಿ–ನೀವೇ ಹೇಳೀಂತ ಕೇಳಿಕೊಳ್ಳುತ್ತಾ ಇದ್ದೀನಷ್ಟೇ! ನಾನು ಹಿಡಿದ ಹಠಸಾಧಿಸದೇ ಬಿಡೋನಲ್ಲ; ನಿಮ್ಮ ಮಗನಿಗೆ ನಾಗೇಂದ್ರರಾಯನ ಮಗಳನ್ನ ತಂದು ಮದುವೆಮಾಡಿಸೋವರೆಗೂ ನಿದ್ದೆಮಾಡೇನೆ ಸ್ವಾಮೀ!

ಈಶ್ವರಯ್ಯ —(ಅವನ ಕೈಬಿಟ್ಟು) ಅಹಾಂ, ಅಷ್ಟುಮಾಡಿದರೆ ನಿನ್ನ ನನ್ನ ಒಪ್ಪಂದ ಪೂರೈಸುತ್ತೇ ಇಲ್ಲದಿದ್ದರೆ ನಾನು ನಿನ್ನ ಸುಮ್ಮನೇ ಬಿಡೊಲ್ಲ

ವಿಷಕಂಠಯ್ಯ:—ನೀವು ಸ್ವಲ್ಪ ಸಮಾಧಾನಕ್ಕೆ ಬಂದರೆ ಮುಂದಕ್ಕೇನಾದರೂ ಒಂದು ಯೋಚನೆ ಮಾಡಬಹುದು

ಈಶ್ವರಯ್ಯ:—ಈಗ ಸಮಾಧಾನಕ್ಕೆ ಬಂದಿದ್ದೇನೆ ಏನು ಮಾಡಬೇಕು ಹೇಳು

ವಿಷಕಂಠಯ್ಯ·—ನಿಮ್ಮ ಹೆಂಡತೀನೂ ಮಗನನ್ನೂ ಮೊದಲೇ ಈ ಎರಡು ಲಗ್ನಕ್ಕೂ ಒಪ್ಪಿಸಿರಬೇಕಾಗಿತ್ತೂಂತ ..

ಈಶ್ವರಯ್ಯ:—ಹಿಂದಿನ ಮಾತು ಬೇಡ ಈಗ

ವಿಷಕಂಠಯ್ಯ·—ಸರಿ ಸ್ವಾಮೀ! ಈಗ ನಿಮ್ಮ ಹೆಂಡತಿಗೆ ಮಗನಿಗೆ ಇನ್ನೊಂದು ಮದುವೆ ಕೂಡದಾಗಿದ್ದರೂ, ನಿಮಗೆ ಮಾಡಲೇ ಬೇಕೊನ್ನಿಸಿದೇ ........ಮದುವೇಮಾಡಿಕೊಬೇಕಾದ ಹುಡುಗ, ತಾಳೀಕಟ್ಟಬೇಕಾದೋನು ಅವನು ಓಲ್ಲೇಂತಿದಾನೆ

ಈಶ್ವರಯ್ಯ:—ಹೌದು

ವಿಷಕಂಠಯ್ಯ·—ನಮ್ಮ ಹಿಂದಿನ ಷರತ್ತಿನಲ್ಲಿ ನಿಮ್ಮ ಹೆಂಡತಿ ಮಗ ಒಪ್ಪದೇ ಹೊದರೂವೇ ನಾನು ಈ ಎರಡನೇ ಮದುವೇ ಮಾಡಿಸಬೇಕೂಂತಿದೆಯೋ ?

ಈಶ್ವರಯ್ಯ:—ಅದೆಲ್ಲಾ ನನಗೆ ಗೊತ್ತಿಲ್ಲ. ನಿನ್ನ ಮಾತಿನಂತೆ,

ನೀನು ಹೇಳಿದ ಪ್ಲ್ಯಾನಿಗೆ ತಲೆಕೊಟ್ಟೆ. ಈಗ ಪ್ಲ್ಯಾನ್ ಪೂರೈಸಿಕೊಡೋ ಭಾರ ನಿಂದು ಈ ಸಲ ಬರೋ ವರದಕ್ಷಿಣೇಲಿ ಶೇಕಡಾ ಇಪ್ಪತ್ತರಂತೆ ನೀನು ತಗೋ; ಮಿಕ್ಕದನ್ನ ನನಗೆಕೊಡು ಚಿಂತೆಯಿಲ್ಲ. ಆದರೆ ನಾಗೇಂದ್ರ ರಾಯನ ಮಗಳು ರಮಾ ನನ್ನ ಮನೆಗೆ ಸೊಸೆಯಾಗಬೇಕು.

**ವಿಷಕಂಠಯ್ಯ** :— ನೀವೇನೋ ಉದಾರಿಗಳಾಗಿದ್ದೀಂ, ನಾನೂ ಕೈಲಾದ ಪ್ರಯತ್ನಮಾಡಿ ನಿಮ್ಮ ಕಮೀಷನ್ ದುಡ್ಡಿಗಿಂತ ನನ್ನ ಮಾತು ಉಳಿಸಿಕೊಬೇಕೂಂತ ಒದ್ದಾಡುತ್ತಾ ಇದೀನಿ.

**ಈಶ್ವರಯ್ಯ** —ಏನೋ! ನೀನೇನಾದರೂಮಾಡು. ಈ ಹಿಡಿದ ಕೆಲಸ ಅರ್ಧಾಂತಕವಾಗದಹಾಗೆ ಮಾಡಿದರೆ ಸರಿ

**ವಿಷಕಂಠಯ್ಯ** — ಇಲ್ಲಾ; ಸುಮ್ಮನೇ ಕೇಳ್ತಾಇದೀನಿ. ಒಂದು ವೇಳೆ ನಾಗೇಂದ್ರರಾಯ ನನಗೆ ಬೇರೇ ತಾಂಬೂಲ ಕೊಟ್ಟರೆ ಆದಕ್ಕೆ ನಿಮ್ಮದೇನು ಆಕ್ಷೇಪಣೆ ಇರೊಲ್ಲಾ ತಾನೇ ?

**ಈಶ್ವರಯ್ಯ** :—ಅವನ ಮನೇನೇ ಬರಸಿಕೊಳ್ಳಯ್ಯಾ! ನನಗೇನು ನಷ್ಟ.

**ವಿಷಕಂಠಯ್ಯ** —ನಷ್ಟದ ವ್ಯಾಪಾರಕ್ಕಲ್ಲ, ಎರಡೂ ಕಡೆಯೂ ದುಡ್ಡು ತಗೊಂಡಾಂತ ನಿಮ್ಮ ಶೇಕಡ ಕಡಿಮೇ ಮಾಡೋದು-ಇಲ್ಲ.. ....

**ಈಶ್ವರಯ್ಯ** :—ಇಲ್ಲಯ್ಯಾ! ಖಂಡಿತವಾಗಿಯೂ ಇಲ್ಲ. ನನ್ನ ಶೇಖಡ ಇಪ್ಪತ್ತು ಖಾಯಂ, ಬೇರೆಯವರಿಂದ ನೀನು ಭಂಡಾರಾನೇ ಬರೆಸಿಕೋ, ನನಗೇನು. ಎರಡನೇದು ನಾಗೇಂದ್ರರಾಯನಿಂದ ಇಷ್ಟೇ ವರದಕ್ಷಿಣೇಂತ ನಿಗದಿಬೇಡ ಒಂದು ಸಾವಿರ ರೂಪಾಯಿ ಕೊಟ್ಟರೂ ಸರಿ, ಹತ್ತುಸಾವಿರ ರೂಪಾಯಿ ಕೊಟ್ಟರೂ ಸರಿ, ಮದುವೆಯಾದರೆ ಸಾಕು.

**ವಿಷಕಂಠಯ್ಯ** '—ನನ್ನ ಕಮೀಷನ್ ಹೆಚ್ಚಬೇಕಾದರೆ ವರದಕ್ಷಿಣೇನೂ ಹೆಚ್ಚಾಗಿಬರೋಹಾಗೆ ನಾನೇ ಮಾಡಬೇಕೊ ?

**ಈಶ್ವರಯ್ಯ** —ಅದನ್ನೆಲ್ಲಾ ನನಗೆ ಹೇಳಬೇಕೋ ?

**ವಿಷಕಂಠಯ್ಯ** .—ನೀವು ಬುದ್ಧಿವಂತರೂಸ್ವಾಮೀ!. ....ಹೀಗಿದ್ದೂ ನಾನೊಲ್ಲೇಂದರೆ ನಮ್ಮಪ್ಪಯ್ಯಾರಿಗೆ ಮದುವೆ ಮಾಡಿಯಾನೂನ್ನೋದು ಮಟ್ಟಿಗೆ ನಿಮಗೆ ತಿಳೀತಿಲ್ಲವಲ್ಲಾ ?

**ಈಶ್ವರಯ್ಯ** — ತಿಳಿಯುತ್ತಯ್ಯಾ? ನಾನೇನು ಮಾಡಲಿ ಹೇಳು. ಮೊದಲಿಂದ ನನಗೆ ದುರ್ಮಂತ್ರಿಯಾಗಿ ಸೇರಿಕೊಂಡು ಈ ಕೊಚ್ಚೆಗುಂಡಿಗೆ ತಂದು ನಿಲ್ಲಸಿಬಿಟ್ಟು, ಸೊಂಟ ಪೂರ್ತಿ ಹೂತುಹೋಗಿರೋವಾಗ, ದೂರದಲ್ಲಿ ನಿಂತು ನಾನೇನು ಮಾಡ್ಲೀಂತ ತಾರಮ್ಯ್ರಯ್ಯನ್ನಾಡಿಸೋದನ್ನ ಬಿಟ್ಟುಬಿಟ್ಟು ಸೊಟ್ಟಾಗಿರೋದು ಸಮವಾಗೋದಕ್ಕೆ ಪ್ರಯತ್ನಮಾಡು. ಆಗ ನನ್ನ ಮರುಳು ಮಾಡೋದಕ್ಕೆ ಥಾವಂತ ಪಡುತಾ ಹೇಳುತಿದ್ದ ಮನೆಹಾಳು ಬುದ್ಧಿ ಈಗ ಹೊಳೆಯೊಲ್ಲವೇನೋ?....

**ವಿಷಕಂಠಯ್ಯ:**—ಮತ್ತೆ ರೇಗುತಾ ಇದೀರಾ ವೃಥಾ! ಅಂತೂ ನೀವು ನನ್ನ ಮನೆ ಹಾಳಾಂತಾನೇ ನಿರ್ಧಾರಮಾಡಿಬಿಟ್ಟರಲ್ಲಾ!!

**ಈಶ್ವರಯ್ಯ:**—ನೀನೀಗ ನುಲಿಚಿಕೊಂಡರೆ ನಾನು ನಿರ್ಧಾರ ಮಾಡೋದೇನು; ಊರೇ ಸಿರ್ಧಾರಮಾಡುತ್ತೇ ನಾನು ತೀರ್ಮಾನ ಮಾಡುತ್ತೇನೆ ಅಷ್ಟೇ!

**ವಿಷಕಂಠಯ್ಯ**·—(ಹೆದರಿ) ಅಲ್ಲಿವರೇಗೂ ಬಿಡೊಲ್ಲ ಸ್ವಾಮೀ! ಆದದ್ದಾಗಿ ಹೋಗಿಬಿಡಲೀ ಮಾಡೋಪ್ರಯತ್ನದಿಂದ ಏನಾದರೂ ಅಸಂಗತ ನಡೆದರೆ ನೀವು ನನ್ನಮೇಲೆ ಎರಗಬಾರದು ಈಗಲೇ ಹೇಳಿದೀನಿ

**ಈಶ್ವರಯ್ಯ**·—ಯಾರಮೇಲೆ ಅಸಂಗತ? ನನ್ನ ಮೇಲೇ? ನನ್ನ ಹೊಡತೀ........

**ವಿಷಕಂಠಯ್ಯ**·—ನಿಮ್ಮ ಮನೇಲಲ್ಲಸ್ವಾಮೀ! ಆ ಗೋಪೀನಾಥ ರಾಯನ ಮನೇಲೀ.

**ಈಶ್ವರಯ್ಯ:**—ಅಲ್ಲೀ! ಬೇಕಾದ ಅಸಂಗತ ಆಗಲೀಳು; ಅದಕ್ಕೆ ನಾನು ಹೊಣೆಯೋ?

**ವಿಷಕಂಠಯ್ಯ:**—ಹೊಣೆಯಾಗೋ ವಿಚಾರಕ್ಕಲ್ಲ, ಯಾರು ಯಾವುದಕ್ಕೂ ಹೊಣೆಯಾಗದಹಾಗೆ ಎಚ್ಚರಿಕೆಯಿಂದಲೇ ಕೆಲಸವಾಗೋ ಹಾಗೆ ಮಾಡುತೇನೆ. ಅಲ್ಲಾ 'ಅಂ ...ನೀವು ಅವರ ಮನೆಯೋರ ವಿಚಾರದಲ್ಲಿ........ನಿಮ್ಮೀಗಿನ ಸೊಸೆ ವಿಚಾರದಲ್ಲಿ .... ...

**ಈಶ್ವರಯ್ಯ:**—ನನಗೇನಾಗಬೇಕಯ್ಯ ಅವರ ಯೋಗಕ್ಷೇಮ ಕಟ್ಟಿಕೊಂಡು; ಅವನು ಲಕ್ಷಾಧೀಶ್ವರನಾದರೆ ಅವನ ಹತ್ತಿರಿರುತ್ತೆ ಆ ಲಕ್ಷ

**ವಿಷಕಂಠಯ್ಯ** —ಇದೊಂದು ಕಡೇ ಪಟ್ಟಿದೇ, ಅದನ್ನೇ ಆಡಿಬಿಡಬೇಕು. ಆಮೇಲೆ ನಾಗೇಂದ್ರರಾಯರ ಮಗಳ ಮದುವೇ ಪ್ರಯತ್ನ ... ಈಗ ನಿಮ್ಮ ಶಶಿ ನೀವು ಹಳ್ಳಿಲಿದ್ದಾಗ ಇಲ್ಲಿಂದ ಬರೀತಿದ್ದ ಕಾಗದಗಳ ಪೈಕಿ ತುಂಬಾ ಈಚಿನದು ಯಾವುದಾದರೂ ಒಂದು ದೊಡ್ಡಕಾಗದಾನ ತಂದು ಕೊಡುತೀರಾ ?

**ಈಶ್ವರಯ್ಯ** —ಕಾಗದಗಳೇನು! ಒಂದು ಕಟ್ಟೇಕಟ್ಟೋಅಷ್ಟಿದೆ. ಈಗ ತಂದು ಬಿಡುತೇನಿ. (ಹೊರಡಲಿರುವನು)

**ವಿಷಕಂಠಯ್ಯ** —ಸ್ವಲ್ಪ ತಡೀರೀ

**ಈಶ್ವರಯ್ಯ:**—ಒಂದು ನಿಮಿಷದಲ್ಲಿ ಬಂದುಬಿಡುತೇನಯ್ಯಾ-ಹತ್ತು ಹೆಜ್ಜೆ ಇರೋ ಮನೆಗೆ ಹೋಗಿ ಬರೋದಕ್ಕೆಷ್ಟುಹೊತ್ತು.

**ವಿಷಕಂಠಯ್ಯ**·—ಈಗ ನಿಮ್ಮ ಹೇಳಿಕೆ ಪ್ರಕಾರ ನಿಮ್ಮ ಮಗ ಗೋಪೀನಾಥರಾಯನ ಮನೇಲಿ ಚೆನ್ನಾಗಿ ಹೊಂದಿಕೊಂಡು ಬಿಟ್ಟಿದಾನೆ ಅಲ್ಲವೆ ?

**ಈಶ್ವರಯ್ಯ** :—ನಿಮ್ಮ ತಂದೆಗೆ ಹುಷಾರಾಗುತ್ತಿದ್ದಹಾಗೆ ಬಂದುಬಿಡೀ; ಕೆಲಸಕ್ಕೆ ಆರ್ಡರ್ ಬರೋವರೆಗೂ ಇಲ್ಲೇ ಇರುವಿರೀಂತೆ ಗೋಪೀನಾಥರಾಯ ಹೇಳಿದನಂತೆ, ನಾಲ್ಕೈದು ದಿವಸಗಳಲ್ಲೇ ಖಂಡಿತ ಬಂದು ಬಿಡುತೀನೀಂತ ಇವನು ಆ ಹೆಳವೀಗೆ ಹೇಳಿಬಂದು ಬಿಟ್ಟಿದಾನಂತೆ. ನಿನಗಿನ್ನೇನು ಸಮಾಚಾರಬೇಕು ?

**ವಿಷಕಂಠಯ್ಯ** —ಇನ್ನೆನೂಬ್ಯಾಡಾ ಶಶಿ ಬರದಿರೋ ಅಂಥ ಒಂದು ಕಾಗದ ಬೇಕು; ಅದರಲ್ಲಿ ಯಾವ ವಿಚಾರವಿದ್ದರೂ ಸರಿ-ಬರವಣಿಗೆ ಅವನು ಸಾಧಾರಣವಾಗಿ ಬರೆಯೋರ್ರೀತಿ ಇದ್ದರೆ ಸಾಕು

**ಈಶ್ವರಯ್ಯ** :—ಹೋಗಿ ತರಲೋ ಹಾಗಾದರೇ ?

**ವಿಷಕಂಠಯ್ಯ** ·—ನಾನಿಲ್ಲಿರೋ ವಿಚಾರ ನಿಮ್ಮ ಕುಟುಂಬಕ್ಕೆ ಮರೆತು ಹೇಳಿಬಿಟ್ಟೀರಿ

**ಈಶ್ವರಯ್ಯ** :—ಏನಂಥಾ ಮಂಕುದಿಣ್ಣೇಯೇನಯ್ಯ ನಾನೂ '!

(ವೇಗವಾಗಿ ನಿಷ್ಕ್ರಮಿಸುವನು.)

**ವಿಷಕಂಠಯ್ಯ** · —(ಸ್ವಲ್ಪ ಹೊತ್ತು ಅತ್ತಕಡೆಯೇ ನೋಡುತ್ತಿದ್ದು)

ಯಾಕೋ ವಿಚಾರ ವಿಪರೀತಕಿಟ್ಟುಕೊಂಡಿತು ಏನೋ ಮಾಡೋದಕ್ಕೆ ಹೋದರೆ ಏನೇನೋ ಆಗುತಾ ಇದೆ ಇದೆಲ್ಲಿಗೆ ಪ್ರರ್ಯವಸಾನವಾಗುತ್ತೋ ದೇವರೇ ಬಲ್ಲ ಇವನ ಮಾತೀ ಕೇಳಿದರೋ ಹೆಂಡತಿ, ಮಗನ, ವ್ಯವಹಾರಾ ನಾನು ಹ್ಯಾಗೆ ತಿದ್ದೋದು! ಬಿಳಿಯೇ ಇಲ್ಲ ಬರೋಪಾಪವೆಲ್ಲಾ ಬರಲೀ– ಮುಂದಕ್ಕೆ ನುಗ್ಗುತ್ತಾನೇ ಹೋಗಬೇಕು ಸುಮ್ಮನಿರೋಣಾಂದರೆ ಇವನು ನನ್ನನ್ನೇನು ಸುಮ್ಮನೇ ಬಿಡೋಹಾಗಿಲ್ಲ ಹೀಗಾಗುತ್ತೇಂತ ಗೊತ್ತಿದ್ದರೆ, ನೇರವಾದ ಒಂದೇ ವ್ಯವಹಾರಮಾಡಿ ಸಿಕ್ಕದಷ್ಟೇ ಸಾಕೊಂತ ತೆಪ್ಪಗಿರುತಿದ್ದೆ ಏನೋ ಡಬ್ಬಲ್ ಕೆಲಸ ಸಾಧಿಸಿ ಖಜಾನೇ ಇಡತೀನೀಂತ ದುರಾಸೆಗೆ ನಾಲಿಗೆ ಚಾಚಿ ಇಕ್ಕಳದಲ್ಲಿ ಸಿಕ್ಕಿಕೊಂಡಹಾಗಿದೆ ಈಶ್ವರಯ್ಯನಿಗಿರೋ ಸಂಕಟ ಸಿಟ್ಟಿನಲ್ಲಿ ನನ್ನ ಏನು ಮಾಡೋಕೂ ಹೇಸೋಹಾಗೆ ಕಾಣಲಿಲ್ಲ. ದೇವರೇ ಗತಿ. ಕಡೇಪಕ್ಷ ನಡಿನೇಬಿಡೋದು ನಾನೇನು ಕೈಯಾರ ಮಾಡೊಲ್ಲ ಆ ಹೆಳವಿ ಹುಡುಗೀಗೆ ಷಾಕ್ ಆಗೋ ಅಂಥ ಒಂದು ಕಾಗದಾನ ಶಶಿ ಅಕ್ಷರದಲ್ಲಿ ತಯಾರುಮಾಡಿ, ಅದು ಅವಳ ಕೈಗೆ ನೇರವಾಗಿ ಹೋಗೋಹಾಗೆ ಹರ್‌ತರದೂಮುಮಾಡಿ ಬಿಡೋದು. ಆ 'ಷಾಕ್'ಗೆ ಅದೇನಾದರೂ ಗೊಟಕ್ಕಂದುಬಿಟ್ಟರೆ, ಇಲ್ಲ ಜೀಟಿ ಹ್ಯಾಗಾದರೂ ಫೈಸಲಾಗಿ ಬಿಟ್ಟರೆ, ಮುಂದಕ್ಕೆ ಪ್ಲ್ಯಾನ್ ಸರಾಗವಾಗೇ ಆಗುತ್ತೆ ... .. ಅಂತೂ ಇದೊಂದೇ ಉಪಾಯ ಈ ಉಪಾಯ ಫಲಿಸದೇಹೋದರೆ ಊರೇ ಬಿಟ್ಟು ಓಡಿಹೋಗಬೇಕು–ಇಲ್ಲದಿದ್ದರೆ ಈ ಬೇತಾಳ ಬೆನ್ನುಹತ್ತೇ ಇರುತ್ತೆ. ಯಾರ ಮಗನ ಮದುವೆ ಮೂಲಕಾನೋ ಹಣ ಸಂಪಾದಿಸಿ, ನನ್ನ ಮಗಳ ಮದುವೇಮಾಡೋ ದೂರಾಲೋಚನೇಲಿ, ಸ್ವಲ್ಪ ದುರಾಸೆ ಪಟ್ಟಹಾಗೆ ಆಯಿತು; ಅದರಿಂದಲೇ ಈ ಉಭಯ ಸಂಕಟ ಏನೋ ದೇವರೇ ಕಾಪಾಡಬೇಕು, ಅಲ್ಲಾ, ಬರಬೇಕಾದ ದುಡ್ಡು, ಬಟ್ಟೇಬರೇ, ಹಣಾಕಾಸೆಲ್ಲಾ ಬಂದಮೇಲೆ, ಸಲೀನಾಗಿ ಇತ್ತ ಕಡೇಗೆ ಹೊರಳಿಕೊಂಡು, ಇನ್ನಷ್ಟು ದುಡ್ಡು ಸುರಿಸಿಕೊಂಡು, ಮನೇಗೆ ಲಕ್ಷಣವಾದ ಹುಡುಗೀನು ಕರಕೊಳ್ಳೋದಕ್ಕೆ ಮಗಾನ್ನಿಸಿಕೊಂಡೋನ ರಂಪವೇನು? ಆ ಹೆಂಡತೀನ್ನಿಸಿಕೊಂಡೋಳ ಅವಾಂತರವೇನು?........ ನನಗಂಥಾ ಮಗನಿದ್ದಿದ್ದರೆ ... ...ಅಥವಾ..... .. ನಾನೇ ಅಂಥ ಮಗನಾಗಿದ್ದರೆ, ನಮಪ್ಪರುಡು ಮದುವೆಮಾಡಿದ್ದರೆ, ನಾನದರಲ್ಲಿ

ಕೊಂಕು ತೆಗೆದು ಇನ್ನೆರಡು ಮದುವೆಗಳನ್ನ ಮಾಡಿಕೊಳ್ಳುತ್ತಿದೆ ಎಲ್ಲೋ ಶುದ್ಧ ಅವಿವೇಕಗಳ ಸಂಸಾರಕ್ಕೆ ಬಾಯಿಹಾಕಿಕೊಂಡು ಹೋಗಿ ನಾಲಿಗೆ ಸೀಳಿಸಿಕೊಳ್ಳೋಗತಿ ಬಂತು ನನಗೆ (ಎದುರಿಗೆ ನೋಡಿ) ಓಹೋ! ಬೇಗಲೇ ಬಂದ ನನ್ನ ಪ್ರಾಣಸ್ನೇಹಿತ

**ಈಶ್ವರಯ್ಯ** :—(ಪ್ರವೇಶಿಸಿ) ತಗೊಳ್ಳಯ್ಯಾ ಕಾಗದಾನ. (ಎರಡು ಹಾಳೆಯ ಪತ್ರವೊಂದನ್ನು ಕೊಡುವನು) ಎರುಡು ವರುಷದ ಕೆಳಗೆ ಬಿ ಎ ಪ್ಯಾಸಾದಾಗ ಶಶಿ ಬರೆದ ಕಾಗದ ಇದು ಸಾಕುತಾನೇ ?

**ವಿಷಕಂಠಯ್ಯ** :—(ಪತ್ರವನ್ನು ಹಿಂದೆ ಮುಂದೆ ತಿರುಗಿಸಿ ನೋಡಿ ಜೇಬಿಗೆ ಸೇರಿಸಿ) ಬೇಕಾದಷ್ಟಾಯಿತು

**ಈಶ್ವರಯ್ಯ** —ಈಗಿದನ್ನೇನೂ ಮಾಡುತೀ ?

**ವಿಷಕಂಠಯ್ಯ** :—ಇದನ್ನೇನೂ ಮಾಡೊಲ್ಲ: ಬರವಣಿಗೇ ನೋಡಿ ಕೊಂಡು, ನಾಳೆಯದಿನ ನಿಮಗೆ ವಾಪಸ್ ಮಾಡಿಬಿಡುತೇನೆ

**ಈಶ್ವರಯ್ಯ**· —ಬರೆವಣಿಗೇ ಯಾಕೆ ?

**ವಿಷಕಂಠಯ್ಯ** —ಅದನ್ನೆಲ್ಲಾ ಈಗ ಕೇಳಬೇಡಿ. ಮುಖ್ಯವಾಗಿ ಶಶಿ ನಾಗೇಂದ್ರರಾಯರ ಮಗಳನ್ನ ಮದುವೆಯಾಗಬೇಕು

**ಈಶ್ವರಯ್ಯ** :— ಸರಿ ; ಏನಾದರೂ ಮಾಡು. ಅದೊಂದು ಕೆಲಸ ವಾದರೆ ಸರಿ.

**ವಿಷಕಂಠಯ್ಯ** :—ಆಮೇಲೆ, ನಿಮ್ಮಿಂದ ಸ್ವಲ್ಪ ಕೆಲಸವಾಗಬೇಕು.

**ಈಶ್ವರಯ್ಯ** :—ಏನು ಹೇಳು ?

**ವಿಷಕಂಠಯ್ಯ** :—ಮದುವೆಯಾದರಭ್ಯ ನೀವು ಕುಟುಂಬ ಸಮೇತ ಮನೇದೇವರ ಸೇವೆಗಾಗಿ ನಂಜನಗೂಡಿಗೆ ಹೋಗಿ ಬರಬೇಕೂಂತಿದೀರಿ ಅಲ್ಲವೇ ?

**ಈಶ್ವರಯ್ಯ** :—ಹೌದು. ನಿನಗೆ ಹಿಂದೇನೇ ಹೇಳಿದ್ದೆನಲ್ಲ ಆದರೆ ಮದುವೆಯಾಗೋದಕ್ಕೆ ಮುಂಚೇನೇ ಸಿಟ್ಟಾದಳು. ಆಮೇಲೆ ಮೈಗೇ ಹುಷಾರಿಲ್ಲ........

**ವಿಷಕಂಠಯ್ಯ** :—ಅದು ಸರೀ ! ಈಗ ನೀವು ನಾಳೆಯೇ ನಿಮ್ಮ ಹೆಂಡತೀನೂ ಶಶೀನೂ ಕರಕೊಂಡು, ನಂಜನಗೂಡಿಗೆ ಹೋಗಿ ಬಿಡೀ.

**ಈಶ್ವರಯ್ಯ** :— ಇದಕಿದ್ದಹಾಗೆ ಹೊರಡೋದಕ್ಕಾಗುತ್ತೇನಯ್ಯಾ! ಹೊರಟರೆ ದಾರೀಲಿ ಮೈಸೂರಿನಲ್ಲಿ ನನ್ನ ತಮ್ಮನ ಮನೇಲಿ ನಾಲ್ಕುದಿವಸ ಇರಬೇಕಾಗುತ್ತೇ. ವಾಪಸ್ ಬರುತಲಾದರೂ ಮಂಡ್ಯದಲ್ಲಿ ನನ್ನ ಭಾವ ಮೈದುನನ ಮನೇಲಿ ಎರಡು ದಿನವಾದರೂ ಇರಬೇಕಾಗುತ್ತೆ.

**ವಿಷಕಂಠಯ್ಯ** :— ನೀವು ನಿಧಾನವಾಗಿ ಬನ್ನಿ. ಹೊರಡೋದು ನಾಳೆ ಹೊರಟುಬಿಡಿ. ಶರೀರಗೂ ಬೇಜಾರಾಗಿದೆ, ಸ್ವಲ್ಪ ಸ್ಥಳ ಬದಲಾವಣೆಯಾದರೆ, ಹೊಸಜನ, ಹೊಸ ಊರುಗಳನ ನೋಡೋದರಿಂದ ಮನಸ್ಸಿಷ್ಟೋ ಹಗುರವಾಗುತ್ತೆ. ಒಂದು ವಾರ ಸುತ್ತುಕೊಂಡು ಬನ್ನಿ.

**ಈಶ್ವರಯ್ಯ** :— ಹೌದೂ! ಅಲ್ಲೀಗೆಲ್ಲಾ ಬರೀಕೈಲಿ ಹೋಗೋಹಾಗಿಲ್ಲ. ರೈಲುಛಾರ್ಜು....ಆದೂ-ಇದೂ, ಅಲ್ಲಿ ದೇವರಿಗೇಂತ ಪೂಜೆ....ಹರಕೇ....

**ವಿಷಕಂಠಯ್ಯ** :— ಖರ್ಚುಮಾಡೀ ಧಾರಾಳವಾಗಿ. ದೇವರಿಗೇಂತ ನೂರು ರೂಪಾಯಿ ಖರ್ಚು ಮಾಡಿದರೆ, ನಿಮಗೆ ಮತ್ತೊಂದೈದು ಸಾವಿರ ಕೈಗೆ ಬಂದೇಬರುತ್ತೇ. ಎಲ್ಲಿ ಹೋಗುತ್ತೇ. ಹಾಗಾದರೆ ನಾಳೆ ಖಂಡಿತ ಹೊರಡುತೀರೋ— ಇಲ್ಲ ಅದಕ್ಕೂ ನಿಮ್ಮ ಹೆಂಡತಿ. ......ಮಗ........ ಇವರೇನಾದರೂ. ....

**ಈಶ್ವರಯ್ಯ** —ಅಂಥಾದೇನೂ ಇಲ್ಲ. ಭಾಗ್ಯ ಆವತ್ತಿಂದ ಹೇಳತಾನೇ ಇದ್ದಳು. ನಾನೇ ನೋಡೋಣಾಂದು ಬಿಡುತಿದ್ದೆ.

**ವಿಷಕಂಠಯ್ಯ** — ಶರೀಗೆ "ಇದು ದೇವರ ಹರಿಕೇಪ್ಪ-ಹೋಗಿಬಂದು ಬಿಟ್ಟಮೇಲೆ ನೀನು ಬೇಕಾದರೆ ನಿಮ್ಮ ಮಾವನ ಮನೇಗೆ ಹೋಗೂವೇ-ನಾನೇ ಹಾಗಂತ ಕಾಗದಾನೂ ಬರೆದುಬಿಡುತೀನೀ''ಂತ ಹೇಳಿ, ಅವನೆದುರಿಗೇ ಒಂದು ಕಾಗದಾನೂ ಬರೆದು, ಆಮೇಲೆ ಹರಿದು ಹಾಕಿಬಿಟ್ಟು, ಟಪಾಲಿಗೆ ಹಾಕಿದೀನಿ ಅಂತ ಹೇಳಿ.

**ಈಶ್ವರಯ್ಯ** :—ಹಾಗಾದರೆ ಅವನ್ನ ಮತ್ತೆ ಅಲ್ಲಿಗೆ ಕಳಿಸಬೇಕೇನೂ ?

**ವಿಷಕಂಠಯ್ಯ** :— ಕಳಿಸೋದೆಲ್ಲಿ ನೀವಿಷ್ಟುಹೇಳಿ ಒಂದೆಂಟು ದಿವಸ ಹೊರಗಡೆ ಸುತ್ತಿಸಿಕೊಂಡು ಬನ್ನಿ. ಅಷ್ಟರೊಳಗೆ ನಾನೀ ಮದುವೆಗೆ ಏರ್ಪಾಟು ನಡೆಸುತ್ತೇನೆ. ಆಮೇಲೆ ದೇವರಿದ್ದಾನೆ ಈ ಮಧ್ಯೆ ಅವನಿಂದ

ಅವನ ಹೆಂಡತೀಗಾಗಲಿ, ಅವನ ಮಾವನಿಗಾಗಲೀ ಒಂದು ಕಾಗದವೂ ಹೋಗದಹಾಗೆ ನೋಡಿಕೋ ಬೇ ಕೂ ; ಅದು ನಿಮ್ಮ ಜವಾಬ್ದಾರಿ ಒಂದು ಸಮಯ ಅವನು ಬರೆಕೊಂಡು ಪೋಸ್ಟಾಫೀಸ್ ಕಡೆಗೆ ಹೊರಟರೆ, ನೀವು ನೆನ್ನೆ ಮಾಡಿದಹಾಗೇ, "ನಾನು ಪೋಸ್ಟಾಫೀಸಿಗೆ ಹೋಗುತೇನೆ ನಿನ್ನ ಕಾಗದಾನು ಹಾಕಿ ಬಿಡುತೀನಿ, ಅಂತ ತಗೊಂಡು ಆಮೇಲೆ ಹರಿದು ಹಾಕಿಬಿಡಿ.

**ಈಶ್ವರಯ್ಯ** :— ಹಾಗೇ ಮಾಡುತೇನೆ.

**ವಿಷಕಂಠಯ್ಯ** —ನಾನು ಹೊರಡುತ್ತೇನೆ ಮತ್ತೆ ನಿಮ್ಮನ್ನ ನಂಜನಗೂಡಿನಿಂದ ವಾಪಸ್ ಬಂದಮೇಲೆನೇ ನೋಡೋದು ನಾನು ಒರುತೇನೆ ನಾನು ಹೇಳಿದ ಮಾತುಗಳು ಜ್ಞಾಪಕವಿರಲಿ. ಬರೀ ನಿಮ್ಮ ಷರತ್ತನ್ನ ಮಾತ್ರ ಜ್ಞಾಪಕ ಇಟ್ಟುಕೊಂಡು, ನಾನು ಹೇಳೋ ಕಂಡೀಷನ್ನಗಳನ್ನ ಮರೆತು ಬಿಟ್ಟು, ಅಮೇಲೆ ನನ್ನ ಹಿಂಸೆಮಾಡಬೇಡಿ

**ಈಶ್ವರಯ್ಯ** :—ಇದುವರೆಗೇನು ನೀನು ಹೇಳಿದಹಾಗೇ ನಡೀದಿರೋದು ?

**ವಿಷಕಂಠಯ್ಯ** ·— ಇದುವರೆಗಿನ ಮಾತು ಬಿಡಿ. ಇನ್ನು ಮುಂದೆ· ನಾನು ಬರುತೇನೆ ನಮಸ್ಕಾರ.

**ಈಶ್ವರಯ್ಯ** —ಸರಿ–ಹೊರಡು ನಾನೂ ಮನೆಗೆ ಹೋಗಿ ನಾಳೇನೇ ಪ್ರಯಾಣ ಮಾಡೋಕೇರ್ಪಾಟು ಮಾಡಿಕೊಳ್ಳುತೇನೆ

(ಈಶ್ವರಯ್ಯನು ಮನೆಕಡೆಗೂ, ವಿಷಕಂಠಯ್ಯನು ಇತ್ತಕಡೆಗೂ ನಿಷ್ಕ್ರಮಿಸುವರು.)

---

# ಅಂಕ ೨ - ದೃಶ್ಯ ೮

[ಗೋಪೀನಾಥರಾಯನ ಮನೆಯ ಹಜಾರ. ಎಲ್ಲವೂ ಹಿಂದಿದ್ದಂತೆಯೇ. ಉಮಾ ತನ್ನ ತಳ್ಳುವ ಕುರ್ಚಿಯಲ್ಲಿ ಕುಳಿತು ದುಃಖಿಸುತ್ತಿದ್ದಾಳೆ. ಪಕ್ಕದ ಕುರ್ಚಿಯೊಂದರಲ್ಲಿ ಕುಳಿತಿರುವ ಗೋಪೀನಾಥರಾಯನು ಮಗಳನ್ನು ಸಮಾಧಾನ ಪಡಿಸುತ್ತಿರುವನು]

**ಗೋಪೀನಾಥರಾಯ** :—ಉಮಾ! ನೀನು ಹೀಗೆ ಅನ್ನ ನೀರು ಬಿಟ್ಟು ಕೊರಗುತ್ತಿದ್ದರೆ ಉಪಯೋಗವೇನೂ ಇಲ್ಲಮ್ಮಾ! ಹುಡುಗನೇನೋ ಒಳ್ಳೆಯವನಿರಬಹುದು; ಆದರೆ ಅವನ ಅಮ್ಮ ಅಪ್ಪನಿಗೆ ನಮ್ಮ ವಿಚಾರದಲ್ಲಿ ವಿಶ್ವಾಸವಿರೋ ಹಾಗೆ ಕಾಣಿಸಲಿಲ್ಲ. ಹುಡುಗ ಯಾರು ಹ್ಯಾಗೆ ಹೇಳಿದರೆ ಹಾಗೆ ಕೇಳುತಾನೇಂತ ಕಾಣಿಸುತ್ತೆ. ಅದರಿಂದಲೇ ಈ ಅವಿವೇಕವಾಗಿರೋದು.... ಏನೋ! ಮದುವೆಯಾಗೋದಕ್ಕೆ ಮುಂಚೆ ಒಂದೇ ಚಿಂತೆಯಾಗಿತ್ತು. ಈಗ ನೋಡಿದರೆ ಎರಡು ಮೂರು ಬಗೆಯಿಂದ ಚಿಂತೆ ಸುತ್ತಿಕೊಂಡಿದೆ. ನೀನಾದರೂ ಹುಡುಗನ ವಿಚಾರದಲ್ಲಿ ಅಷ್ಟೊಂದು ಒದ್ದಾಡಬಾರದು.

**ಉಮಾ** :—(ಕಂಬನಿದುಂಬಿ) ನೀನು ಹಾಗನ್ನಬೇಡಪ್ಪ. ಅವರ ಸ್ವಭಾವ ನನಗೆ ಚೆನ್ನಾಗಿ ಗೊತ್ತು ತಂತಿ ಬಂದ ದಿನವೇ, ಗಾಬರಿಯಾಗಿ ದ್ದೋರು ವಿಷಕಂಠಯ್ಯನೋರಿಂದ ತಂತಿ ಬಂದಿದೇನ್ನೋದನ್ನ ಕೇಳುತಿದ್ದ ಹಾಗೇ, 'ವಿಷಕಂಠಯ್ಯನಿಂದಲೇ–ಸರಿ' ಅಂತ ಹೇಳಿ ಸಮಾಧಾನಮಾಡಿ ಬಿಟ್ಟರು. ಆಗಲೇ ಅಂದುಕೊಂಡೆ–ಅವರಿಲ್ಲಿ ಸಂತೋಷವಾಗಿರೋದನ್ನ ಕೇಳಿ ಸೈರಿಸಲಾರದೆ ವಿಷಕಂಠಯ್ಯನೇ ಹೀಗೆ ಮಾಡಿರಬೇಕೂಂತ?......

**ಗೋಪೀನಾಥರಾವ್** :—ಅವರಪ್ಪ ಒಪ್ಪದೆ ವಿಷಕಂಠಯ್ಯನೇ ತಂತಿ ಕೊಡೋದಕ್ಕೆ ಸಾಧ್ಯವೇನಮ್ಮಾ?

**ಉಮಾ**.—ಆದಿರಬಹುದಪ್ಪ; ಆದರೆ ಇವರು 'ತುಂಬಾ ಜಾಸ್ತಿ ಅಂದರೆ ಒಂದು ವಾರದೊಳಗೇ ಖಂಡಿತ ಬಂದುಬಿಡುತೀನೀ'ಂತ ಹೇಳಿ ಹೋದರು; ಎಂಟು ದಿನವಾಗಿಹೋಯಿತು. ಅವರೆಂದಿಗೂ ನಿಲ್ಲುತಿರಲಿಲ್ಲ. ಅವರಿಗೇನೋ ಪ್ರಬಲವಾಗಿ ಅಡ್ಡಿಯಾಗಿರಬೇಕು. ಇಲ್ಲದಿದ್ದರೆ ಒಂದು ಕಾಗದ ಸಹಾ ಬರೀದೇ ಇರುತಿರಲಿಲ್ಲ.

**ಗೋಪೀನಾಥರಾವ್** :—ನಾನೇನು ಮಾಡಲಮ್ಮ ತಾಯೀ! ನಿನ್ನ ಮಾತಿನಂತೆ ದಾಸನ್ನ ರೈಲು ಹತ್ತಿಸಿ ಅವರ ಮನೆಗೆ ಕಳಿಸಿದ್ದೂ ಆಯಿತು.

**ಉಮಾ** —ಮನೇ ಬೀಗ ಹಾಕಿಕೊಂಡು ಎಲ್ಲಿಹೋಗಿದಾರೇಂತ ಅಕ್ಕಪಕ್ಕದ ಮನೆಯವರನ್ನ ಕೇಳಿ ವಿಚಾರಿಸಿಕೊಂಡು ಬರಬೇಕಾಗಿತ್ತು; ಆಳು ಮಾಡಿದ್ದು....

**ಗೋಪೀನಾಥರಾವ್**.—ಹಾಗೆ ಯಾಕಂತೀ ಉಮಾ ದಾಸನ ವಿಚಾರದಲ್ಲಿ? ನಮಗೆಲ್ಲರಿಗಿರೋದಕ್ಕಿಂತ ಹೆಚ್ಚು ಭಕ್ತಿ ಅವನಿಗಿದೆ—ಆ ಹುಡುಗನ ವಿಚಾರದಲ್ಲಿ ಅಕ್ಕಪಕ್ಕದ ಮನೇಲೇ ಅಲ್ಲಾ ವಿಷಕಂಠಯ್ಯನ ಮನೇ ಕೂಡಾ ಪತ್ತೇ ಹಚ್ಚಿ, ಅಲ್ಲಿ ಸಹಾ, ವಿಚಾರಿಸಿದನಂತಲ್ಲಾ ಗಂಡ, ಹೆಂಡತಿ, ಮಗ ಮೂರು ಜನರೂ ಮೈಸೂರು ಕಡೆಗೆ ಹೋದರೂ, ಅನ್ನೋ ಒಂದು ಸಮಾಚಾರ ಹೊರತು ಮತ್ತೆ ಯಾವ ಸುದ್ದಿಯೂ ತಿಳೀದು, ಏನಂತ ಯೋಚನೆ ಮಾಡೋಣಾ. ಹುಡುಗನ್ನೂ ಕರೆಕೊಂಡು ಬೇರೆಲ್ಲೀಗೆ ಹೋಗಿದ್ದಾರೋ ದೇವರೇಬಲ್ಲ, 'ಹುಡುಗ ಹುಷಾರಾಗಿದ್ದಾ'ಂತ ವಿಷಕಂಠಯ್ಯಾ ಹೇಳಿಕಳಿಸಿದಾನೆ 'ಎಲ್ಲಿಗೆ ಹೋದರೂ? ಯಾಕೆಹೋದರೂ? ಯಾವಾಗ ಹಿಂದಿರುಗುತಾರೇ" ಅನ್ನೋದು ಮಟ್ಟಿಗೆ ಯಾರಿಗೂ ಗೊತ್ತಿಲ್ಲ...ಒಂದು ಸಮಯ ನಿನ್ನ ಮಾತಿನಂತೆ ನಾನೇ ಹೋಗಿದ್ದರೂ, ಇಷ್ಟೇ ಸಮಾಚಾರ ತರುತ್ತಿದ್ದೆ.

**ಉಮಾ**.—ತಿರುಗೀ ಅವರನ್ನ ನೋಡುತೀನೇನಪ್ಪಾ!! (ಅಳುವಳು)

**ಗೋಪೀನಾಥರಾವ್** —ಇಷ್ಟೊಂದು ಎದೆಗುಂದಬಾರದು ಉಮಾ! ಹುಟ್ಟಿದಾರಭ್ಯ ಮೊನ್ನೆ ಮೊನ್ನೆವರೆಗೂ ಹ್ಯಾಗೋ ಸಂತೋಷವಾಗಿದ್ದೋಳಿಗೆ ಅವನು ಮನೆಗೆ ಬಂದು ಹೋದಮೇಲೆ ಕಣ್ಣೀರು ಸುರಿಸುತಿರೋದೇ ಆಗಿ ಹೋಗಿದೆಯಲ್ಲಾ! ಇದು ಏನು ನಮ್ಮ ದುರಾದೃಷ್ಟವೋ!

**ಉಮಾ**.—ಹಾಗನ್ನಬೇಡಪ್ಪ! ನೀನು ಹಾಗಂದರೆ ನನಗೆ ಭಯವಾಗುತ್ತೇ! ಅವರು ನನ್ನನ್ನ ಮೊದಲಿನಿಂದ ನಿಕೃಷ್ಟವಾಗೇ ನೋಡಿದ್ದರೆ ಚೆನ್ನಾಗಿರುತಿತ್ತು ಅಥವಾ 'ನೀನು ನನ್ನ ಹೆಂಡತಿಯಾಗಿರೋದಕ್ಕೆ ಯೋಗ್ಯಳಲ್ಲಾ'ಂತ ಒಂದು ಮಾತು ಹೇಳಿಬಿಟ್ಟಿದ್ದರೆ, ಮನಸ್ಸು ಕಲ್ಲುಮಾಡಿಕೊಂಡು ಇಷ್ಟುದಿವಸವಿದ್ದಹಾಗೆ ಮನೇಲೀ ಒಂದು ಮಣೆಕೊರಡನಂತೆ ಬಿದ್ದಿರುತಿದ್ದೆ

ಇಲ್ಲ ಬಂದೋರು ಸುಮ್ಮನೆ ಒಂದು ದಿನ ಇದ್ದುಬಿಟ್ಟು ತಮ್ಮ ಪಾಡಿಗೆ ತಾವು ಹೊರಟುಹೋಗಿದ್ದರೂ ಚೆನ್ನಾಗಿರುತಿತ್ತು ...ಇಲ್ಲಾ....ಹಿಂದೆಲ್ಲಾ ಹೇಳಿಕಳು ಹಿಸಿದಾಗ ಒಂದೊಂದು ನೆಪ ಹೇಳಿ ಬರದೇ ಹೋದ ಹಾಗೆಯೇ, ಮೊನ್ನೆ ನನ್ನ ಹುಟ್ಟಿದ ಹಬ್ಬಕ್ಕೂ ಬರದೇ ಹೋಗಿದ್ದರೆ ಚೆನ್ನಾಗಿತ್ತು. (ರೋದಿಸುವಳು)

**ಗೋಪೀನಾಥರಾವ್** —ಉಮಾ! ಇದೇನೋ ಬಾಯಿಗೆಬಂದ ಹಾಗೆ ನುಡೀತಿದ್ದೀಯಲ್ಲಾ !! ಯಾವ ಕಾರಣದಿಂದಲೋ ಏನೋ ಆ ಹುಡುಗ ನಿನಗೆ ಹೇಳಿದಷ್ಟು ಜಾಗ್ರತೆ ಮತ್ತೆ ಬರೋದಕ್ಕಾಗದೇ ಹೋಗಿರಬಹುದು ಈ ಮಧ್ಯೆ ನಿನಗೆ ಕಾಗದ ಬರೆಯೋದಕ್ಕೂ ಅನುಕೂಲವಾಗದೇ ಹೋಗಿರಬಹುದು,ಅಥವಾ ಅವನು ಬರೆದ ಕಾಗದಗಳನ್ನ ಟಪಾಲಿಗೆ ಹಾಕೋಕೆ ಸಮಯ ಸಿಗದೇ ಹೋಗಿರಬಹುದು, ಅಥವಾ ಟಪಾಲಿಗೆ ಹಾಕೀಕೂಡಾ ನಮಗೆ ತಲುಪದೇ ಹೋಗಿರಬಹುದು ...

**ಉಮಾ** —ಅಪ್ಪಾ! ಈ ಬಗೆಯ ಸಮಾಧಾನಗಳಿಂದ ಮನಸ್ಸಿಗೆ ನೆಮ್ಮದಿಯಾಗೊಲ್ಲಾಪ್ಪಾ ಎಲ್ಲೋ ಅವರು ಆರೇಳು ದಿವಸ ಅವರಲ್ಲಿದ್ದದ್ದು ತಪ್ಪಿಗೆ, ತಮ್ಮ ಮೂರು ಕಾಗದಗಳಿಗೆ ಕೂಡಾ ಜವಾಬು ಕೊಡದೆ ಹೋದ ಸಿಟ್ಟಿಗೆ, ಅವರ ತಂದೆ ಅವರನ್ನ ದಂಡಿಸೋದಕ್ಕೋಸ್ಕರ ಎಲ್ಲಿಗಾದರೂ ಕರೆಕೊಂಡು ಹೋಗಿಬಿಟ್ಟರೋ ?....ಇಲ್ಲಾ ಅವರ ಮಾತು ನಡೆತೆಗಳೆಲ್ಲಾ ಬರೀ ಬೂಟಾಟಿಕೆಯೋ ? ...ಅಪ್ಪಾ! ...ನಾನು ಮೋಸಹೋದೇ !!....(ಅಳುವಳು)

**ಗೋಪೀನಾಥರಾವ್** :—(ಅವಳ ಕೈ ಹಿಡಿದು) ಉಮಾ! ನೀನು ತಿಳಿವಳಿಕಸ್ಥೆ, ಹುಟ್ಟಿದಾರಭ್ಯ ನೀನು ನಿನ್ನಸ್ಥಿತಿಗೆ ಕೂಡಾ ಒಂದು ದಿನವೂ ಕೊರಗಿದವಳಲ್ಲ ಈಗ ಹೀಗೆ ದುಃಖಪಡೋದು ಸರಿಯೇಅಲ್ಲ. ನಿಜ.... ಸರಸೂ ಮಾತು ಕೇಳಿ ನಿನಗೆ ಮದುವೇ ಬೇರೆಮಾಡಿ, ಇಲ್ಲದ ದುಃಖ ತಂದಿಟ್ಟೆ. ನೋಡೋಣ ಉಮಾ! ಈಗ ದಾಸ ಪೋಸ್ಟಾಫೀಸಿಗೆ ಹೋಗಿದಾನಲ್ಲ ಈವತ್ತೇನೂ ಕಾಗದ ಬರೆದಿದ್ದರೇ, ನಾಳೆಯ ಮೆಯಿಲ್‌ನಲ್ಲಿ ನಾನೇ ಹೊರಟು ಅವರಲ್ಲಿಗೆ ಹೋಗಿದ್ದಾರೋ ಪತ್ತೆಹಚ್ಚಿ, ಏನು ವಿಚಾರಾಂತ ತಿಳಿದುಬರುತೇನೆ; ಸಾಧ್ಯವಾದರೆ ಅವನನ್ನೂ ಜೋತೇಲೇ ಕರೆತರುತೇನೆ. ನೀನು ಸ್ವಲ್ಪ ಸಮಾಧಾನ ಮಾಡಿಕೋಮ್ಮ

**ಉಮಾ** :— ಖಂಡಿತಾ ಹೋಗಿನೋಡಿಕೊಂಡು ಬರುತೀಯೇನಪ್ಪಾ?

**ಗೋಪೀನಾಥರಾವ್** :— ಖಂಡಿತ ಹೋಗಿಬರುತೇನಮ್ಮಾ'! ಈಗ ನಡೀ ; ಬೇರೆ ಸೀರೆಗೀರೆ ಉಟ್ಕೊಕೋ ; ಧಾರೆಯ ಟೈಮಿಗಾದರೂ ನಾವಲ್ಲಿ ರೋಣ. ಇಲ್ಲದಿದ್ದರೆ ತೀರ ಊಟಕ್ಕೇ ಅಲ್ಲಿಗೆ ಹೋದಹಾಗಾಗುತ್ತೆ.

**ಉಮಾ** :—ಎಲ್ಲೀಗಪ್ಪಾ ?

**ಗೋಪೀನಾಥರಾವ್** ;—ಏನುಮಾ ಹೀಗೆ ಕೇಳುತೀ ? ಬೆಳಗಿನಿಂದ ನಿಮ್ಮಮ್ಮ ಹೇಳುತಾನೇ ಇಲ್ವೇ ? ಲಕ್ಷ್ಮೀನರಸಿಂಹಯ್ಯನ ಮಗಳ ಮದುವೇಗೆ ? ಮೊನ್ನೆ ಅವರು ಕರೆಯೋದಕ್ಕೆ ಬಂದಿದ್ದಾಗ ಬರುತೀನೀಂತ ಹೇಳಿದೆಯಂತೇ !

**ಉಮಾ** ·—ಹೇಳಿದ್ದೇಪ್ಪ ಆದರೆ ನಾನು ಏನು ಮುಖ ಇಟ್ಟುಕೊಂಡು ಮದುವೆಮನೆಗೆ ಬರಲಪ್ಪಾ ?

**ಗೋಪೀನಾಥರಾವ್** —ಇದು ಯಾಕೆ ಉಮಾ ಹೀಗಂತೀ ! ನೀನೇನಂಥಾ ಮಾಡಬಾರದ ಅಪರಾಧಮಾಡಿರೋದು ?

**ಉಮಾ** ·—ಅಪರಾಧಕ್ಕಲ್ಲಪ್ಪಾ ! ನನಗೆ ಮನಸ್ಸು ನೆಮ್ಮದಿಯಿಲ್ಲ; ಅಲ್ಲದೇ ಅಲ್ಲಿನ ನೆಂಟರಿಷ್ಟರೆಲ್ಲಾ ಬಂದಿರುತಾರೇ ; ಎಲ್ಲರೂ ಅವರ ವಿಚಾರ ಕೇಳುತಾರೇ ? ನನಗೆ ದುಃಖವಾಗುತ್ತೇ. .

**ಗೋಪೀನಾಥರಾವ್** —ನಿನ್ನೊಬ್ಬಳನ್ನೇ ಅದೂ ಈ ಸ್ಥಿತೀಲಿ ಹ್ಯಾಗಮ್ಮ ನಾವು ಬಿಟ್ಟುಹೋಗೋದು ?

**ಉಮಾ** .—ಯಾಕಪ್ಪಾ ದಾಸ ಇರುತಾನಲ್ಲಾ !

**ಗೋಪೀನಾಥರಾವ್** :— ಒಂದು ಕೆಲಸ ಮಾಡು. ನಿನ್ನ ಗಂಡ ನಿಂದ ಈಗೇನಾದರೂ ಕಾಗದ ಬಂದು ಬಿಟ್ಟಿರೆ ನಮ್ಮಸಂಗಡ ಬರುತೀಯೋ?

**ಉಮಾ** —(ಕತ್ತನ್ನು ತಗ್ಗಿಸುವಳು)

**ಗೋಪೀನಾಥರಾವ್** ·—ಸರೀ ಹಾಗಾದರೇ ! ನೀನು ಒಳಕ್ಕೆಹೋಗಿ ನಿಮ್ಮಮ್ಮನಿಗೆ ಹೀಗಂತಹೇಳಿ ಸ್ವಲ್ಪ ಉಪ್ಪಿಟ್ಟು ಕಾಫಿ ತಗೋ ; ಹೊಟ್ಟೆಗಿಲ್ಲದಿರೋದು ಹ್ಯಾಗೇ ! ನಾವೂ ಧಾರೆ ಮುಗಿಸಿಕೊಂಡು ಮನೆಗೆ ಬಂದೇ ಬಿಡುತೇವೆ ರಾತ್ರೀಗೆ ಮೂರು ಜನರೂ ಊಟಕ್ಕೆ ಹೋದರಾಯಿತು.

**ಉಮಾ** :— ಅದು ಯಾಕಪ್ಪಾ ?

**ಗೋಪೀನಾಥರಾವ್** —ನಿನ್ನನ್ನ ಬಿಟ್ಟು ನಿಮ್ಮಮ್ಮ ಊಟಮಾಡು ತಾಳೇನಮ್ಮಾ? ಮಧ್ಯಾಹ್ನದ ಊಟ ಇಲ್ಲೇ ಮಾಡೋಣ ನಾಲ್ಕು ಜನರೂ, ಅಡುಗೆ ಹ್ಯಾಗೂ ಮಾಡಿಟ್ಟಿತಾಳೆ. ಅಕಸ್ಮಾತ್ ದಾಸ ಕಾಗವೇನೇನಾದರೂ ತಂದು ಬಿಟ್ಟರೆ, ಮಾಡಿರೋ ಅಡುಗೆ ದಾಸನ ಮನೆಗೆ ಕೊಟ್ಟು ಕಳಿಸಿಬಿಟ್ಟು ನಾಲ್ಕು ಜನರೂ ಅಲ್ಲಿಗೆ ಹೊರಟು ಹೊಗೋಣ ನೀನು ನಡೀ ಒಳಕ್ಕೆ

(ಉಮಾ ಕುರ್ಚಿಯನ್ನು ತಳ್ಳಿಕೊಂಡು ಒಳಕ್ಕೆ ಹೋಗುವಳು)

**ಗೋಪೀನಾಥರಾವ್** —[ಅತ್ತಕಡೆಯೇ ನೋಡುತ್ತಿದ್ದು] ತಾನು ಮದುವೇಗೇ ಅಯೋಗ್ಯಳೂಂತ ಮನಸ್ಸನ್ನ ಗಟ್ಟಿ ಮಾಡಿಕೊಂಡು, ಏನೋ ಒಂದು ರೀತಿ ನೆಮ್ಮದಿಯಾಗಿದ್ದ ಮಗೂಗೆ, ಮದುವೆ ಒಂದುಮಾಡಿ ಕೂಡಿಸೀ ಇಲ್ಲದ ಸಂಕಟಕ್ಕೆ ತಳ್ಳಿದಹಾಗಾಯಿತು. ಈಗಿನ ಕಾಲದ ಹುಡುಗ್ರ; ಅವರ ಅಪ್ಪನ ಬಲವಂತಕ್ಕೆ ಮದುವೆಯಾದೋನು. ಯಾವ ಕಾರಣಕ್ಕೊ ಏನೊ ನಾಲ್ಕು ದಿವಸ ಇಲ್ಲಿ ಅಷ್ಟೊಂದು ಸರಸವಾಗಿದ್ದುಬಿಟ್ಟ, ಯಾರು ಕಂಡೋರು ಇವರ ಮನಸನ್ನ........ಮುಂದಾದರೂ ಉಮಾನ್ನ ನೆಮ್ಮದಿ ಯಾಗಿಟ್ಟುಕೊಂಡಿರುತಾನೇಂತ ಏನು ಭರವಸೆ! ಅವಳ ಮಾತುಕೇಳಿ ಕೊಂಡು ಮದುವೇ ಒಂದು ಮಾಡಿದ್ದೇ ಸಾಕು, ಆಸ್ತಿನೂ ಮೊನ್ನೆ ಇವನ ಹೆಸರಿಗೇ ಮಾಡಿಬಿಟ್ಟಿದ್ದರೆ, ಇನ್ನೆಷ್ಟು ಪದ್ದಾಡಬೇಕಾಗುತಿತ್ತೋ. ಎಲ್ಲಾನೂ ಉಮನ ಹೆಸರಿನಲ್ಲಿಟ್ಟರೋದೇ ಸರಿ ಆದರಿಂದಲಾದರೂ ಈ ಹುಡುಗೀಗೇ ಅಷ್ಟು ಕಷ್ಟವಾಗಲಾರದು....... ಅಷ್ಟು ಹೇಳಿ ಹೋದಹುಡುಗ ಎಂಟುದಿವಸ ಗಳಲ್ಲಿ ಒಂದು ಕಾಗದಾನೂ ಹಾಕದೆ, ಒಂದು ಸುದ್ದೀನೂ ತಿಳಿಸದೇ, ಹೇಳದೇ ಕೇಳದೇ ಹೊರಟುಹೋದಾನೆ!! ಎಲ್ಲಿಗೆ ಹೋಗಿದ್ದಾರೂ?...... ನಾನೇ ಹೋಗಿ ವಿಷಕಂಠಯ್ಯನ ಹಿಡಿದು ನಿಜವಾದ ಸಂಗತಿ ತೀದು ಬಂದ ಹೊರತೂ ಮನೇಲಿ ಯಾರ ಮನಸ್ಸಿಗೂ ನೆಮ್ಮದಿಯಿಲ್ಲ. ಈ ಲಗ್ನದ್ದೊಂದು ಮುಹೂರ್ತ ಇವತ್ತೇ ಬರದಿದ್ದರೆ ಇವತ್ತೇ ಹೋಗಿ ವಿಚಾರಿಸಿಕೊಂಡು ಬಂದು ಬಿಡುತಿದ್ದೆ. ಈಗ........ಇನ್ನೇನು ಮಾಡೋದು, ಇವತ್ತೊಂದು ದಿನ ಕಳೀಲಿ. ನಾಳೆ ಮೆಯಿಲ್‌ಗೇ ಹೋಗಿ ಬಂದುಬಿಡುತ್ತೇನೆ (ಹೊರಗಿನಿಂದ ದಾಸನು ಬರ ಗೈಲಿ ಬರುವನು.) ದಾಸಾ! ಏನು ಸಮಾಚಾರ?

**ದಾಸ**:—(ಮಂಕಾಗಿ) ಯಾವಕಾಗದಾನೂ ಬಂದಿಲ್ಲ ಸ್ವಾಮೀ

ಪೋಸ್ಟ್ ಮ್ಯಾನು ಮುಕುಂದರಾವು "ಏನಪ್ಪಾ ದಿನಾಬತರ್ಾ ಇದೀಯಲ್ಲಾ ಬಂದ ಕಾಗದಾನೆಲ್ಲಾ ನಾನೇ ನಿಮ್ಮ ಮನೆಗೆ ಎರಡು ವರುಷದಿಂದ ತಂದು ಕೊಡುತಾ ಇಲ್ವಾ" ಅಂದ. ನಾನು ಅವನತಾವು "ಬೆಂಗಳೂರಿಂದ ಒಂದು ತುರ್ತುಕಾಗದಾ ಬರಬೇಕಾಗಿತ್ತು, ಅದಕೋಸ್ಕರ ಬಂದ್ದೇ"ಂದೇ. "ಬಂದರೆ ನಾನೇ ತಂದುಕೊಡುತೀನಿ, ಓಗು'' ಅಂದ

**ಗೋಪೀನಾಥರಾವ್** :—ದಾಸಾ! ನೀನು ಒಳಕ್ಕೆ ಹೋಗಬೇಡ ಇರು. ನಾನು ನಾಳೇ ಮೆಯಿಲ್‌ಗಾಡೀಲಿ ಬೆಂಗಳೂರಿಗೆ ಹೋಗಿ, ವಿಷಕಂಠಯ್ಯನ ನೋಡಿ, ವಿಚಾರಾನ ಪತ್ತೆ ಹಚ್ಚಿಕೊಂಡು ಬರಬೇಕು. ಕೈಗೆ ದುಡ್ಡು ಬಂದಾಯಿತೂಂತ ಹುಡುಗನ್ನೂ ಬಲವಂತಮಾಡಿ ಕರೆಕೊಂಡು, ಈಶ್ವರಯ್ಯ ಅವನ ಹೆಂಡತಿ ದೇಶಾನೇ ಬಿಟ್ಟು ಹೊರಟುಬಿಟ್ಟರೇನೋ ಅಂತನ್ನಿಸುತ್ತೆ. ಅಂತೂ, ದಾಸ! ಉಮಾಗೆ ಮದುವೆ ಮಾಡಿದ್ದು ಅಷ್ಟೇನೂ ವಿವೇಕದ ಕೆಲಸವಾದಹಾಗೆ ಕಾಣಲಿಲ್ಲ.

**ದಾಸ** :—ನನಗೆ ಆಶ್ಚರ್ಯ ಬುದ್ದೀ! ಚಿಕ್ಕವ್ವಾ ಅವರನ್ನ ಕಂಡರೆ ಪ್ರಾಣಕ್ಕಿಂತ ಎಚ್ಚೂಂತ ಆಡುತಿದ್ದರು ಅವರು-ಎಂಟುದಿನನಿಂದ ಒಂದು ಕಾಗದ ಬ್ಯಾಡವರಾ? ಯಾರನ್ನ ನಂಬೋದು ಪ್ರಪಂಚದಾಗೇ!

**ಗೋಪೀನಾಥರಾವ್** :—ನಿನಗೂ ಆ ಹುಡುಗನಲ್ಲಿ ಅಪನಂಬಿಕೆಯೇ?

**ದಾಸ** :—ಅಪನಂಬಿಕೇಂತಲ್ಲ ಬುದ್ದೀ........

**ಗೋಪೀನಾಥರಾವ್** :—ಛೀಛೀ! ಆ ಹುಡುಗ ಸ್ವಂತ ಬುದ್ಧಿಯಿಂದ ಕಾಗದ ಬರೀದೇ ನಿಂತಿರಲಾರ. ತಂದೆ ತಾಯಿಗಳ ಬಲವಂತಕ್ಕೆ ಸಿಕ್ಕಿಕೊಂಡು, ಏನೋ ಹಿಂಸೆ ಪಡುತಾ, ಎಲ್ಲಿಗೋ ಹೋಗಿರಬೇಕು........ ಇರಲೀ. ನಾನು ಪತ್ತೆ ಮಾಡುತೇನೆ. ಒಂದು ಸಾವಿರ ರೂಪಾಯಿ ಖರ್ಚಾದರೂ ಪರವಾಯಿಲ್ಲ.

**ದಾಸ** :—ನಾನೂ ತಮ್ಮ ಕೂಟಬರಲಾ ಬುದ್ದೀ ಬೆಂಗಳೂರಿಗೆ?

**ಗೋಪೀನಾಥರಾವ್** ;—ನೀನು ಬಂದುಬಿಟ್ಟರೆ ಮನೇಕಡೇ ಯಾರೂ ದಾಸ.........ಈಗ ನಾನೂ ದೊಡ್ಡಮ್ಮಾ ಆ ಲಕ್ಷ್ಮೀನರಸಿಂಯ್ಯನ ಮನೇ ಮದುವೇಗೆ ಜೈ ಎಕ್ಸ್‌ಪ್ರೆಸ್‌ಗೆ ಹೋಗಿಬರುತೇವೆ ಗಾಡೀಮೇಲೆ

ಧಾರೆಮುಗಿಸಿಕೊಂಡು ಬೇಗಲೇ ಬಂದುಬಿಡುತ್ತೇವೆ. ಆ ಹುಡುಗಿಯಂತೂ ಬರೊಲ್ಲ. ......

**ದಾಸ** —ಊಟ ಬುದ್ಧೀ ?

**ಗೋಪೀನಾಥರಾವ್** :—ಊ ಟ ಕ್ಕೆ ಲ್ಲೀ ಗೇ ಬಂದುಬಿಡುತ್ತೇವೆ; ರಾತ್ರೀಗೆ, ಆದರೆ ಮದುವೇ ಮನೇ ಊಟಕ್ಕೆ ಹೋಗೋದು. ಸ್ವಲ್ಪ ಮನೇ ಕಡೇ ನೋಡಿಕೋ.

**ದಾಸ** :—ಆಗಲೀ ಬುದ್ಧೀ

**ಸರಸ್ವತಮ್ಮ** —(ಒಳಗಿನಿಂದ ಬಂದು) ಏನೂಂದ್ರೇ! ಕಾಗದ ಬರಲಿಲ್ಲವೇ ?

**ಗೋಪೀನಾಥರಾವ್** —ಇಲ್ಲಾ ಸರಸೂ! ಏನೋ ಮೋಸವಾಗುತಾ ಇದೆ. ಈವತ್ತು ಈಲಗ್ನದ ರಿಸೆಪ್ಷನ್ ಮುಗಿಸಿಕೊಂಡು, ನಾನೇ ನಾಳೆಯ ಮೇಲ್‌ಗಾಡಿಗೇ ಬೆಂಗಳೂರಿಗೆ ಹೋಗಿ ಆ ವಿಷಕಂಠಯ್ಯನ್ನ ಹಿಡಿದು ಏನು ಸಮಾಚಾರಂತ ತಿಳಿಕೊಂಡು, ಅವರೆಲ್ಲಿದ್ದರೂ ಪತ್ತೆ ಹಚ್ಚಿ ಹುಡುಗನ್ನ ಕರಕೊಂಡು ಬಂದೇ ಬರುತ್ತೇನೆ ಅದಕ್ಕಾಗಿ ಎಷ್ಟು ಸಾವಿರ ಖರ್ಚಾದರೂ ಚಿಂತೆಯಿಲ್ಲ

**ಸರಸ್ವತಮ್ಮ** :—(ಕಣ್ಣೊರಿಸಿಕೊಂಡು) ಹಣತೆ ಹಚ್ಚಿದ್ದ ವ.ನೇಲಿ ಮಿಂಚು ಹೊಳೆದು ಮರೆಯಾದ ಹಾಗಾಯಿತು ನಾವು ತೃಪ್ತಿಗಿದ್ದ ಆ ಹುಡುಗೀಗೆ ಮದುವೆಮಾಡಿದ್ದು ಸರಿಯೋ ತಪ್ಪೋ ಅನ್ನೋ ಪ್ರಶ್ನೆ ಹುಟ್ಟುತಾ ಇದೆ ಆ ಹುಡುಗ ಇಲ್ಲಿದ್ದಿದ್ದಕ್ಕೂ, ಈಗ ಹೀಗೆ ಹೇಳದೇ ಕೇಳದೇ ಕಣ್ಮರೆಯಾಗಿರೋದಕ್ಕೂ ಅರ್ಥಾರ್ಥಕ್ಕೆ ಸಂಬಧವಿಲ್ಲಾ! ಏನು ಆಶ್ಚರ್ಯ !!

**ಗೋಪೀನಾಥರಾವ್**,—(ಗಡಿಯಾರವನ್ನು ನೋಡಿ) ನಡೀ ಸರಸೂ! ಧಾರೆ ಹೊತ್ತಿಗಾದರೂ ಹೋಗಿ ಬಂದು ಬಿಡೋಣ ಏನು ಮಾಡುತಾ ಇದಾಳೆ ಉಮಾ ?

**ಸರಸ್ವತಮ್ಮ** —ಬಲವಂತಕ್ಕೆ ಒಂದು ಸ್ವಲ್ಪ ಹೆಸರುಹಿಟ್ಟು ತಿಂದು ಓವಲ್ಟೈನ್ ಕುಡಿದು ಕೂತಿದಾಳೆ. ನಡೀರಿ-ಬೇಗ ಬಂದು ಬಿಡೋಣ........ ದಾಸಾ! ಸ್ವಲ್ಪ ಮನೇಕಡೇ ನೋಡಿಕೋ-ಬಂದುಬಿಡುತ್ತೇವೆ

(ಗೋಪೀನಾಥರಾವ್ ಮತ್ತು ಸರಸ್ವತಮ್ಮ ಹೊರಡುವರು.)

**ದಾಸ :**— ಆಗಲೀ ತಾಯೀ (ಎಂದು ಬಾಗಿಲಬಳಿ ನಿಲ್ಲುವನು )
[ಎರಡು ಘಂಟೆಗಳನಂತರ ಗೋಪಿನಾಥರಾಯನ ಮನೆಯಹಜಾರ. ಎಲ್ಲ ಹಿಂದಿದ್ದಂತೆಯೇ. ಉಮಾ ಕುರ್ಚಿಯಮೇಲೆ ಕುಳಿತು ದುಃಖಿಸುತ್ತಿದ್ದಾಳೆ.]

ಮನರಂಗದಲ್ಲಿ ಮೆರೆದ ಸುಖ ಸ್ವಪನವು ಮರೆಯಾಯ್ತೇ | ನವಜೀವನದೆಳೆ ವಳ್ಳಿ ಬಿರುಗಾಳಿಗೆ ತುತ್ತಾಯ್ತೇ || ನೀರವತೆಯ ನಡುವಿನಿಂದ ಮಧುರಗಾನ ಬಂದು| ತಾನಿದ್ರಿಸಿದ್ದ ಮನವ ಕುಣಿದಾಡಿಸಿ ಬಯಲಾಯ್ತೇ|| ಅರಿವಿಲ್ಲದ ನೆನ ಪುಗಳ ಸುಳಿಗಾಳಿಯು ಸುತ್ತಿಹುದೇ| ಮನರಂಗದಲ್ಲಿ ಮೆರೆದ ಸುಖಸ್ವಪನವು ಮರೆಯಾಯ್ತೇ || ನಿಷ್ಠೂರನು ವಿಧಿಯೂ ಬಲು ನಿಷ್ಠೂರನು ವಿಧಿಯೂ | ತಾನಾಗಿಬಂದ ಭಾಗ್ಯವ ತಾನೇಕೆ ಕೊಂದೆನಯ್ಯೋ '' || ಮತ್ತಾರಲಿ ಗೋಳಾ ಡಲೀ ನನ್ನೀದುಃಖದ ಪರಿಯಾ | ಮನದಾಸೆ ಮನಸ್ಸಿನಲ್ಲಿಯೆ ತಾ ಕಂದಿ ನಂದಿ ಹೋಯ್ತೇ '! || ಮನರಂಗದಲ್ಲಿ ಮೆರೆದ ಸುಖಸ್ವಪನವು ಮರೆಯಾಯ್ತೇ!!
[ಹೊರಗಿನಿಂದ ದಾಸನು ಪತ್ರವೊಂದನ್ನು ಹಿಡಿದು ಸಂತೋಷದಿಂದ ಓಡಿಬರುವನು.]

**ದಾಸ** —ಅವ್ವಾ ' ಎಳಡನೇ ಟಪಾಲ್ನಾಗೆ ಈ ಕಾದಬಂದೈತಿ

**ಉಮಾ :**—[ಕುರ್ಚಿಯನ್ನು ವೇಗವಾಗಿ ತಳ್ಳಿಕೊಂಡು ಹೋಗಿ] ತಾ ತಾ! [ಕಾಗದವನ್ನು ತೆಗೆದುಕೊಂಡು ಆತುರಳಾಗಿ ಒಡೆದು ನೋಡುತ್ತಿರು ವಳು.]

**ದಾಸ ,**—ಚಿಕ್ಕಸ್ವಾಮಿಯೋರು ಬರೆದವರೇನರವ್ವ? ಓಗ್ಲೀ ಬಿಡಿ! ಅರ್ದಆತಂಕಾ ಕಡಿಮೆಯಾಯ್ತು. ಅವ್ವಾ ' ನಾನು ತೋಟದಾಗೆಗಿಡಕ್ಕೆ ನೀರಾಕುತಾ ಇರ್ತೀನಿ.

**ಉಮಾ :**—[ಕತ್ತನ್ನೆತ್ತದೆ] ಹೂಂ '
[ದಾಸನು ಸಂತೋಷದಿಂದ ನಿಷ್ಕ್ರಮಿಸಿದನು.]

**ಉಮಾ** —[ಮುಂಕಾಗಿ ಪತ್ರವನ್ನು ಮತ್ತೊಮ್ಮೆ ಪ್ರಾರಂಭಿಸಿ ಓದುವಳು.] [ಕಾತರದಿಂದ] ನನ್ನ ಪೂರ್ಣ ಕನಿಕರಕ್ಕೆ ಪಾತ್ರಳಾದ ಉಮಾ! ಈ ವೇಳೆಗೆ ನಾನು ನಿನಗೆ ಪತ್ರವನ್ನೇ ಬರೆಯುವುದಿಲ್ಲವೆಂದುಕೊಂಡು ಕಲ್ಲು ಮನಸ್ಸು ಮಾಡಿಕೊಂಡು, ನನ್ನನ್ನು ಮರೆತುಬಿಡಲು ಪ್ರಯತ್ನ ಮಾಡುತಿದ್ದೆಯೇನೋ? ಆದರೆ ನಾನು ನಿನ್ನಿಂದ ಪೂರ್ಣವಿಮುಖನಾಗುವುದಕ್ಕೆ ಮುಂಚೆ ಕಡೆಯ ದಾಗಿ ಮತ್ತೂ ಮೊದಲನೆಯದಾಗಿ ಈ ಪತ್ರವನ್ನು ಹಾಕು ಬಿಡೋಣವೆಂದು

ಬರೆದಿದ್ದೇನೆ. ನೀನು ಕವರಿನ ಮೇಲೆ ಮುದ್ರೆಯಿಂದ ಕಾಣುವಂತೆ, ಮೈಸೂರಿನಿಂದ ಈ ಪತ್ರವನ್ನು ಬರೆದಿದ್ದೇನೆ. ನಾನೂ, ನಮ್ಮ ತಂದೆ ಮತ್ತು ತಾಯಿ ಮೂವರೂ ಬೆಂಗಳೂರನ್ನು ಬಿಟ್ಟು ಇಲ್ಲಿನ ದೊಡ್ಡ ಮನುಷ್ಯರಿಬ್ಬರ ಮನೆಯ ಹೆಣ್ಣುಗಳನ್ನು ನೋಡಲು ಬಂದಿದ್ದೇವೆ. ಒಂದು ಹೆಣ್ಣಿನ ಹೆಸರು ರಜನೀ. ಆದರೆ ನೋಡುವುದಕ್ಕೆ ಬೆಳದಿಂಗಳಿನಂತೆ ಸುಂದರಳಾಗಿದ್ದಾಳೆ ಬಿ. ಎ ಪ್ಯಾಸ್ ಮಾಡಿರುವುದಲ್ಲದೆ ಸೊಗಸಾಗಿ ಹಾಡುತ್ತಾಳೆ. ಹದಿನೆಂಟು. ವರುಷ ವಯಸ್ಸು ನಾನೇನೋ ಇವಳನ್ನೇ ಮದುವೆಯಾಗಲು ಒಪ್ಪಿದೆ [ನೋವಿನಿಂದ] ಆದರೆ ನಮ್ಮ ತಂದೆಯವರು ಜೋಡೀದಾರರ ಮಗಳಾದ ಸುಮಿತ್ರಾ ಎಂಬ ಮತ್ತೊಂದು ಹೆಣ್ಣನ್ನು ತರಬೇಕೆಂದು ಬಯಸುತ್ತಾರೆ. ಸುಮಿತ್ರೆಗೆ ಮೆಟ್ರಿಕ್ಯುಲೇಷನ್ ಪಾಸಾಗಿದ್ದರೂ ಇಂಗ್ಲಿಷ್‌ನಲ್ಲಿ ಬಹು ಸೊಗಸಾಗಿ ಮಾತಾಡುತ್ತಾಳೆ; ಅಲ್ಲದೆ ನನ್ನನ್ನು ನೋಡಿದಾರಭ್ಯ ನನ್ನನ್ನೇ ಮದುವೆಯಾಗಬೇಕೆಂದು ಹಟ ಹಿಡಿದಿದ್ದಾಳಂತೆ. ಸುಮಿತ್ರೆ ರಜನಿಯಷ್ಟು ಬೆಳ್ಳಗಿಲ್ಲದಿದ್ದರೂ ಬಲು ಲಕ್ಷಣವಂತೆ, ಜಾಣೆ ಮುಖ್ಯವಾಗಿ ಇಬ್ಬರಿಗೂ ಕೈಕಾಲುಗಳು ಗಟ್ಟಿಯಾಗಿವೆ- ಮದುವೇಗೆ ಯೋಗ್ಯರಾದ ಹೆಣ್ಣುಗಳಾಗಿದ್ದಾರೇ ಅಲ್ಲದೆ ವರದಕ್ಷಿಣೆ ಎಂಟು ಸಾವಿರಕ್ಕೆ ಮೇಲ್ಪಟ್ಟು ಕೊಡಲು ಇಬ್ಬರೂ ಸಿದ್ಧವಾಗಿದ್ದಾರೆ. ಜೊತೆಗೆ ಈಗಿರುವಂತೆ ಇಬ್ಬರೂ ಸೇರಿ ಎರಡು ಹೆಣ್ಣುಗಳನ್ನೂ ಮಾಡಿಕೋ ಎಂದು ಬಲವಂತ ಮಾಡುತ್ತಿದ್ದಾರೆ ಮೊನ್ನೆಯ ದಿನ ನಾನು ರಜನಿಯೊಂದಿಗೆ ಬೆಟ್ಟದ ಕಡೆಗೆ ವಾಕಿಂಗ್ ಹೋಗಿದ್ದೆ ನಮ್ಮ ಸಂಗಡ ಅವರ ಮನೆಯ ಆಳು ದೂರದಲ್ಲಿ ಬರುತ್ತಿದ್ದ. ನಮಗೆ ಅವನ ಅರಿವೇ ಇಲ್ಲ. ನಾನೂ ರಜನಿ ಮೈಮರೆತು ಮಾತನಾಡುತ್ತಾ, ಅಲೆಯುತ್ತಾ ಬಂದೆವು. [ದುಃಖಾತಿರೇಖದಿಂದ) ರಜನೀ ನೋಡುವುದಕ್ಕೆ ಮುದ್ದಾಗಿರ, ವುದಿಷ್ಟೇ ಅಲ್ಲ, ಒಳ್ಳೇ ಬುದ್ಧಿವಂತೆ. ಅವಳು ಹೆಂಡತಿಯಾಗಬೇಕಾದರೆ ನಾನು ಪುಣ್ಯ ಮಾಡಿರಬೇಕೆಂದೆನಿಸಿತು. ಸುಮಿತ್ರೆಯ ತಂದೆಯಂತೂ ಬೆಳಗಾದರೆ ನಮ್ಮ ಮನೆಯ ಹತ್ತಿರಕ್ಕೆ ಕಾರು ಕಳುಹಿಸಿ ಕರೆಸಿಕೊಂಡು ರಾಜೋಪಚಾರ ನಡೆಸುತ್ತಾರೆ. ಅವರ ಮನೆಯವರ ಉಪಚಾರ ಕಂಡರೆ ನನಗೆ ನಾಚಿಕೆಯಾಗುತ್ತದೆ. ಅಂತೂ ರಜನಿಯನ್ನೇನೋ ಮದುವೆಯಾಗಿ ಬಿಡಲು ತೀರ್ಮಾನಿಸಿದ್ದೇನೆ ಸುಮಿತ್ರೆಯ ವಿಚಾರವಿನ್ನೂ ತೀರ್ಮಾನವಿಲ್ಲ.

ಇನ್ನು ನಿನ್ನ ವಿಚಾರ. ಏನೋ ಹಿಂದಿನ ಜನ್ಮದ ಕರ್ಮಫಲದಿಂದ ಈ ಜನ್ಮದಲ್ಲಿ ನೀನು ಕಾಲಿಲ್ಲದೆ ಹುಟ್ಟಿದೆ. ನಾನೂ ನಿಮ್ಮ ತಂದೆಯೂ ವಿಷಕಂಠಯ್ಯ ನವರ ಮೂಲಕ ಹೇಳಿ ಕಳುಹಿಸಿದ ಮಾತಿನಂತೆ "ಹುಡುಗೀಗೆ ಮದುವೇಂತ ಆದರೆ ಸಾಕು. ಮುಂದೆ ಅವನು ಬೇರೇ ಸರಿಯಾದ ಹೆಣ್ಣನ್ನ ಮದುವೆ ಯಾಗಲಿ!" ಅನ್ನೊ ಮಾತಿನಂತೆ ನಿನಗೂ ತಾಳಿ ಕಟ್ಟಿದೆ. ಆದರೆ ನಿಮ್ಮ ತಂದೆಯ ನಂಬಿಕೆಯಂತೆ ಮದುವೆಯಾದರೂ ಕಾಲು ಬರಲಿಲ್ಲ. [ಗದ್ಗದಿತ ಳಾಗಿ] ನೀನೇನೋ ಒಳ್ಳೇ ಹುಡುಗಿ, ಆದರೆ ನಾನು ನನ್ನ ಯೋಗ್ಯತೆಗೆ ತಕ್ಕಂತೆ "ನನ್ನ ಹೆಂಡತೀಂತ" ನಿನ್ನನ್ನ ಯಾರಿಗೆ ಇಂಟ್ರಡ್ಯೂಸ್ ಮಾಡೋ ದಕ್ಕೂ ಸಂಕೋಚ, ಅಲ್ಲದೆ ನಿನ್ನನ್ನ ಕಟ್ಟಿಕೊಂಡು ಹೊರಗಡೆ ಎಲ್ಲಿಗೂ ಬರೋಹಾಗಿಲ್ಲ, ಹೋಗೋ ಹಾಗಿಲ್ಲ. ನಾನಲ್ಲಿದ್ದಷ್ಟು ದಿವಸವೂ, ನಿನ್ನ ಮೇಲಿನ ಕನಿಕರದಿಂದ ಒಳ್ಳೇ ಮಾತೇ ಆಡಿಕೊಂಡಿದ್ದೆ ಅಲ್ಲದೆ ಮತ್ತೆ ನಿನ್ನನ್ನ ನೋಡೋದಕ್ಕಾಗಲಾರದೂಂತಲೇ ಪಟ್ಟಾಗಿ ಎಂಟು ದಿವಸ, ನನಗೆ ತೃಪ್ತಿಯಾಗೋವರೆಗೂ ನಿನ್ನ ಸಂಗಡಲೇ ಇದ್ದುಬಿಟ್ಟೆ ಅಷ್ಟು ದಿನವೂ ನನಗಾಗುತ್ತಿದ್ದ ಬೇಜಾರನ್ನ ನಿನಗೆ ತೋರ್ಪಡಿಸುತ್ತಿರಲಿಲ್ಲ; ನಿನ್ನ ಮನಸ್ಸಿಗೆ ನೋವಾದೀತೂಂತ, (ರೋದಿಸುತ್ತಾ) ಈಗಂತೂ ನಿನಗೆ ಕಾಗದ ಬರೀಬೇ ಕಾದ ಪ್ರಮೇಯವೇ ಇರಲಿಲ್ಲ. ಆದರೆ ಈಗ ನೀನು ನನ್ನ ಮೇಲೆ ಕನಿಕರ ವಿಟ್ಟು ಏನಾದರೂ ಒಂದು ಉಪಾಯಮಾಡಿ, ನಾನು ರಜನಿಯನ್ನು ಮದುವೆ ಯಾಗಲು ಸಹಾಯಮಾಡಿ ಪುಣ್ಯಕಟ್ಟಿಕೋ. ನಿನಗೆ ನನ್ನಮೇಲೆ ಪ್ರೀತಿ ಯಿರುವುದು ನಿಜವಾದರೆ, ನೀನು ಏನಾದರೂ ಒಂದು ದಾರಿಮಾಡು. ಏಕೆಂದರೆ ರಜನಿಯ ತಂದೆಯು "ನೀವು ಮೊದಲು ತಾಳಿಕಟ್ಟಿದ ಹೆಣ್ಣು ಇರುವಾಗ ಅವಳ ನಿಮ್ಮ ಸಂಬಂಧದ ವಿಚಾರ ಇತ್ಯರ್ಥವಾಗದೇ ರಜನಿಯನ್ನು ಮದುವೆ ಯಾಗುವುದು ಕ್ಷೇಮವಲ್ಲ" ಎಂದುಬಿಟ್ಟಿದ್ದಾರೆ. (ಬಿಕ್ಕುತ್ತಾ) ಉಮಾ! ನೀನು ಬುದ್ಧಿವಂತೆ! ನನ್ನ ಸುಖಕ್ಕೆ ಅಡ್ಡಿಬರುವಂಥ ಸ್ವಾರ್ಥಿಯಲ್ಲವೆಂದು ನನಗೆ ಚೆನ್ನಾಗಿ ನಂಬಿಕೆ. ನಿಮ್ಮ ತಂದೆ ಕೊಟ್ಟಿರುವ ಹಣವನ್ನೆಲ್ಲಾ ಹಿಂದಿರುಗಿಸಿ ಕೊಡಲು ರಜನಿಯ ತಂದೆಯೇ ಸಿದ್ಧವಾಗಿದ್ದಾರೆ ಆದರೆ ನಿನ್ನ ವಿಚಾರ ಇತ್ಯರ್ಥವಾಗಿಬಿಡಬೇಕು ಏನು ಮಾಡಬೇಕೆಂದು ನೀನೇ ಯೋಚಿಸಿ ತೀರ್ಮಾನಿಸು. ನಿನ್ನ ಕರ್ಮಫಲವನ್ನ ನಾನು ಜನ್ಮೇಪಿ ಅನು

ಭವಿಸದಂತೆ ಮಾಡಿ ಪುಣ್ಯಕಟ್ಟಿಕೋ ಇತಿ–ವಿಜ್ಞಾಪನೆಗಳು.

ಈ ಕಾಗದವನ್ನು ಓದಿಕೊಂಡು ಖಂಡಿತ ಸುಟ್ಟುಬಿಡು ನನ್ನಾಣೆ.

ಶಶಿಕುಮಾರ್

(ಪತ್ರವನ್ನು ಓದಿ ಬಿಕ್ಕಿಬಿಕ್ಕಿ ರೋದಿಸುವಳು.)

ಅಮ್ಮಾ! ಅಪ್ಪಾ! ಕಂಡಿರಾ! ನೀವು ಬಯಸಿ ಬಯಸಿ ಮಾಡಿದ ಮದುವೆಯ ಫಲವನ್ನ! ........ಅಯ್ಯೋ! .....ದೇವರೇ !!.... ...ನನಗೀ ಜನ್ಮ ಏಕೆ ಬಂತು! ........ನಾನು ಹುಟ್ಟದೇ ಹೋಗಿದ್ದರೆ ಜಗತ್ತಿಗೇನು ನಷ್ಟ ವಾಗುತ್ತಿತ್ತು !! ಹುಟ್ಟುತ್ತಲೇ ಸತ್ತುಬಿಟ್ಟಿದ್ದರೆ ನನ್ನ ತಂದೆ ತಾಯಿಗಳಿ ಗಾದರೂ ಇಷ್ಟು ಸಂಕಟವಾಗುತ್ತಿರಲಿಲ್ಲಾ!!....ಅಯ್ಯೋ!! ನನ್ನ ಬಾಳೇ! ಕಂಡವರೆಲ್ಲಾ ಕನಿಕರಪಡುವ ಬಾಳಾಯಿತೇ!!.... ...ಅಮ್ಮಾ!! ಇನ್ನು ನಾನು ಬದುಕಿರಬಾರದು!! ... ನಾನು ಬದುಕಿದ್ದಷ್ಟು ತಾಯಿ ತಂದೆಗಳ ಮನಸ್ಸಿಗೆ ಮುಗಿಯದ ವ್ಯಥೆ. ಅಮ್ಮನಿಗಂತೂ ಅಪಾರ ಸಂಕಟ ಹೇಗಾ ದರೂ ಸತ್ತುಹೋದರೆ ನನಗಂತೂ ಈ ಶರಪಂಜರದಿಂದ ಈ ಅನಿಷ್ಟ ಕುಂಟು ದೇಹದಿಂದ ಬಿಡುಗಡೆ ಅಪ್ಪ ಅಮ್ಮ ಎರಡು ದಿನ ಗೋಳಾಡುತ್ತಾರೆ-ಆಮೇಲೆ ಸುಮ್ಮನಾಗುತ್ತಾರೆ ನನ್ನ ಕತ್ತಿಗೆ ತಾಳೀ ಕಟ್ಟಿದ ಇವರ ಋಣಾನ್ನೂ ತೀರಿಸಿದ ಹಾಗಾಗುತ್ತದೆ........ಇದೇ ಸರಿ. ಅಪ್ಪ ಅಮ್ಮನೂ ಮನೇಲಿಲ್ಲ ಅವಕಾಶ ಸರಿಯಾಗಿದೆ... ...ಆದಷ್ಟೆ ಹ್ಯಾಗೆ ಪ್ರಾಣಕಳಕೊಳ್ಳೋದು?.... ... ವಿಷತಗೋಬೇಕು. .....ವಿಷ ಯಾವುದೋ? ತಗೊಂಡರೆ ಇನ್ನೆಷ್ಟು ಸಂಕಟ ಪಡಿಸುತ್ತೊ?...ಬೇಗ ಪ್ರಾಣಹೋಗದೆ ಎಷ್ಟು ಅವಾಂತರವಾಗಿ ಬಿಡುತ್ತೊ! ಎಷ್ಟು ಗುಲ್ಲಾಗಿ ಬಿಡುತ್ತೊ! [ಸುತ್ತಲೂ ನೋಡಿ] ಏನು ಮಾಡೋದು! [ಮೇಲೆನೋಡಿ] ನೇಣುಹಾಕಿಕೊಬಹುದು? ಆದರೆ ಅದಕ್ಕೇರ್ಪಾಟು ಮಾಡೋದಕ್ಕೆ ಕೈಕಾಲು ಗಟ್ಟಿಯಾಗಿರಬೇಕು. ಈ ಕುಂಟು ದೇಹ ಹೊತ್ತುಕೊಂಡು ನೇಣು ಹಾಕಿಕೊಳ್ಳೋಕೂ ಸಾಧ್ಯವಿಲ್ಲ.... ಏನುಮಾಡೋದು! ..[ಸುತ್ತಲೂ ನೋಡಿ ಯೋಚಿಸುತ್ತಾ ಕಣ್ಣುಮಿಂಚಿ] ಒಳ್ಳೇ ಉಪಾಯಾ! ಕುರ್ಚೀತಳ್ಳಿಕೊಂಡು ಹಿತ್ತಲಕಡೇ ಬಾವಿಯಕಟ್ಟೆಯವರೆಗೂ ಹೋಗಿ, ಮೆಲ್ಲಗೆ ಕಟ್ಟೆಯ ಮೇಲಕ್ಕೆ ತೆವಳಿಕೊಂಡು ಕಣ್ಮುಚ್ಚಿಕೊಂಡು ...... ಒಳಕ್ಕೆ ಜಾರಿ ಬಿಡೋದು. ಇದೇ ಸುಲಭ. ಕ್ಷೇಮ! ಪ್ರಪಂಚದ

ಕಷ್ಟವೆಲ್ಲಾ ಕಡಿಮೆಯಾಗುತ್ತೆ ಎಲ್ಲರಿಗೂ ಸುಖವಾಗುತ್ತೆ........ದಾಸಾ! ದಾಸಾ! (ಉತ್ತರವಿಲ್ಲ!) ಅವನೂ ತೋಟದಲ್ಲಿ ಕೆಲಸಮಾಡುತಿರಬೇಕು. ಅಮ್ಮ ಅಪ್ಪ ಬರೋದರೊಳಗೇ ಈ ಕೆಲಸವಮಾಡಿ, ಮುಂದೆ ಅವರು ಮನಸ್ಸು ಮೆಚ್ಚಿದ ಹೆಣ್ಣನ್ನ ಮದುವೆಯಾಗಿ ಸುಖವಾಗಿರೋದಕ್ಕೆ ದಾರಿಮಾಡಬೇಕು;

ಈ ಕಾಗದ .......ಸುಟ್ಟುಬಿಡಬೇಕೂಂತ ಬರೆದಿದ್ದಾರೆ. ಅವರಿಲ್ಲಿದ್ದಾಗ ನಾನು ಹೇಳಿದ್ದೆಲ್ಲಾ ಕೇಳುತಿರಲಿಲ್ಲವೇ ಪಾಪ, ನಾನು ಅವರ ಮಾತನ್ನ ಚಾಚೂ ತಪ್ಪದೆ ನಡೆಸಬೇಕು ...(ಕುರ್ಚಿಯನ್ನು ಒಳಕ್ಕೆ ತಳ್ಳಿಕೊಂಡು ಹೋಗಿ ಕ್ಷಣಕಾಲಾನಂತರ ಬೆಂಕಿ ಪೆಟ್ಟಿಗೆ ತಂದು ಪತ್ರದಕಡೆಯಲ್ಲಿ "ಶಶಿಕುಮಾರ್" ಎಂದಿರುವುದನ್ನು ಮಾತ್ರ ಹರಿದು) ನೀವು ಸುಖವಾಗಿರಬೇಕು! ಬರುವ ಜನ್ಮಕ್ಕಾದ ನಾನು ನೆಟ್ಟಗೆ ಹುಟ್ಟಿ ನಿಮ್ಮ ಹೆಂಡತಿಯಾಗುವ ಭಾಗ್ಯ ಬಂದರೆ ಸಾಕು ನಿಮ್ಮ ಹೆಸರನ್ನ ಕೈಲಿ ಹಿಡಿದೇ ಮುಳುಗುವುದು.

(ಬೆಂಕೀಕಡ್ಡಿ ಗೀರಿ ಮಿಕ್ಕ ಪತ್ರವನ್ನೆಲ್ಲಾ ಸುಟ್ಟು, ಬೂದಿಯನ್ನು ಮೆಜಿನ ಕೆಳಗಿರುವ ಬುಟ್ಟಿಗೆ ತಳ್ಳಿಬಿಡುವಳು. ಪತ್ರದ ಕಡೆಯ ಚೂರನ್ನು ಮಾತ್ರ ಹಿಡಿದು, ಉದ್ವೇಗದಿಂದ-ಕುರ್ಚಿಯನ್ನು ತಳ್ಳಿಕೊಂಡು ಹೊರಟು ಹೋಗುವಳು. ಕ್ಷಣಕಾಲಾನಂತರ "ಧಢಂ" ಎಂಬ ದೂರದ ಸದ್ದು ಕೇಳಿರಬವುದು-ಸ್ವಲ್ಪ ಹೊತ್ತಿನಲ್ಲೇ ಗೋಪೀನಾಥರಾವ್ ಸರಸ್ವತಮ್ಮ ಸಂತೋಷದಿಂದ ಕಾತರರಾಗಿ ಒಳಕ್ಕೆ ಧಾವಿಸಿ ಬರುವರು.)

**ಗೋಪೀನಾಥರಾವ್.**— (ಹಜಾರಕ್ಕೆ ಬರುತ್ತಿದ್ದಂತೆಯೇ) ಉಮಾ! ನಿನ್ನ ಗಂಡನಿಂದ ಕಾಗದಬಂತಂತೇ; ಏನು ಬರಿದಿದಾನಮ್ಮಾ? (ಸುತ್ತಲೂ ನೋಡಿ) ಉಮಾ! ಉಮಾ!

**ಸರಸ್ವತಮ್ಮ** —ಏನಂತೇಂದರೇ? ಯಾವಾಗ ಬರುತಾರಂತೆ ಅವರು?

**ಗೋಪೀನಾಥರಾವ್**·—ಸರಸೂ! ಉಮಾ ಅಡುಗೇಮನೇಲಿದಾಳೋ, ಡ್ರಾಯಿಂಗ್ ರೂಮೊಳಗಿದ್ದಾಳೋ ನೋಡು....(ಚಿಂತೆಯಿಂದ) ಇಲ್ಲಾ ಹೊಟ್ಟೇ ಹಸಿವು ತಡೀಲಾರದೇ ಬಡಿಸಿಕೊಳ್ಳುತಾ ಇದೆಯೋ!

[ಸರಸ್ವತಮ್ಮನು ಉಮಾ! ಉಮಾ!!" ಎಂದು ಕೂಗುತ್ತಾ ಒಳಗೆಲ್ಲಾ ಅಲೆದಾಡುವಳು.]

**ಗೋಪೀನಾಥರಾವ್**:—ದಾಸಾ! ದಾಸಾ!!

**ದಾಸ** — (ಓಡಿಬಂದು) ಬುದ್ದೀ !!

**ಗೋಪೀನಾಥರಾವ್** :—ಚಿಕ್ಕವ್ವಾ ಅವರು ತೋಟದಲ್ಲಿಲ್ಲಾದರೂ ಇದ್ದರೇನೋ ?

**ದಾಸ** :—ಇಲಾ ಬುದ್ದೀ! ಕಾಗದ ಬರುತಿದ್ದಂಗೇ ನಾನೇ ತಂದು ಕೊಟ್ಟೆ ಅವರ ಕೈಗೆ. ಆತುರವಾಗಿ ಓದಿಕೋತಿದ್ದರು ಚಿಕ್ಕಸ್ವಾಮಿಯೋರಿಂದ ತಾನೇ ಕಾಗದಾಂದೇ. ಔದೂಂತ ಸನ್ನೇವಾಡಿ ಓದ್ತಾನೆ ಇದ್ರು. ನಾನು ತೋಟದಾಗೆ ಕೆಲಸಮಾಡುತಿರ್ತೀನಿ ಅವ್ವಾಂತೇಳಿ, ಆಗಿಂದ ಅಲ್ಲೇ ಇದ್ದೆ. ಅವ್ವಾ ಅವರು ಒರಕ್ಕೆ ಬರಲೇಇಲ್ಲ

**ಸರಸ್ವತಮ್ಮ** :—[ಒಳಕ್ಕೆ ಓಡಿಬಂದು] ಅಯ್ಯೋ! ಬೇಗಬನ್ನೀಂದರೇ! ಉಮಾ ಎಲ್ಲೂ ಇಲ್ಲ! ಅವಳ ಕುರ್ಚಿ ಮಟ್ಟಿಗೆ ಬಾವಿಕಟ್ಟೆ ಮುಗ್ಗುಲಲ್ಲಿದೆ

**ಗೋಪೀನಾಥರಾವ್** .—(ಗಾಬರಿಯಿಂದ) ಉಮಾ !!

(ಎಂದು ಕೂಗುತ್ತಾ ಓಡುವನು. ದಾಸನೂ ಗಾಬರಿಯಿಂದ ಅವನನ್ನು ಹಿಂಬಾಲಿಸುವನು. ಗಟ್ಟಿಯಾಗಿ ರೋದಿಸುತ್ತಿರುವ ಸರಸ್ವತಮ್ಮನು_ಉಮಾ! ಉಮಾ! ಅಯ್ಯೋ ; ಏನು ಮಾಡಿಬಿಟ್ಟೆಯೇ! ತಾಯೀ!!" ಎಂದು ಗೋಳಾಡುತ್ತಾ ಅವರ ಹಿಂದೆ ಹೋಗುವಳು.)

---

# ಅಂಕ ೩ - ಪ್ರವೇಶ ೧.

[ಈಶ್ವರಯ್ಯನ ಮನೆಯಿಂದ ಸ್ವಲ್ಪದೂರದಲ್ಲಿನ ಮಾವಿನತೋಪು. ವಿಷಕಂಠಯ್ಯನೂ ಅಟ್ಟಹಾಸದಿಂದಲ, ಈಶ್ವರಯ್ಯನು ಸಂತಾಪದಿಂದಲೂ ಕೂಡಿ ಮಾತನಾಡುತ್ತಿರುವರು.]

**ಈಶ್ವರಯ್ಯ** :—ನೀನು ಯಾವಾಗ ಬಂದೆ ಮೈಸೂರಿನಿಂದ?

**ವಿಷಕಂಠಯ್ಯ** :— ನಾನು ಮೈಸೂರಿನಿಂದ ಯಾಕೆಬರಲೀ?

**ಈಶ್ವರಯ್ಯ** :—ಆ ಕವರ್‌ಮೇಲೆ ಮೈಸೂರ್ ಪೋಸ್ಟ್ ಆಫೀಸ್ ಮುದ್ರೆಯಿದೆಯಂತೆ.

**ವಿಷಕಂಠಯ್ಯ** :—ಇದೇ! ಒಂದು ಕವರ್ನ ಮೈಸೂರಿನಿಂದ ಪೋಸ್ಟ್ ಮಾಡಿಸಬೇಕಾದರೆ ನಾನೇ ಯಾಕೆ ಖುದ್ದಾಗಿ ಮೈಸೂರಿಗೆ ಹೋಗಬೇಕು ರೈಲು ಛಾರ್ಜು ದಂಡಮಾಡಿಕೊಂಡು? ಮೈಸೂರಿಗೆ ಹೋಗುತಿದ್ದೊಬ್ಬ ಗುರುತಿನಾ ಸಾಮಿಗೆ ಒಂದು ಕಪ್ ಕಾಫಿ ಕುಡಿಸಿದೆ. ಕೆಲಸವಾಗಿಹೋಯಿತು

**ಈಶ್ವರಯ್ಯ** :— ಈಗ ಮುಂದಕ್ಕೆ ಕೇಸಾಗಲ್ಲವೇ?

**ವಿಷಕಂಠಯ್ಯ** :—ಕೇಸೂ? ಯಾರಮೇಲೆ ಸ್ವಾಮೀ? ಯಾಕೇ?

**ಈಶ್ವರಯ್ಯ** :—ಪೇಪರಿನಲ್ಲಿ ಲಾ "ಹುಡುಗಿಯ ಗಂಡ ಬರೆದ ಪತ್ರ ನೋಡಿ ಆತ್ಮಹತ್ಯಮಾಡಿಕೊಂಡಳಂತೇ"ಂತ ಬಂದಿದೆಯಲ್ಲ.

**ವಿಷಕಂಠಯ್ಯ** :— ಪತ್ರ ಎಲ್ಲಿ ಸಿಕ್ಕಿದೇ ಸ್ವಾಮೀ! ಅದರಲ್ಲಿ ಬರೆದಿದ್ದ ಹಾಗೇನೇ ಅದನ್ನ ಸುಟ್ಟುಹಾಕಿಬಿಟ್ಟಿರಬೇಕು.

**ಈಶ್ವರಯ್ಯ** :—ಕವರಿನಮೇಲೆ ಬರವಣಿಗೆಯಾದರೂ ಇದೆಯಲ್ಲಾ!

**ವಿಷಕಂಠಯ್ಯ** :— ನಾನಂಥಾ ಅಡ್ಡಕಸುಬೀನೇ ಸ್ವಾಮೀ! ಕವರಿನ ಮೇಲಿನ ಅಡ್ರೆಸ್‌ನ ಟೈಪ್‌ಮಾಡಿಸಿ ಹಾಕಿಸಿದ್ದೆ.

**ಈಶ್ವರಯ್ಯ** :— ಏನೋ! ಯಾಕೋ ವಿಚಾರ ತುಂಬ ಅವಿವೇಕಕ್ಕಿಟ್ಟುಕೊಂಡಹಾಗಿದೆ. ಈಗ ಶಶಿ "ಗೊಳೋ"ಂತ ಒಂದೇ ಸಮನಾಗಿ ಅಳುತಾ ಹೊರಟುನಿಂತಿದಾನೆ. ಇನ್ನು ಅವನ್ನ ತಡೆಯೋದಕ್ಕೆ ಸಾಧ್ಯವಿಲ್ಲ. ಅವಳಂತೂ ಮಂಡ್ಯದಲ್ಲೇ ಹಾಸಿಗೆ ಹಿಡಿದುಬಿಟ್ಟಳು. ಪೇಪರಿನಲ್ಲಿ ಈ ಸುದ್ದಿಕೇಳಿಬಿಟ್ಟಮೇಲಂತೂ "ಶಶಿ"ಗತಿ ಏನೂಂತ ಕೊರಗಿ, ಅನ್ನ ನೀರು

ಬಿಟ್ಟು ಮಲಗಿಬಿಟ್ಟಿದಾಳೆ.

**ವಿ ಷ ಕಂ ಠ ಯ್ಯ :**— ಯಾವ ವಿಚಾರವೂ ತ ಕ್ಷಣದಲ್ಲಿ ಹಾಗೇ ಕಾಣ್ತಾ ತ್ತಷ್ಟೇ ಈಶ್ವರಯ್ಯನೋರೇ! ಸತ್ತೋರಿಗೆ ಎಷ್ಟು ದಿವಸ ಅಳುತಾರೆ. ಒಂದು ದಿನ, ಅಥವಾ ಎರಡು ದಿನ ಇಲ್ಲ ಅವರ ಹಿಂದೇನೆ ಯಾರಾದರೂ "ಸತಿ" ಯಾಗಿಬಿಡುತಾರೋ. ಅವತ್ತೊಂದಿನ ಕೂಡ ಹೊಟ್ಟೆಗಿಲ್ಲದೆ ಇರಲಾರರು. ಅಳತಾನೇ ಆದರೂ ನಾಲ್ಕು ತುತ್ತು ಇಳಿಸೇ ಇಳಿಸುತ್ತಾರೆ. ಇದೆಲ್ಲಾ ಭ್ರಮೆ. ಅದೆಲ್ಲಾದರೂ ಹಾಳಾಗಿಹೋಗಲಿ. ಈಗ ನೋಡಿ, ಏನೋ ದೈವ ವಶಾತ್ ನಾವು ಹಾಕಿದ ಪ್ಲಾನ್ ಕರೆಕ್ಟಾಗಿ ಹಿಡೀತು. ಈಗ "ಶಶಿ" ಮದುವೆಗೆ ದಾರಿ ಕ್ಲಿಯರ್ ಆಯಿತು ಇನ್ನೊಂದೆಂಟು ದಿವಸ ತೆಪ್ಪಗಿದ್ದುಬಿಡಿ. ಈ ಮಧ್ಯೆ ನಾನು ಹೋಗಿ ನಾಗೇಂದ್ರರಾಯರ ಹತ್ತಿರ ಪ್ರಸ್ತಾಪಮಾಡಿ ದುಡ್ಡು ಕಾಸು ವಿಚಾರಾನೆಲ್ಲಾ ಸೆಟಲ್ ಮಾಡತೇನೆ. ಅಷ್ಟರೊಳಗೇ ನಿಮ್ಮ ಮಗನ ಅಳೂಗೋಳು ಎಲ್ಲಾ ಆರಿ, ಅವನು ಎಂದಿನಂತಾಗಿರುತಾನೆ. ಆಮೇಲೆ ಒಳ್ಳೇಮಾತು ಹೇಳಿ ಕರೆಕೊಂಡುಹೋಗಿ ಲಗ್ನಮಾಡಿಕೊಂಡು ಬಂದು ಬಿಡೋದು. ಸರಿಯೇ ಸ್ವಾಮೀ! ಆಮೇಲೆ ನನ್ನ ಮೇಲೆ ಮಾತೇನೂ ಇರೊಲ್ಲವಲ್ಲಾ ?

**ಈಶ್ವರಯ್ಯ**·— ಮುಂದಿನ ವಿಚಾರವೇನೋ ಸರಾಗವಾಗಿರೋಹಾಗೆ ಕಾಣುತ್ತೆ. ಆದರೆ ಈಗ "ಶಶಿ" ಅಲ್ಲಿಗೆ ಹೋದಕೂಡಲೇ ಅವರ ಮನೆಯೋರೆಲ್ಲಾ ಇವನ ಮೇಲೆ ತಿರುಗಿ ಬೀಳೊಲ್ಲವೇ ?

**ವಿ ಷ ಕಂ ಠ ಯ್ಯ :**—ಯಾಕೆ ಸ್ವಾಮೀ ?

**ಈಶ್ವರಯ್ಯ**·—"ಅವನ ಕಾಗದ·ನೋಡಿ ಹು ಡು ಗಿ ಬಾವಿಗೆ ಬಿತ್ತೂಂತ" ತಾನೇ ಪೇಪರಿನಲ್ಲಿ ಬಂದಿರೋದೂ ?

**ವಿ ಷ ಕಂ ಠ ಯ್ಯ** — ಪೇಪರ್‌ನೋರುಬೇಕಾದ್ದು ಬರೀತಾರೆ ನೋಡಿ. ಪೋಲೀಸ್‌ನೋರು ಮನೇಲೆಲ್ಲಾ ಶೋಧನೆಮಾಡಿದಾಗ ಕಾಗದ ಸಿಕ್ಕಿದ್ದರೆ ಅದನ್ನ ಪೇಪರ್‌ನಲ್ಲಿ ಹಾಕುತಿರಲಿಲ್ಲವೋ ?

**ಈಶ್ವರಯ್ಯ :**—ಏನೋ! ಪುಣ್ಯ! ಕಾಗದ ಸಿಕ್ಕದೆಹೋದದ್ದು!

**ವಿ ಷ ಕಂ ಠ ಯ್ಯ .**— ಪುಣ್ಯವೇನು ಸ್ವಾಮೀ! ನಾನು ಕಡೇಲಿ ಬರೆದು ಅಂಡರ್‌ಲೈನ್ ಮಾಡಿದ್ದೆನಲ್ಲಾ. "ಈ ಕಾಗದಾನ ಓದಿಕೊಂಡು ಖಂಡಿತ

ಸುಟ್ಟುಬಿಡು-ನನ್ನಾಣೆ” ಅಂತ.

**ಈಶ್ವರಯ್ಯ** :-ಒಂದು ಸ್ತ್ರೀಹತ್ಯಾದೋಷ ತಲೇಗೆ ಸುತ್ತಿಕೊಂಡ ಹಾಗಾಯ್ತು!!

**ವಿಷಕಂಠಯ್ಯ** :-ಯಾರಿಗೆ ಸ್ವಾಮೀ! ನನಗೆ ತಾನೇ! ಚಿಂತೆ ಯಿಲ್ಲ ಬಿಡಿ

**ಈಶ್ವರಯ್ಯ** :-ನಿನಗೇ ಏನೂ? ಒಪ್ಪಿಗೆ ಕೊಟ್ಟ ನನಗೂ!

**ವಿಷಕಂಠಯ್ಯ** :-ನಾವು ಇಂಥ ಪುಕ್ಕಲ್‌ಜನವಾಗೋ ಹೊತ್ತಿಗೆ ಈ ಸ್ಥಿತೀಲಿರೋದು ಅಲ್ಲಾ ಸ್ವಾಮೀ! ನೀವೇನಾದರೂ ಹುಡುಗೀನ ಸಾಯಿಸೂಂತ ನನಗೆ ಹೇಳಿದಿರಾ? ನಾನೇನಾದರೂ ಹೋಗಿ ಕೈಯಾರ ಕೊಂದೆನೋ?........ಅಲ್ಲಾ! ನಿಮಗೆ ನಿಮ್ಮಾಸೆಯಂತೆ ಕೆಲಸಗಳೂ ಜರುಗ ಬೇಕು, ಮಧ್ಯೆ ಬೇರೆಯವರಿಗೆ ಅಲ್ಪಸ್ವಲ್ಪ ಹಿಂಸೆಗಳೂ ಆಗಬಾರದು! ಹ್ಯಾಗೆ ಸ್ವಾಮಿ ಇದು ಸಾಧ್ಯ? ಬೆಸ್ತ, ಇಲ್ಲ ಮೀನು ಹೊಡೆದು ತಿಂದು ಬದುಕಿರಬೇಕು ಇಲ್ಲ ತಾನು “ಅಹಿಂಸೆ”ಅಂತ ಕೂತು ಹೊಟ್ಟೆಗಿಲ್ಲದೆ ಸಾಯಬೇಕು. ಎರಡರ ಲ್ಲೊಂದು.

**ಈಶ್ವರಯ್ಯ**:-ಹಾಗಲ್ಲ ವಿಷಕಂಠಯ್ಯ! ಪಾಪ! ಗೋಪೀನಾಥರಾಯ ರಿಗೆ ಇದ್ದವಳೊಬ್ಬಳೇ ಮಗಳು. ಪ್ರಾಣಕ್ಕಿಂತ ಹೆಚ್ಚಾಗಿ ಸಾಕಿದ್ದರು. ಅವಳು ಹ್ಯಾಗೇ ಇರಲಿ, ಈಗ ಅವರ ಸಂಕಟ ನೋಡೋದು ಹ್ಯಾಗೆ?

**ವಿಷಕಂಠಯ್ಯ** :-ನೀವು ಯಾಕೆ ನೋಡಬೇಕು? ನಿಮ್ಮ ಮನೇಲಿ ನೀವು ತೆಪ್ಪಗಿರಿ. ಅಲ್ಲಾ ಸ್ವಾಮೀ! ಬೀಗರಲ್ಲಿ ಅಷ್ಟು ಕನಿಕರ ಇದ್ದೋರು, ಮಗ ಅಲ್ಲಿ ಎಂಟುದಿವಸ ನಿಂತದ್ದಕ್ಕೆ 'ಏನಾದರೂಮಾಡಿ ಕರೆಸೂ; ಏನಾದರೂ ಮಾಡಿ ಕರೆಸೂಂ'ತ ನನ್ನ ಕತ್ತು ಕಿವಿಚಿಬಿಟ್ಟಿರೀ!!

**ಈಶ್ವರಯ್ಯ** :-ಏನೋ ಒಂದೂ ಅರ್ಥವಾಗೊಲ್ಲ ಅಂತೂ ಒಂದು ತಪ್ಪುಹೆಜ್ಜೆಯಿಂದ ಏನೇನೋ ಅನಾಹುತಗಳಾಗುತಾ ಇವೆ. ತೆಪ್ಪಗೆ ಹುಡುಗನಿಗೆ ಸರಿಯಾದೊಂದು ಹೆಣ್ಣು ತಂದು ಮದುವೆಮಾಡಿ ಸುಮ್ಮನಿದ್ದಿದ್ದರೆ ನನ್ನ ಮನೆ ಎಷ್ಟೋ ನೆಮ್ಮದಿಯಾಗಿರುತಿತ್ತು.

**ವಿಷಕಂಠಯ್ಯ** -ಮತ್ತೆ ಹಳೇಪಾರಕ್ಕೇ ಬಂದಿರಿ. ಇಲ್ಲಾ ನಿಮ್ಮ ವ್ಯವಹಾರ ನೀವೇ ನಡೆಸಿಕೊಳ್ಳಿ; ಇಲ್ಲದೇ ಹೋದರೆ ಪೂರ್ತಿ ನನಗೆ ಬಿಟ್ಟು

ನೀವು ನಾನು ಹೇಳಿದ ಹಾಗೆ ಕೇಳಿ ನಿಮ್ಮಿಷ್ಟದಂತೆ ಮಾಡಿಕೊಡುತೇನೆ

**ಈಶ್ವರಯ್ಯ** — ಈಗ 'ಶಶೀ' ಒಬ್ಬನ್ನೇ ತುಂಕೂರಿಗೆ ಕಳಿಸೋದಕ್ಕೆ ನನಗೆ ಯೋಚನೆಯಾಗಿದೆ ಅಲ್ಲಿ ಅವರ ಮನಸ್ಸುಗಳು ಹ್ಯಾಗಿರುತ್ತವೋ? ಏನೋ?

**ವಿಷಕಂಠಯ್ಯ** .— ಈಗೇನುಮಾಡಬೇಕೂಂತಿದೀರ ಹೇಳಿ ?

**ಈಶ್ವರಯ್ಯ** :— ನಾನೂ ಜೊತೇಲಿ ಹೋಗಿಬರಬೇಕು,

**ವಿಷಕಂಠಯ್ಯ** — ಹೋಗಿಬನ್ನೀ

**ಈಶ್ವರಯ್ಯ** — ನೀನಿಲ್ಲದೇ ನಾನು ಹೋಗೋಹಾಗಿಲ್ಲಾ

**ವಿಷಕಂಠಯ್ಯ** ·— ತಂದರಲ್ಲಾ ನನ್ನ ಕುತ್ತಿಗ್ಗೇ!

**ಈಶ್ವರಯ್ಯ** :— ಯಾಕೇ ?

**ವಿಷಕಂಠಯ್ಯ** ·— ನಾನು ಏನು ಮುಖ ಇಟ್ಟುಕೊಂಡು ಅಲ್ಲಿಗೆ ಬರಲೀ ಸ್ವಾಮೀ! ಅಲ್ಲದೆ ನಾನು ಯಾಕೆ ಬರಬೇಕು? ನೀವಂತೂ ಬೀಗರು, ಹೋಗಲೇಬೇಕು ಹೋಗಿಬನ್ನಿ, ನಾನು ಬರೊಲ್ಲ.

**ಈಶ್ವರಯ್ಯ** :— ಈ ಮದುವೆಗೆ ಇಷ್ಟೊಂದು ಒದ್ದಾಡಿ ಒಡಾಡಿ ದೋನು. ಪೇಪರ್‌ನಲ್ಲೆಲ್ಲಾ ಬಂದಿರೋ ಈ ಸುದ್ದೀ ತಿಳಿದೂ ಸಹ, ನೀನು ಬರಲಿಲ್ಲಾಂದರೇ ತುಂಬ ಅನ್ಯಾಯ

**ವಿಷಕಂಠಯ್ಯ** — ಎಲ್ಲಾ ಅನ್ಯಾಯವೇ? ಪ್ರಪಂಚದಲ್ಲಿ ಯಾವ ವ್ಯವಹಾರ ತಾನೇ ನ್ಯಾಯಾ? ತಾಯೀ ಹೊಟ್ಟೇಲಿ ಒಂಭತ್ತು ತಿಂಗಳ್ಳು ಕೂತು, ಅವಳಿಗೆ ಕೊಡಬಾರದಾದಷ್ಟು ಹಿಂಸೆ ಕೊಡುತಾ ಇದ್ದು, ಕಡೆಗೆ ಅಷ್ಟೊಂದು ಯಮಯಾತನೆ ಕೊಟ್ಟು ಬೆಳಕಿಗೆ ಬರುತೇವೆ, ಆಮೇಲಂತೂ ಅವಳ ಕಣ್ಣಿಗೆ ನಿದ್ದೆಕೊಡದೆ, ಕಾಡಿ, ಬೇಡಿ, ಗೋಳುಹುಯ್ಕೊಂಡು, ನರಳೀ, ನರಳಿಸೀ, ಬೆಳೀತೇವೆ.

**ಈಶ್ವರಯ್ಯ** .—(ಬೇಸರಿಕೆಯಿಂದ) ಅದೆಲ್ಲಾ ಸರೀ! ಈಗ .. ....

**ವಿಷಕಂಠಯ್ಯ** .— ಹಾಗಲ್ಲಾ ಸ್ವಾಮೀ! ಇದೆಲ್ಲಾ ನ್ಯಾಯವೇ? ಪ್ರಪಂಚದಲ್ಲಿ ನ್ಯಾಯಾನ್ಯಾಯ ನೋಡುತಾ ಹೋದರೆ ನಾವು ಬದುಕಿರೋದೇ

ತಪ್ಪಾಗುತ್ತೆ. ನಿಮ್ಮ ಮಗ 'ಶಶಿ' ಆ ಅನಂತೂ ತಂಗೀನ ಮಾಡಿಕೋ ಬೇಕೂಂತಿದ್ದ. ಆ ಹುಡುಗನ ಒಂದು ವರ್ಷ ಬೆಳೆದು ಬಂದಾಶೇನ ತುಳಿ ದದ್ದು ನ್ಯಾಯವೋ?

**ಈಶ್ವರಯ್ಯ** :—ಮತ್ತೆ ನನ್ನ ಕರುಳನೇ ಜುಗುಟುತಿದೀಯಲ್ಲಾ!!

**ವಿಷಕಂಠಯ್ಯ** ·—ಹೋಗಲೀ ಬಿಡಿಸ್ವಾಮೀ! ಈಗ ನಾನು ನಿಮ್ಮ ಸಂಗಡ ತುಂಕೂರಿಗೆ ಬರಲಾರೆ ಗೋಪಿನಾಥರಾವ್ ಕೇಳಿದರೆ ಅವನಿಗೆ ಖಾಯಿಲೆಯಾಗಿದೇಂತ ಹೇಳಿಬಿಡಿ. ನೀವು ಹೋಗಿ ಅವರಿಗೆ ಸಮಾಧಾನ ಹೇಳಿಬಿಟ್ಟು ಬನ್ನೀ. ನಾನೂ ಸ್ವಲ್ಪ ಹಾಸನದಕಡೇ ಹೋಗಿಬರುತೇನೆ ನನ್ನ ಹುಡುಗೀಗೆ ಗಂಡು ನೋಡೋಕೆ ಎಂಟು ಹತ್ತು ದಿವಸದ ಮೇಲೆ ಬಂದು ನಿಮ್ಮನ್ನ ಮತ್ತೆ ಕಾಣುತೇನೆ.

(ಹೊರಡಲಿರುವನು.)

**ಈಶ್ವರಯ್ಯ** —(ಅತ್ತ ತಿರುಗಿನೋಡಿ) ಓಹೋ! ಶಶಿ ಒಬ್ಬನೇ ಹೊರಟುಬಿಟ್ಟನೇ!! ಹ್ಯಾಗಿವನ್ನ ತಡೆಯೋದು!!

(ತ್ವರೆಯಿಂದ ಓಡುವನು.)

**ವಿಷಕಂಠಯ್ಯ** ·—(ಅತ್ತಕಡೆಯೇ ನೋಡುತ್ತಿದ್ದು) ಒಳ್ಳೇ ಹೇಡಿ ಸಹವಾಸ ಬಂತು ಇಷ್ಟು ಕಷ್ಟಪಟ್ಟು ಇಷ್ಟೊಂದು ಪಾಪ ಹೊತ್ತುಕೊಂಡಿದ್ದಕ್ಕೂ, ನಾಗೇಂದ್ರರಾಯನ ಸಂಬಂಧ ಮಾಡಿಸೋವಾಗ ಎರಡು ಕಡೇಯಿಂದಲೂ ಖಡಾಖಂಡಿತವಾಗಿ ಎರಡು ಸಾವಿರ ರೂಪಾಯಾದರೂ ಗಿಟ್ಟಿಸಿಬಿಡಬೇಕು ........ಪಾಪ! ಗೋಪೀನಾಥರಾವ್ ಸರಸ್ವತಮ್ಮನಿಗೆ ದುಃಖವೇನೋ ಆಗಿರುತ್ತೆ.... ...ಏನು ಮಾಡೋದು. ನಾಳೆ ಇವರು ನಾಗೇಂದ್ರರಾಯನ ಮಗಳ ಸಂಗಡ ಮದುವೆ ನಿಷ್ಕರ್ಷೆಮಾಡಿದ ಸಮಾಚಾರ ಕೇಳಿದ ಮೇಲಾದರೂ, ಈಗ ಸಾಯೋದು ಆಗಲೇ ಸಾಯುತಿತ್ತು ಹುಡುಗೀ! ಹೋಗಲೀ! ಪಾಪ! ಹೆಳವೀ ಜನ್ಮ ಹೋಯಿತಲ್ಲಾ!! ಮುಂದೆ ಸರಿಯಾದ ಜನ್ಮ ಬರಲೀ!! ... .. ಅದೂ ಒಂದು ಉಪಕಾರವೇ ಆಯಿತು........ ಅಲ್ಲದೇ ಗೋಪೀನಾಥರಾಯ ತನ್ನ ತಂಗೀ ಮಗನ್ನ ದತ್ತು ತಗೊಳ್ಳೋಕೆ

ಮೂರು ವರುಷದಿಂದ ಮೀನ ಮೇಷ ಎಣಿಸುತ್ತಿದ್ದ, ಈಗ ದಾರಿ ಸರಾಗ ವಾಯಿತು. ಆ ವಿಧವೇ, ಅವಳ ಮಗ ನೆಮ್ಮದಿಯಾಗಿ ಬದುಕಿಕೊಳ್ಳುತಾರೇ. ಪ್ರಪಂಚದಲ್ಲಿ ಒಂದು ಕೆಟ್ಟದ್ದೂಂತಾದರೆ, ಅದರಿಂದ ಹತ್ತಾರು ಒಳ್ಳೇದಾಗೋದಿರುತ್ತೆ, ನಾವು ತಿಳಕೋಬೇಕಷ್ಟೇ! ನಾನೂ ಈ ದಿನವೇ ಊರುಬಿಡೋದು ಒಳ್ಳೇದು.

(ಹೊರಡುವನು.)

---

## ಅಂಕ ೩ - ಪ್ರವೇಶ ೨

[ಈಶ್ವರಯ್ಯನ ಮನೆಯ ನಡುಮನೆ. ಹದಿನೈದು ದಿವಸಗಳ ನಂತರ. ದುಂಡು ಮೇಜಿದ್ದ ಜಾಗದಲ್ಲಿ ಹಾಕಿರುವ ಮಂಚದ ಮೇಲೆ ಭಾಗಮ್ಮನು ಅತ್ತು ಅತ್ತು ಕೆಂಪಾದ ಕಣ್ಣುಗಳಿಂದ ಕೂಡಿ ಕುಳಿತಿದ್ದಾಳೆ. ಎದುರುಗಡೆಯ ಕುರ್ಚಿಯಲ್ಲಿ ಆಂತರಿಕ ವೇದನೆಯಿಂದ ಕಂಗಾಲಾದ ಈಶ್ವರಯ್ಯನು ಕುಳಿತಿದ್ದಾನೆ.]

**ಭಾಗಮ್ಮ** —ಒಂದೇ ಬೆಂಕಿಯ ಕಡ್ಡಿಯಿಂದ ಎರಡು ಮನೆಗಳಿಗೂ ಕಿಚ್ಚಿಟ್ಟು ಬೇಯಿಸಿಬಿಟ್ಟ ಪಾಪಿ ಚಂಡಾಲ! ಹಾಳು ವಿಷಕಂಠ! ನಾನು ಮೊದಲಿನಿಂದಲೂ ಆ ಕಟುಕನ ಸಹವಾಸ ಮಾಡಬೇಡಿ, ಮಾಡಬೇಡೀಂತ ಬಡಕೊಂಡೆ, ನಿಮಗೆ ಅವನು ನೆತ್ತಿಗೆ ಒತ್ತಿದ್ದ ಎಣ್ಣೆ ಆರಲಿಲ್ಲ ಯಾವ ಜನ್ಮದ ದಾಯಾದಿಯೋ!! ಹೀಗೆ ನಮ್ಮ ಹೊಟ್ಟೆಗೆ ಕೊಳ್ಳಿ ಇಡುತಾ ಇದಾನೆ!!.. ಪರಮಚಂಡಾಲಾ! ಅವನು ಹಿಂದೆ ಊಟಕ್ಕೆ ಬರುತಿದ್ದಾಗ, ನಾನೇ ಎಂದಾದರೂ ಒಂದು ದಿನ ಒಂದು ತೊಟ್ಟು ವಿಷ ಬೆರಸಿ ಹಾಕಿ, ಅವನನ್ನ ತೀರಿಸಿಬಿಟ್ಟಿದ್ದರೆ, ಈ ಅನಾಹುತಗಳೊಂದೂ ಆಗುತ್ತಿರಲಿಲ್ಲ

**ಈಶ್ವರಯ್ಯ** —ಭಾಗ್ಯಾ! ನಿನ್ನ ಹೊಟ್ಟೇ ಸಂಕಟದಲ್ಲಿ ಎಂಥೆಂಥ ಕುಲಪಾತಕ ಮಾತುಕಥೆಗಳನ್ನಾಡುತಿದ್ದೀಯಾ!! . ಆಡಿ ಯಾಕೆ ನಾವು ಪಾಪ ಕಟ್ಟಿಕೋಬೇಕು!!

**ಭಾಗಮ್ಮ** —(ಸಿಡಿದು) ಸಾಕು ಸುಮ್ಮನಾಗೀ! ನಿಮ್ಮ ಪುಣ್ಯಾರ್ಜನೆಯ ಹರಿಕಥೆ ಕೇಳಿ ಕೇಳಿ ಈಗತಿ ಬಂದುಹೋಯಿತು ಪಾಪಿಗಳನ್ನ ಮನೇ ಸೇರಿಸಿಕೊಂಡು, ಉಪಚಾರ ಮಾಡಿ ಮಾಡಿ, ಮನೇಗೆ ಬೆಂಕಿ ಇಡಿಸಿಕೊಂಡದ್ದಾಯಿತು ಆ ಹುಡುಗನ್ನ ನೋಡಿದರೆ, ಆ ಪಾಪಿಯ ಕರುಳು ಬಗೀಬೇಕೂಂತನ್ನಿಸೊಲ್ಲವೇ ನಿಮಗೇ!

**ಈಶ್ವರಯ್ಯ** —ನಮ್ಮ ಗ್ರಹಚಾರಕ್ಕೆ ಅವನನ್ನಂದರೇನು ಬಂತು ಭಾಗ್ಯಾ! ಮುಖ್ಯ ನಮ್ಮ ದುರಾದೃಷ್ಟ

**ಭಾಗಮ್ಮ** —ಸಾಕುಮಾಡಿ ನಿಮ್ಮ ಹರಿಕಥೇನ. ದೇವರು ಕೊಟ್ಟ ಕಣ್ಣುಗಳು ಚೆನ್ನಾಗಿದ್ದೂ, ಪಕ್ಕದೋರು 'ಮುಂದೆ ತೊಪ್ಪೆ ಇದೇಂ'ತ ತೋರಿಸಿ ಎಚ್ಚರಕೊಟ್ಟರೂ, ಕೇಳದೇ, ಚಂಡಾಲನ ಮಾತುಕೇಳಿ ತೊಪ್ಪೆ ·

ಮೇಲೆ ಹೆಜ್ಜೆ ಇಟ್ಟು, ಮುಖಕ್ಕೆ ಹಿಡಿಸಿಕೊಂಡು. ಇದನ್ನ ಗ್ರಹಚಾರಾಂದರೆ ನಾವು ಮನುಷ್ಯರೇ !!

**ಈಶ್ವರಯ್ಯ** —ವಿಷಕಾರಯ್ಯ ಏನುಮಾಡಿದಾಂತ ಅವನ ಮೇಲಿನಿ ನಗಿಷ್ಟು ಆಕ್ರೋಶ ?

**ಭಾಗಮ್ಮ** :—ಅಯ್ಯೋ ನಿಮ್ಮ ಬುದ್ಧೀನ ಅದಿನ್ನೇನು ಮಂಕುಮಾಡಿ ಬಿಟ್ಟಿದಾನೋ ಆ ನರರಾಕ್ಷಸಾ ಕಾಣೆನಲ್ಲಾ ! .. ....ಮನೆಗೊಬ್ಬ ಮುತ್ತಿನ ಮಣೀ ಅಂಥಾ ಮಗ, ಅವನಿಗೊಂದು ಎಡವಟ್ಟು ಸಂಬಂಧಮಾಡಿಸಿ, ಅವನ ಹೊಟ್ಟೇ ಉರಿಸಿಬಿಟ್ಟು, ಗಂಡ ಹೆಂಡತೀರ ಮಧ್ಯೆ ಜ್ವಾಲಾಮುಖೀನ ತಂದು ನೆಟ್ಟುಹಾಕೀ, ಆ ಹುಡುಗ ಹಿಂದಿನದೆಲ್ಲಾ ಮರೆತು, ತನ್ನ ಹೊಟ್ಟೇ ಸಂಕಟ ತಾನು ನುಂಗಿಕೊಂಡು, ಆ ಎಡವಟ್ಟ ಸಂಬಂಧಾನ್ನೇ ಏನೋ ಸರಿಹೋಗಿಸಿ ಕೊಂಡು ಹೊಂದಿಕೊಂಡಿದ್ದರೆ, ಆ ಬಡಪಾಯಿ ಹುಡುಗೀನ ಭಾವಿಗೆ ತಳ್ಳೀ ಆ ಹೆತ್ತೋರ ಹೊಟ್ಟೇನ ಉರಿಸಿ, ಅವರ ಮನೇ ಹಾಳುಮಾಡಿ, ಈ ಮುತ್ತಿನ ಮಣಿ ಅಂಥ ಹುಡುಗನಿಗೆ ಹೆಂಡತೀ ಹೋದ ಸೂತಕ ಅಂಟಿಸಿ, ಅವನ ಕರುಳು ಕಿತ್ತು, ಅವನ ಬುದ್ಧಿ ಕೆಡಿಸಿ, ಹೆತ್ತೋಳು ನನ್ನ ಕಣ್ಣೀರಿನಲ್ಲಿ ಕೈ ತೊಳೆದು, ಹೊಟ್ಟೇಲಿ ಬೆಂಕಿ ಇಟ್ಟುಕೊಂಡು ಸಾಯೋ ಹಾಗೆ ಮಾಡಿದನಲ್ಲಾ ಆ ಪಾಪಿ ಚಂಡಾಲ ಮನೆಹಾಳ ನಿರ್ಭಾಗ್ಯ ! ಅವನ ಕಣ್ಣಿಂಗಿ ಅವನ ಕೈ ಸೇದಿಹೋಗಬಾರದೇಂತೀನೀ ! .. ...ಈ ಪಾಪಿ ಕಣ್ಣುಗಳಿಂದ ಆ ನಿರ್ಭಾಗ್ಯ ಹುಡುಗನ್ನ ನೋಡಲಾರನೇ !! (ರೋದಿಸುತ್ತಾ) ...ಹದಿನೈದು ದಿವಸವಾಯಿತು ! ಡಾಕ್ಟರ ಔಷಧಿಯಾಯಿತು ! . . ಹುಡುಗನಿಗೆ ಆ ಹುಡುಗಿ ಹಂಬಲು ಕಡಿಮೆಯಾಗೋದಿರಲೀ-ಹೆಚ್ಚುತಾನೇ ಹೋಗುತಾ ಇದೆಯಲ್ಲಾ !! ಇದನ್ನ ನೋಡಿಕೊಂಡು ನೀವು ಆ ಮನೆಹಾಳನ್ನ ಏನೂ ಮಾಡದೇ, ಇನ್ನೂ ಅವನ ವಿಚಾರದಲ್ಲಿ ಒಳ್ಳೇ ಮಾತೇ ಆಡುತಿದೀರಲ್ಲಾ ! ನಿಮಗಿನ್ನೇನು ಮಾಡಿಬಿಟ್ಟಿದಾನೋ ಆ ಕೊಲೆಪಾತಕಾ !!

(ಕಣ್ಣೊರಸಿಕೊಂಡು ಅತ್ತ ತಿರುಗುವಳು.)

**ಈಶ್ವರಯ್ಯ** :—ಭಾಗ್ಯಾ !! ........ನಮ್ಮ ಮನೇಲಿ ಈಗಾಗಿರೋ ಈ ಸ್ಥಿತೀಗೆ ನಾನೇ ಕಾರಣಾ ! ಇದಕ್ಕಾಗಿ ನನ್ನ ಹೊಟ್ಟೆ ಎಷ್ಟು ಕುದೀತಾ

ಇದೇಂತ ನಾನು ಯಾರ ಹತ್ತಿರವೂ ಹೇಳಿಕೊಳ್ಳೋಹಾಗಿಲ್ಲ 'ಶಶೀ'ನ ನೆನಸಿಕೊಂಡರೇ ನಾನೇ ನನ್ನ ವಂಶಕ್ಕೆ ಕೊಡಲಿಯಾದೇಂತ ಹೊಟ್ಟೆ ಭಗ್ ಅನುತ್ತೆ. ಇನ್ನು ನಿನ್ನ ಸಂಕಟವೋ ಅಪಾರವಾಗಿದೆ; ಆದ್ದರಿಂದ ನನ್ನ ದುಃಖಾನ ನಿನ್ನ ಹತ್ತಿರ ಹೇಳಿಕೊಳ್ಳೋ ಹಾಗಿಲ್ಲ, ಇನ್ನು ನನ್ನ ಗತಿಯೇನು?

**ಭಾಗಮ್ಮ** :—(ಸರ್ರನೆ ತಿರುಗಿ) ನಿಮಗೆ ಹೆಂಡತಿ ಮಗನ ಹತ್ತಿರ ಹೇಳಿಕೊಳ್ಳೋದೇನಿದೆ ನಿಮ್ಮ ಸಂಕಟ ಕೇಳಿ ಸಲಹೆಕೊಟ್ಟು ಊರು ಸುಡೋದಕ್ಕೆ ಅಂಥ ಪರಮ ಚಂಡಾಲ ಸ್ನೇಹಿತನಿರೋವಾಗ!

**ಈಶ್ವರಯ್ಯ** :— ಭಾಗ್ಯಾ ! ಈ ಅನಾಹುತಕ್ಕೆಲ್ಲಾ ನಾನು ಕಾರಣ! ಅವನಲ್ಲ.

**ಭಾಗಮ್ಮ** :— (ಸಿಟ್ಟಾಗಿ) ಹಾಗಾದರೆ ಆ ಕೊಲೆಪಾತಕ ಕಾಗದಾನ ನೀವೇ ಬರೆದು ಶಶಿಯ ರುಜು ಮಾಡಿದ್ದಿರಾ ?

**ಈಶ್ವರಯ್ಯ** :—ಅದು ಮಟ್ಟಿಗೆ ನಾನು ಮಾಡಲಿಲ್ಲ.

**ಭಾಗಮ್ಮ** :—ಹಾಗಾದರೆ ಯಾರು ಬರೆದೋರು ? ಅವನೇ ಅಲ್ಲವೇ ? ಆ ನಿಮ್ಮ ಮಿತ್ರದ್ರೋಹಿ ಮನೆಹಾಳನೇ ಅಲ್ಲವೇ ?

**ಈಶ್ವರಯ್ಯ** .—ಅವನೂಂತ ಹ್ಯಾಗೆ ಹೇಳೋದು ?

**ಭಾಗಮ್ಮ** —ಹುಡುಗೀ ಹೆಣಾನ ಭಾವಿಯಿಂದ ಈಚೆಗೆ ತೆಗೆದ ಮೇಲೂ ಮುಷ್ಟೀಲಿ ಬಲವಾಗಿ ಹಿಡಿದಿತ್ತಂತಲ್ಲಾ 'ಶಶಿ ಕುಮಾರ್!' ಅಂತಿದ್ದ ಕಾಗದದ ಚೂರನಾ ?

**ಈಶ್ವರಯ್ಯ** .—ಹೌದೂ ?

**ಭಾಗಮ್ಮ** —ಆ ಅಕ್ಷರ ವಿಷಕಂಠಯ್ಯನ ಅಕ್ಷರಗಳನೇ ಹೋಲುತಿದ್ದುವೂಂತ ಮನೇಲಿ ಅವರಾಡಿಕೊಳ್ಳುತಿದ್ದದ್ದನ್ನ ಮೊನ್ನೆ ದಾಸಬಂದಾಗ ಹೇಳಲಿಲ್ಲವೇ ?

**ಈಶ್ವರಯ್ಯ** :—ಎಲ್ಲಾ ಊಹೇ ! ನಾವು ಅಲ್ಲಿಗೆ ಹೋದ ದಿವಸ 'ಶಶೀನೇ' ಬರದಿರಬೇಕೂಂತ ಅವನ ಮೇಲಿಸಿಟ್ಟಾಗಿ ಕಡೇಗೆ ಅವನ ಕಾಗದಗಳನ್ನ ನಾ ತೋರಿಸಿ, ಸೈನಿನಲ್ಲಿ ವ್ಯತ್ಯಾಸಕಂಡ ಮೇಲೆ ಯಾರು ಬರೆದಿರಬಹುದೂಂತ ಊಹೆಮಾಡುತಿದ್ದರು. ಕಡೇಗೆ ಇವನ ತಲೇಮೇಲೆ ಹಾಕಿದಾರೆ.

**ಭಾಗಮ್ಮ**:— ನೀವೇ ಹೇಳಿ; ದೇವರಾಣೆಗೂ ನಿಮ್ಮ ಚಂಡಾಲ ಮಿತ್ರನೇ ಅಲ್ಲವೇ ಈ ಕೆಲಸ ಮಾಡಿರೋನು? ಇನ್ನು ಯಾರಿಗೆ ಹೀಗೆ ಮಾಡಬೇಕೂಂತ ದರದು?

**ಈಶರಯ್ಯ**:— ಯಾರೂಂತ ಹೇಳೋಣ. ಸ್ಥಳದಲ್ಲೇ ಗೋಪೀನಾಥರಾಯರಿಗೆ ಆಗದೋರು ಇದಾರಂತೆ. ಅವರೇ ಮೂರು ದಿವಸದ ಮೇಲೆ ಹೇಳಿದರು. ಆಗದೋರ ಪೈಕೀನೇ ಯಾರೋ ಈ ಹೆಣ್ಣುಮಗೂಗೆ ಕಾಲು ಹೋಗೋ ಹಾಗೆ ಮಾಟಮಾಡಿಸಿದ್ದರಂತೆ ಅಲ್ಲದೆ ಅವರಿಗೆ ಗಂಡುಮಕ್ಕಳು ಆಗದಹಾಗೆ ತಡೆಕಟ್ಟಿಸಿದಾರಂತೆ ಅಲ್ಲದೆ ಶಶೀ ಆ ಹುಡುಗೀಗೆ ಬರೆದ ಎರಡು ಮೂರು ಕಾಗದಾನೂ ಅವರೇ ಯಾರೋ ಹಾರಿಸಿರಬೇಕೂಂತ, ಸಮಾಚಾರವೆಲ್ಲಾ ತಿಳಿದ ಮೇಲೆ ಪೋಸ್ಟಾಫೀಸ್‌ಗೆ ಕಂಪ್ಲೈಂಟ್ ಕೊಟ್ಟಿದಾರೆ.

**ಭಾಗಮ್ಮ**:— ನೀವು ಬೇಕಾದ್ದು ಹೇಳಿ, ನನಗೆ ನಿಮ್ಮ ಮಾತಿನಲ್ಲೇ ನಂಬಿಕೆ ಇಲ್ಲ. ನೀವೂ ಅವನೂ ಸೇರಿ ಈ ಪ್ಲ್ಯಾನ್ ಹಾಕಿದ್ದರೂ ಇದರಲ್ಲಿ ನನಗೆ ಆಶ್ಚರ್ಯವಿಲ್ಲ

**ಈಶ್ವರಯ್ಯ**— (ನೊಂದು) ಭಾಗ್ಯಾ! ನಾನಂಥ ಚಂಡಾಲ ಯೋಚನೆ ಮಾಡೋ ಅಷ್ಟು ಪಾಪಿಯೇ?!

**ಭಾಗಮ್ಮ**:— ಹೀಗೆ ಮಾಡಿದರೆ 'ಮಗನಿಗೆ' ಇಂಥಾ ಅನ್ಯಾಯವಾಗಿ ಇಷ್ಟೊಂದು ಕಷ್ಟ ಬರುತ್ತೇಂತ ತಿಳೀದೇ ಮಾಡಿರಬಹುದು, ಇಲ್ಲ ಅವನು 'ನಾನು ಮಾಡುತೀನೀ'ಂದದ್ದಕ್ಕೇ ನೀವು 'ಹೂಂ' ಅಂದಿರಬಹುದು.

**ಈಶ್ವರಯ್ಯ**— ಭಾಗ್ಯಾ! ವೃಥಾ ನನ್ನ ಕರುಳು ಕತ್ತರಿಸಿ ಉಪ್ಪು ನೀರು ಚುಮುಕಿಸಬೇಡ ನನಗೆ 'ಶಶಿ' ಮಗನಲ್ಲವೇ? ನನ್ನಾಶೆಗಳೆಲ್ಲಾ ಅವನನ್ನೆ-ಅವನ ಸುಖಾನೇ ಅವಲಂಬಿಸಿಲ್ಲವೇ?

**ಭಾಗಮ್ಮ**.— ನಾನು ಅದೇ ಹೇಳಿದ್ದು ನಿಮ್ಮಾಶೆ ಇದೆಯಲ್ಲಾ, ಹಿಂದೇನೇ ನೀವೂ ನಿಮ್ಮ ಚಂಡಾಲ ಸೇರಿ ಪ್ಲ್ಯಾನ್ ಹಾಕಿದ 'ಎರಡು ಮದುವೆ ಹತ್ತು ಸಾವಿರ ರೂಪಾಯಿ ವರದಕ್ಷಿಣೆ ಸಂಪಾದನೇ' ಆಶೆ, ಅದಕ್ಕಾಗಿ ಮಗನ ಯೋಗಕ್ಷೇಮ ಅಷ್ಟೇ!........

**ಈಶ್ವರಯ್ಯ** —(ರೋಸಿ) ಹಾಳು ದಾಡ್ಡನ್ನ ನನ್ನ ಹೆಣದ ಮೇಲೆ ಹಾಕಿಸಿಕೊಂಡು ಸುಡಿಸಿಕೊಳ್ಳುತ್ತೇನೆಯೇ!!?

(ಹಣೆ ಚಚ್ಚಿಕೊಳ್ಳುವನು.)

**ಭಾಗವ್ಮ** —(ಮಂಚದಿಂದಿಳಿದು ಗಂಡನ ಕೈಹಿಡಿದು ಪಾದಗಳಿಗೆ ಬಿದ್ದು) ತಪ್ಪಾಯಿತೂಂದರೆ ತಪ್ಪಾಯಿತು!! ನನ್ನ ಮುತ್ತೈದೆ ಸಾವಿಗೆ ಪ್ರತಿಯಾಗಿ ಏನೂ ಸುಡೀಬೇಡೀ!! ... .. (ಕಂಬನಿದುಂಬಿ) ಆ ಮಗನ ಸ್ಥಿತಿ ನೆನೆಸಿಕೊಂಡರೆ ನನಗೂ ಹುಚ್ಚು ಹಿಡಿದು ಹೋಗುತ್ತೇ! ನಾನಿನ್ನೂ ಬದುಕಿದ್ದೇನಲ್ಲಾಂತ ಸಂಕಟವಾಗುತ್ತೆ

(ರೋದಿಸುವಳು.)

**ಈಶ್ವರಯ್ಯ** —ಏಳು ಭಾಗ್ಯ! ಏಳು! ಮುಖ್ಯವಾಗಿ ನಾನು ಪಾಪೀ! ನಾನು ನಿರ್ಭಾಗ್ಯ!! (ಹೆಂಡತಿಯನ್ನು ಕರೆತಂದು ಮತ್ತೆ ಮಂಚದ ಮೇಲೆ ಕೂಡಿಸಿ) ಮುಖ್ಯ ಗ್ರಹಚಾರ! ಯಾವುದೋ ವಿಷಘಳಿಗೆ ಯಲ್ಲಿ ಒಂದು ತಪ್ಪುಹೆಜ್ಜೇ ಇಟ್ಟೆ ಅದರಿಂದ ಮುಂದೆ ಮುಂದಕ್ಕೆ ಸಿಕ್ಕು ಹೆಚ್ಚಾಗುತಾ ಹೋಗುತಾ ಇದೆಯೇ ಹೊರತು, ಬಿಡುಗಡೆಯ ಸುಳಿವೇ ಇಲ್ಲ. ಇಷ್ಟೊಂದು ಅನಾಹುತಕ್ಕೂ ನಾನೇ ಕಾರಣ

(ತನ್ನ ಕುರ್ಚಿಯ ಮೇಲೆ ಕೂತು ಕಂಬನಿದುಂಬುವನು. ಇದನ್ನು ಕಂಡು ಭಾಗವ್ಮನು ತಾನೂ ದುಃಖಿಸುವಳು)

**ಭಾಗವ್ಮ** —ಮಗೂನ ಯಾರಾದರೂ ದೊಡ್ಡ ಡಾಕ್ಟರಿಗೆ ತೋರಿಸಿ ಸರಿಯಾಗಿ ಔಷಧಿ ಕೊಡಿಸಬೇಕು, ಅಲ್ಲದೇ ಯಾರಿಂದಲಾದರು ಯಂತ್ರ ಕಟ್ಟಿಸಬೇಕು.

**ಈಶ್ವರಯ್ಯ** —ಆ ನಿರಪರಾಧಿ ಹುಡುಗೀನ ಕೊಂದ ಪಾಪ ನನ್ನ ನಾದರೂ ತಿನ್ನಲಿ, ಆ ಹುಡುಗ ಹುಷಾರಾದರೆ ಸಾಕು

**ಭಾಗವ್ಮ**.—ರಾಮರಾಮ! ಬಿಡುತೂನ್ನೀ!

[ಹೊರಗಡೆ 'ಈಶ್ವರಯ್ಯನೋರೇ! ಈಶ್ವರಯ್ಯನೋರೇ!!' ಎಂಬ ಗೋಪೀನಾಥರಾಯರ ಕೂಗು.]

**ಭಾಗವ್ಮ** —ಬಂದನೇನೋ ಮನೆಹಾಳಾ. ನೀವು ಕೂತುಕೊಳ್ಳಿ ನಾನೇ ಹೋಗಿ ಬಾಗಿಲು ತೆರೀತೇನೆ.

ಈಶ್ವರಯ್ಯ:—ಬೇಡ ಭಾಗ್ಯಾ! ಅವನ್ನ ಹಾಗೆ ಹೊರಕ್ಕೆ ಕಳಿಸಿ ಬಿಡೋಣಾ.

ಭಾಗವ್ವ :—ನೀವು ಸುಮ್ಮನಿರಿ; ಇವತ್ತು ಕೈಗೆ ಸಿಕ್ಕಿದಾನೇ.

(ಭಾಗವ್ವನು ಬಾಗಿಲು ತೆರೆಯಲು ಹೋಗುವಳು. ಈಶ್ವರಯ್ಯನು ಗಾಬರಿಯಿಂದ ಎದ್ದು ನಿಂತು ನೋಡುತ್ತಿರುವನು. ಬಾಗಿಲು ತೆರೆಯುತ್ತಿರುವಂತೆಯೇ ಗೋಪೀನಾಥರಾಯನ ಮುಖವನ್ನು ಕಂಡು, ಭಾಗವ್ವನು ಕತ್ತು ತಗ್ಗಿಸಿ ಒಳಕ್ಕೆ ಬರುವಳು. ಗೋಪೀನಾಥರಾಯನು ಕೈಲೊಂದು ಸೂಟ್‌ಕೇಸ್ ಹಿಡಿದು ಹಿಂಬಾಲಿಸಿ ಬರುವನು. ಅವನ ಕಂಗಾಲಾದ ಮುಖವನ್ನು ಕಾಣುತ್ತಲೇ ಈಶ್ವರಯ್ಯನ ಕರುಳು ಕಲಕಿ ಕಂಬನಿದುಂಬಿ ಗದ್ಗದಿತನಾಗುವನು.)

ಈಶ್ವರಯ್ಯ:—(ಓಡಿಹೋಗಿ ಗೋಪೀನಾಥರಾಯನನ್ನಪ್ಪಿ) ಗೋಪೀನಾಥರಾವ್! ನಾವೆಂಥಾ ನಿರ್ಭಾಗ್ಯರು!!

(ದುಃಖಿಸುವನು.)

ಗೋಪೀನಾಥರಾವ್ :—(ಕಣ್ಣುಗಳಲ್ಲಿ ನೀರನ್ನು ಒರಸಿಕೊಂಡು) ಈಶ್ವರಯ್ಯನೋರೇ! ಆಗಿಹೋದದ್ದಕ್ಕೆ ದುಃಖಪಟ್ಟು ಪ್ರಯೋಜನವಿಲ್ಲ. ಇರೋರ ಯೋಗಕ್ಷೇಮ ನೋಡಿಕೋಬೇಕು. ಬನ್ನೀ ಕೂತುಕೊಳ್ಳಿ.

[ಈಶ್ವರಯ್ಯನನ್ನು ಒಂದು ಕುರ್ಚಿಯ ಮೇಲೆ ಕೂಡಿಸಿ, ತಾನೊಂದು ಕುರ್ಚಿಯ ಮೇಲೆ ಕೂತು] ಈಗ ಶಶಿಕುಮಾರ್ ಹೇಗಿದಾರೇ?

(ಭಾಗವ್ವನು ರೋದಿಸುವಳು.)

ಈಶ್ವರಯ್ಯನೋರೇ! ಶಶಿಕುಮಾರ್ ಹೇಗಿದಾರೇ? ಹೇಳಿ.

ಈಶ್ವರಯ್ಯ :—ನನ್ನಂಥ ನಿರ್ಭಾಗ್ಯ ತಂದೇನ ಪಡೆದದ್ದಕ್ಕೆ ಅವನಿಗೆ ಈ ಸ್ಥಿತಿಯೂ ಬಂತೂ! ದೇವರೇ!!

ಗೋಪೀನಾಥರಾವ್ :—ನೋಡೀ! ದೊಡ್ಡೋರಾದ ನೀವೇ ಹೀಗೆ ಕೈಕಾಲುಗೆಟ್ಟು ಕೂತರೆ ಮುಂದೆ ಗತಿಯೇನು! ನಿನ್ನೆಯ ರಾತ್ರೆ ನನ್ನ ಹೆಂಡತೀ ಕನಸಿನಲ್ಲಿ ಉಮಾ ಬಂದು "ಅಮ್ಮಾ! ನೀವು ನನಗೋಸ್ಕರ ಅಳೋದನ್ನ ನಿಲ್ಲಿಸಿ. ನಾನು ನಿಮ್ಮ ಹತ್ತಿರವೇ ಇದೇನೆ. ಹೋಗಿ ಅವರ ಯೋಗಕ್ಷೇಮ ನೋಡಿ. ಅವರು ಚೆನ್ನಾಗಿದ್ದರೆ ನನಗೆ ಸಂತೋಷ; ಅವರೇ ನನ್ನ ಪತಿ." ಅಂದು ಕಣ್ಮರೆಯಾದಳಂತೆ. ಎಲ್ಲ ಹುಡುಗೀರಹಾಗೇ ಕೈ ಕಾಲುಗಳೆಲ್ಲಾ ಚೆನ್ನಾಗಿದ್ದುವಂತೆ. ಬೇಡಿಕೊಳ್ಳೋ ಧ್ವನೀಲಿ ಕೈ ಜೋಡಿಸಿ

ಹೇಳಿದಳಂತೆ. ನನ್ನ ಹೆಂಡತಿ ಕನಸು ಕಂಡು, ರಾತ್ರಿ ಮೂರು ಘಂಟೆಗೆ ಎಚ್ಚರವಾದ್ದೋಳು, 'ಬೆಂಗಳೂರಿಗೆ ಹೋಗಿಬಿಟ್ಟುಬನ್ನೀ; ಬೆಂಗಳೂರಿಗೆ ಹೋಗಿಬಿಟ್ಟುಬನ್ನೀಂ'ತ ಒಂದೇಸಮ ಬಲವಂತಮಾಡಿದಳು. ಮೊದಲನೇ ಬಸ್ಸಿಗೇ ಹೊರಟುಬಂದೇ.

ಭಾಗಮ್ಮ:—(ತಡೆಯಲಾರದ ದುಃಖದಿಂದ) ಉಮಾ!! ನನ್ನ ತಾಯೀ!!........ಪಾಪಿಗಳು ನಿನ್ನನ್ನ ಕೊಂದರೇ! ಅಯ್ಯೋ! ಮಗೂ!!

(ಬಿಕ್ಕುವಳು. ಈಶ್ವರಯ್ಯನೂ ಗೋಳಾಡುವನು.)

ಗೋಪೀನಾಥರಾವ್:—ಅಮ್ಮಾ! ಭಾಗಮ್ಮನೋರೇ! ನೀವು ಉಮನಿಗಾಗಿ ಅಳಬೇಡಿ, ಅವಳು ದೇವಲೋಕದ ಮಗು. ಗಂಡನ ಸುಖಕ್ಕೋಸ್ಕರ ಮುತ್ತೈದೆ ಸಾವಿತ್ರಿಯಾಗಿ ಚಿರಂಜೀವಿಯಾಗಿಬಿಟ್ಟಳು. ಅವಳು ಬದುಕಿದ್ದಾಗಲೇ, ಮದುವೆಯಾದ ಕೆಲವು ದಿನದ ಮೇಲೆ ನಮ್ಮ ಸಂಗಡ ಬಾರಿ ಬಾರಿಗೂ ಹೇಳುತಿದ್ದಳು—"ಅಪ್ಪಾ! ಅಂಥಾ ವಿದ್ಯಾವಂತರಿಗೆ, ಲಕ್ಷಣವಂತರಿಗೆ ನಾನು ಸರಿಯಾದ ಜೋಡಿಯಲ್ಲ; ನಾನೂ ಅವರ ಸೇವೆ ಮಾಡಿಕೊಂಡಿರುತೀನಿ—ಜೊತೆಗೆ ಸರಿಯಾದ ಹೆಣ್ಣು ನೋಡಿ ಅವರ ಮನಸ್ಸಿಗೆ ಸಂತೋಷವಾಗೋಹಾಗೆ ಮದುವೆ ಮಾಡಬೇಕಪ್ಪ." ಅಂತ. ನಾವು ಹುಡುಗಿ—ಏನೋ ಹೇಳುತ್ತೇಂತ ಕಿವೀಮೇಲೆ ಹಾಕಿಕೊಳ್ಳುತಾ ಇರಲಿಲ್ಲ.

ಭಾಗಮ್ಮ:—ಅಯ್ಯೋ! ಎಂಥಾ ಹೆಣ್ಣು ಮಗೂನ ಕೊಂದಬಿಟ್ಟರೂ!!

(ಎಂದು ದುಃಖಿಸುತಾ ಒಳಕ್ಕೆ ಹೊರಟುಹೋಗುವಳು.)

ಈಶ್ವರಯ್ಯ:—ನಾವು ಪಾಪಿಗಳು! ನಾವು ನಿರ್ಭಾಗ್ಯರು! ಯಾರ ಅಂತಃಕರಣಾನೂ ತಿಳೀದೆ ಹೋದೆವು. (ಗೋಪೀನಾಥರಾಯರ ಕೈ ಹಿಡಿದು) ಗೋಪೀನಾಥರಾವ್! ನಿಮಗಿದ್ದ ಒಂದೇ ಹೆಣ್ಣುಮಗು ಅಕಾಲ ಮೃತ್ಯುವಿಗೆ ತುತ್ತಾಗಿದ್ದರೂ, ನಿಮ್ಮ ಸಂಕಟಾನ ನುಂಗಿಕೊಂಡು ಶಶಿಯ ಯೋಗಕ್ಷೇಮ ವಿಚಾರಿಸೋದಕ್ಕೆ ಬಂದಿದೀರಲ್ಲಾ!! ನನ್ನ ತಂದೇ! ನಿಮ್ಮಂಥ ಪುಣ್ಯಾತ್ಮರೂ ಈ ಪ್ರಪಂಚದಲ್ಲಿದಾರೆಯೇ!!

(ಅತನ ಕೈಗಳನ್ನು ಕಣ್ಣಿಗೊತ್ತಿಕೊಂಡು ದುಃಖಿಸುವನು.)

**ಗೋಪೀನಾಥರಾವ್ :**—ಈಶ್ವರಯ್ಯನೋರೇ! ನಮ್ಮ ಉಮಾ ಸತ್ತುಹೋದಳೂಂತ ನಾವು ಎಂಟು ಹತ್ತು ದಿವಸ ಕರುಳು ಕೀಳೋ ಅಷ್ಟು ಅತ್ತು ಸೊರಗಿ ಗೋಳಾಡಿದೆವು. ಆದರೆ ಈಚೆಗೆ ಕಣ್ಣು ಮುಚ್ಚಿತೂಂದರೇ ಅವಳೇ ಬಂದು ಮಾತನಾಡುತಾ ಇರುತಾಳೇ! ಕುರ್ಚಿ ಬಿಟ್ಟು ಬಿಟ್ಟು ಎಲ್ಲ ಹುಡುಗೀರ ಹಾಗೆ ತಾನೇ ನಡೆಕೊಂಡು ಬರುತಾಳೆ. ಮೊದಲಿಗಿಂತ ಮುಖ ಸಂತೋಷವಾಗಿ ಅರಳಿರುತ್ತೆ. ಯಾವಾಗಲೂ ನಗುತ ನಗುತಾ ಇರುತಾಳೆ. ಹಣೇತುಂಬಾ ಬಟ್ಟನೆ ಕುಂಕುಮ, ಚಂದ್ರ; ಹೆ ರ ಳಿ ನ ಲ್ಲಿ ಮಲ್ಲಿಗೆ ಹೂವಿನ ದಂಡೆ, ಒಳ್ಳೆ ಲಕ್ಷ್ಮೀ ಇದ್ದಹಾಗಿರುತಾಳೆ... . ..ಆಗಿನಿಂದ "ನಮ್ಮ ಉಮಾ ಸತ್ತಿಲ್ಲ – ನಮ್ಮ ಮನೇಲೇ ಓಡಾಡಿಕೊಂಡಿದಾಳೆ; ನಮ್ಮ ಈ ಹೊರಗಿನ ಕಣ್ಣಿಗೆ ಕಾಣೊಲ್ಲಾ!! ಅಷ್ಟೇ" ಅಂತಂದುಕೊಂಡು ಸಮಾಧಾನವಾಗಿದೀವಿ. ನಾನೂ ನನ್ನ ಲೇವಾದೇವೀನೆಲ್ಲಾ ನಿಲ್ಲಿಸಿಬಿಟ್ಟು ಇರೋ ಒಂದು–ಒಂದೂಕಾಲು ಲಕ್ಷದಲ್ಲಿ ಕೈಕಾಲಿಲ್ಲದ ಹೆಣ್ಣುಮಕ್ಕಳಿಗಾಗಿ 'ಉಮಾ' ಹೆಸರಿನಲ್ಲಿ ಒಂದು ಆಸ್ಪತ್ರೆ ಕಟ್ಟಿಸಬೇಕೂಂತ ತೀರ್ಮಾನಿಸಿದೇನೆ. ಇದೂ ಉಮಂದೇ ಸಲಹೆ. ಹತ್ತನೇ ದಿನ ರಾತ್ರಿ ನಾನು ಅತ್ತೂ ಅತ್ತೂ ಸೊರಗಿ ನೆಲದ ಮೇಲೇ ಬಿದ್ದುಕೊಂಡಿದ್ದಾಗ "ಉಮಾ" ಎದುರಿಗೆ ಬಂದುನಿಂತು 'ಅಪ್ಪಾ' ಅಂದಳು. ನೋಡಿದರೆ "ಉಮಾ" ಒಂದು ದೇವಸ್ಥಾನದ ಗರ್ಭ ಗುಡೀಲಿ ದೇವರ ಪೀಠದಲ್ಲಿ ಕೂತಿದಾಳೆ. ಮೂಗಿನಲ್ಲಿ ಮುಕುರ, ಕತ್ತಿನಲ್ಲಿ ವಜ್ರಕೆಂಪಿನ ಜವಾಹಿರಿಗಳು, ಮುತ್ತಿನ ಸರಗಳು. ಆಹಹಾ! ಅದೆಂಥಾ ಪೀತಾಂಬರ ಉಟ್ಟಿದ್ದಳು. ನಾನು ಅವಳು ನನ್ನ ಮಗಳೂನ್ನೋದನ್ನ ಮರೆತು ಕೈ ಮುಗಿದು ಕತ್ತು ಬಗ್ಗಿಸಿ ನಮಸ್ಕಾರಮಾಡಿದೆ. ಆಗ ಉಮಾ ಮಗುವಿನ ಹಾಗೆ ನಕ್ಕು "ಅಪ್ಪಾ! ನಿನ್ನ ಆಸ್ತೀನೆಲ್ಲಾ ಮಾರಿ, ಬಂದ ನಗದು ದುಡ್ಡಿನಲ್ಲಿ ಕೈಕಾಲುಗಳಿಲ್ಲದಿರೋ ಹೆಣ್ಣುಮಕ್ಕಳಿಗೆ ಒಂದು ಆಸ್ಪತ್ರೆ ಕಟ್ಟಿಸು. ಹಾಗೆ ಮಾಡಿದ ಮೇಲೆ ನಾನೇ ಪುನಃ ನಿನಗೆ ಸಲಕ್ಷಣವಾದ ಮಗಳಾಗಿ ಹುಟ್ಟುತೇನೇ' ಅಂತ ಹೇಳಿ ಮಾಯವಾಗಿಬಿಟ್ಟಳು. ನಾನು "ಉಮಾ! ಉಮಾ!" ಅಂತ ಕೂಗಿಕೊಂಡೆ. ಆಗ ನಮ್ಮ ಆಳು ದಾಸ ನನ್ನ ಕಾಲುಬಳಿ ಕೂತಿದ್ದೋನು "ಬುದ್ಧೀ! ಬುದ್ಧೀ!! ತಮ್ಮ ಕಾಲು ಒತ್ತುತಾ ಕುಂತಿದ್ದಂಗೆ ಜೋಂಪತ್ತಿ–ಚಿಕ್ಕವ್ವಾ ಅವರು ಬಂದು ಇಲ್ಲೇ ಕುಂತು ಪದ ಆಡುತಾ

ಇದ್ದ್ಯಾತ್ತೊ"ಂದ. ನೋಡಿದಿರಾ ಹ್ಯಾಗಿದೆ!....ಈಗ ನಾನು ನನ್ನ ಹೆಂಡತಿ ಇಬ್ಬರೂ ಹಿಂದಿನಂತೆ 'ಉಮಾ' ಹೇಳಿದಂತೇನೇ ನಡೆಯೋದು.

**ಈಶ್ವರಯ್ಯ**:—ಅಯ್ಯೋ ನಾನೆಂಥಾ ಪಾಪೀ! ಸೊಸೇಂತ ಆ ಮಗೂನ ಒಂದು ದಿನ ಕೂಡಾ ಪ್ರೀತಿಯಿಂದ ಮಾತಾಡಿಸದೆ, ದುರಹಂಕಾರದಲ್ಲಿ ಮ್ಮೆರೀತಿದ್ದೆನಲ್ಲಾ!!

**ಗೋಪೀನಾಥರಾವ್**:—ನೀವು ನಮ್ಮ ಮನೆಗೆ ಬನ್ನೀ; ಒಂದು ದಿನ ಇರೀ. ಉಮನ್ನ ನೀವೇ ನೋಡುವಿರಿ........ಈಗ ಶಶಿಕುಮಾರ್ ಎಲ್ಲಿ ದಾರೆ? ಹೇಗಿದಾರೆ?

**ಈಶ್ವರಯ್ಯ**:—ಒಳಗಡೆ ತನ್ನ ರೂಮಿನಲ್ಲಿದಾನೆ. ನಿಮ್ಮ ಮನೇಲಿ ಎರಡನೇ ದಿನ ವಿಕಲ್ಪವಾದ ಬುದ್ಧಿ, ಹಾಗೇ ಇದೆ. ಸದಾ 'ಉಮಾ! ಉಮಾ!'ಂತ ಅವಳ ಸಂಗಡ ಮಾತನಾಡುತಿರೋ ಹಾಗೆ, ಅವಳ ಹೇಳುತಿದ್ದ ಹಾಡುಗಳನ್ನ ತಾನೇ ಹೇಳಿಕೊಳ್ಳೋದು, ಕೆಲವು ಸಮಯ ಕೈಗೆ ಸಿಕ್ಕಿದ ಸೀರೇ ಸುತ್ತಿಕೊಂಡು ತಾನೇ ಉಮನ ಹಾಗಾಡೋದು; ಆ ಊರುಗೋಲು ಹಿಡಿದು ಕುಂಟುತಾ 'ಒಂದು, ಎರಡೂ'ಂತ ಎಣಿಸುತಾ ಹೆಜ್ಜೆ ಇಡುತಾ ಬಿದ್ದುಬಿಡೋದು .... .... ಗೋಪೀನಾಥರಾವ್! ನಾನು ಮೋಸಹೋದೆ!! ನಾನು ಪಾಪಿಯಾದೇ!

**ಗೋಪೀನಾಥರಾವ್**:—ಈಶ್ವರಯ್ಯನೋರೇ! ಇಗೋ ನೋಡೀ! ಈ ಪೆಟ್ಟಿಗೇ ಒಳಗೆ ಉಮಾ ಇಟ್ಟುಕೊಂಡಿದ್ದ ಒಡವೆಗಳೆಲ್ಲಾ ಇವೆ. ಇವು ನಿಮಗೆ ಸೇರಬೇಕಾದದ್ದು. ತಂದಿದೀನಿ ತಗೊಳ್ಳಿ. ಇವುಗಳನ್ನೆಲ್ಲಾ ಮುಂದೆ ಬರೋ ನಿಮ್ಮ ಸೊಸೇ ಇಟ್ಟುಕೊಳ್ಳಿ. ಈಗ 'ಶಶಿಕುಮಾರ್'ನ್ನ ಮದರಾಸ್‌ಗೋ ಬೊಂಬಾಯಿಗೋ ಕರೆಕೊಂಡುಹೋಗಿ ಡಾಕ್ಟರ್‌ಗಳಿಗೆ ತೋರಿಸಿ ಟ್ರೀಟ್‌ಮೆಂಟ್ ಮಾಡಿಸೋಣಾ. ಅದಕ್ಕೆಷ್ಟುಸಾವಿರ ಖರ್ಚಾದರೂ ಚಿಂತೆಯಿಲ್ಲಾ.

**ಈಶ್ವರಯ್ಯ**:—(ಕೇಳುತ್ತಾ ಕೇಳುತ್ತಾ ಗದ್ಗದಿತನಾಗಿ ಗೋಪೀನಾಥರಾಯನನ್ನಪ್ಪಿ) ಗೋಪೀನಾಥರಾವ್! ನಿಮ್ಮ ಪ್ರೇಮದ ಋಣಾನ ನಾನು ಹ್ಯಾಗೆ ತೀರಿಸಲಿ!!........ನೋಡೀ! ನಿಮ್ಮೂರಿನಿಂದ ಹಿಂದಿರುಗಿ

ದಾರಭ್ಯ, ನಾನೂ ನನ್ನ ಹೆಂಡತಿ ವ್ಯಥೆಪಟ್ಟು ನೊಂದು ಕಡೆಗೆ ನಿಮ್ಮಿಂದ ವರದಕ್ಷಿಣೆಯಾಗಿ ತಗೊಂಡ ದುಡ್ಡು ನಮ್ಮ ಹತ್ತಿರಿರಬಾರದೂಂತ ನೆನ್ನೆಯ ದಿನತಾನೇ ನಾಲ್ಕು ಸಾವಿರ ರೂಪಾಯಿನೂ ನಿಮ್ಮ ಹೆಸರಿಗೆ ಇನ್ಷೂರ್ ಮಾಡಿಸಿ ಪೋಸ್ಟ್‌ನಲ್ಲಿ ಕಳಿಸಿಬಿಟ್ಟೆ. ಇನ್ನು ಮಿಕ್ಕ ಒಂದು ಸಾವಿರ ರೂಪಾಯಿನಲ್ಲಿ ಐನೂರು ರೂಪಾಯಿನ ಆ ವಿಷಕಂಠಯ್ಯ ಕಮೀಷನ್ನೂಂತ ಹಿರಿದು ತಿಂದ; ಇನ್ನೈನೂರು ಹೀಗೇ ಖರ್ಚಾಗಿಹೋಗಿತ್ತು. ಈಗ ಈ ಒಡವೆಗಳನ್ನೂ ತಂದು ನಮ್ಮ ಕರುಳುನ ಚುರುಗುಟ್ಟಿಸಬೇಡಿ. ನಿಮ್ಮ ದಮ್ಮಯ್ಯಾ! ನನ್ನ ಹೆಂಡತಿಗಂತೂ ಈ ಮಾತನ್ನೇ ಹೇಳಬೇಡಿ ಅವಳಿಗೆ ಮೂರು ನಾಲ್ಕುಕಡೆಯ ದುಃಖ ನುಗ್ಗಿ ಸಂಕಟಪಡಿಸುತಾ ಇದೆ.

**ಗೋಪೀನಾಥರಾವ್** :—ಎಂಥಾ ಕೆಲಸಮಾಡಿದಿರೀ ಈಶ್ವರಯ್ಯನೋರೇ! ನಮ್ಮ ನಿಮ್ಮ ಸಂಬಂಧ ಹರಿದುಹೋಗಲೀಂತ ಹೀಗೆ ಮಾಡಿದಿರಾ?........ಮೊದಲು ಮೊದಲು 'ಶಶಿಕುಮಾರ್' ಅನ್ನೋ ಬರವಣಿಗೇನ ನೋಡಿ, ನಿಮ್ಮ ಮಗನ ಮೇಲೆ ನಾವು ಅನುಮಾನ ಪಟ್ಟಿದ್ದು ನಿಜವೇ ಆದರೂ, ಆ ಮೇಲೆ ಆ ಹುಡುಗ ಘನೆಯೆಲ್ಲಾ ತಡಕಾಡಿ, "ಉಮಾ! ಉಮಾ!!" ಅಂತ ಕೂಗಾಡಿ, ತೋಟವೆಲ್ಲಾ ಸುತ್ತಾಡುತಾ ಗೋಳಾಡಿದ್ದನ್ನ ನೋಡಿತಿದ್ದ ಹಾಗೇ ನಮ್ಮ ಕರಳು ಕರಗಿಹೋಗಿ ನಾವು ನಿಮ್ಮಲ್ಲಿ ಕ್ಷಮಾಪಣೆ ಕೇಳಿಕೊಳ್ಳಲಿಲ್ಲವೇ!! ಯಾರೋ ನಿಮ್ಮ ಶತೃಗಳು ಮಾಡಿದ ದ್ರೋಹದಿಂದ ಮನಸ್ಸು ಕೆಟ್ಟುಹೋದ ಗಳಿಗೇಲಿ ತಪ್ಪಿ ನಿಮ್ಮನ್ನ ಏನೋ ಅಂದೆವೂಂತ ನೀವು ಸಿಟ್ಟಾಗಿ ಹೀಗೆ ಮಾಡಬಾರದಾಗಿತ್ತು; ನಮ್ಮ ಆ ಘಳಿಗೇ ನಡೆತೇಗೆ ನೊಂದು, ಮರುಕ್ಷಣವೇ ನಿಮ್ಮನ್ನ ಕ್ಷಮಾಪಣೆ ಕೇಳಿಕೊಳ್ಳಲಿಲ್ಲವೇ?

**ಈಶ್ವರಯ್ಯ** :—ಗೋಪೀನಾಥರಾವ್! ನೀವು ಹಿಂದಿನದೆಲ್ಲಾ ಜ್ಞಾಪಿಸಬೇಡಿ; ಮನಸ್ಸು ತುಂಬಾ ಕಲಕಿಹೋಗುತ್ತೆ. ನಿಮ್ಮ ಮೇಲೆ ನಮಗೆ ಯಾವ ಬಗೆಯಾದ ದುರಭಿಪ್ರಾಯವೂ ಇಲ್ಲ. ನಿಮಗೆ ಒಂದು ಕಡೆಯ ದುಃಖವಾಗಿದ್ದರೆ, ನಮಗೆ ಎರಡುಕಡೆಯ ದುಃಖವಾಗಿದೆ. ನಿಮ್ಮ ವಿಚಾರದಲ್ಲಿ ನಮಗೆ ಪೂರ್ಣ ಮಮತೆಯೇ ಹೊರತು ಅನ್ಯಥಾ ಇಲ್ಲ. ನೀವು 'ಶಶಿ' ವಿಚಾರದಲ್ಲಿ ಇಟ್ಟುಕೊಂಡಿರೋ ಈ ಪ್ರೇಮಕ್ಕೆ............

[ಪಕ್ಕದ ಬಾಗಿಲಿನಿಂದ ಶಶಿಯು ಬೆಳೆದ ಗಡ್ಡ ಮೀಸೆಗಳಿಂದ ಕೂಡಿ, ಊರು ಗೋಲುಗಳನ್ನು ಹಿಡಿದು ಕುಂಟುತ್ತಿರುವವನಂತೆ ಹೆಜ್ಜೆಯಿಡುತ್ತಾ ಹಾಡುತ್ತಾ ಬರುವನು.]

ಪ್ರೇಮ ಜೀವನ ಶಾಂತಿಯ ಸದನಾ
ಸುಖ ಸಂಪದದ ನಿದಾನಾ ||
ಪ್ರೇಮ ವಾಹಿನೀ ಮಂಜುಳ ಮೋಹಿನೀ
ಸಿರಿಸುಖಸ್ವರ್ಗದ ರಾಣೀ ||

[ಈಶ್ವರಯ್ಯನು ಎದ್ದು ನಿಂತು ನೋಡುತ್ತಾ ಕಂಬನಿದುಂಬುವನು. ಗೋಪೀನಾಥ ರಾಯನೂ ನಿಂತು ಮುಂದೆ ಬಂದು ಶಶಿಯ ಕೈಹಿಡಿದು ತಲೆಯನ್ನು ನೇವರಿಸುವನು.]

**ಗೋಪೀನಾಥರಾವ್** —ಶಶಿಕುಮಾರ್! ಶಶಿಕುಮಾರ್!!

**ಶಶಿ** :—ಶಶಿಕುಮಾರಿಲ್ಲ; ಅವನು ಸತ್ತುಹೋದ! ನಾನು ಉಮಾ!! ನಾನು ಉಮಾಕಣ್ರೀ!!

(ಈಶ್ವರಯ್ಯನು ದುಃಖೋತ್ಕರ್ಷದಿಂದ ಬಿಕ್ಕುತ್ತಾ ಒಳಕ್ಕೆ ಹೊರಟುಹೋಗುವನು.)

**ಗೋಪೀನಾಥರಾವ್** —(ದುಃಖದಿಂದ)ನಾನು ಗೋಪೀನಾಧರಾವ್· ತುಂಕೂರಿನಿಂದ ಬಂದಿದೀನಿ ನಿಮ್ಮನ್ನ ನೋಡೋದಕ್ಕೆ.

**ಶಶಿ** :—(ಎಲ್ಲೋ ನೋಡುತ್ತಾ ನಕ್ಕು) ಬಂದೇ ಬಂದೇ ಇರೀ!....

(ದನಿಯನ್ನು ತಗ್ಗಿಸಿಕೊಂಡು ಹಾಡುವನು.)

ತುಂಬೀಬಂದಿದೆ ಮಧು ಮಾಸ ಲೋಕವಾ |
ತುಂಬಿ ಪುಷ್ಪದಿ ಮಧುಪಾನ ಕಳಸಿದೆ ||
ಕನಸ ಮನಸ ಮುಚ್ಚಿ
ಹೊಸ ಬೆಳಕ ಹಚ್ಚಿ
ಚಿಂತೆ ಸಂತೆಯ ಕೊಚ್ಚಿ
ಕುಣಿಸುತ ತಣಿಸುತ
ಕಾಣದಾನಂದ ಪ್ರವಾಹದೀ || ತುಂಬಿಬಂದಿದೆ ||

ಚೆನ್ನಾಗಿಲ್ಲವೇನ್ರೀ ಹಾಡು! ಶಶೀಗೆ ಈ ಹಾಡು ಕಂಡರೇ ತುಂಬಾ ಇಷ್ಟ. ಸದಾ ಈ ಹಾಡನ್ನೇ ಹೇಳಿಸುತಿದ್ದ ನನ್ನ ಕೈಲೀ! (ಊರುಗೋಲುಗಳನ್ನು ತೋರಿಸಿ) ನೋಡೀ! ಇವು ಶಶೀ ತಂದುಕೊಟ್ಟಿದ್ದೇ!!........ಈಗ ಚೆನ್ನಾಗಿ

ನಡೆಯೋದಕ್ಕೆ ಬರುತ್ತರೀ ನನಗೇ !.........ಅವನು ಇನ್ನೂ ಚೆನ್ನಾಗಿ ಕಲಿಸು ತೀನಿ–ನಾಲ್ಕು ದಿವಸದಲ್ಲೇ ಬಂದುಬಿಡುತೀನೀಂತ ಹೇಳಿಹೋದ........ ಪಾಪ ಬರಬೇಕೂಂತಿದ್ದನಂತೆ; ಆದರೆ ಅವರ ತಂದೆ ಅವನ್ನ ನಂಜನ ಗೂಡಿಗೆ ಕರೆಕೊಂಡು ಹೊರಟುಹೋದರಂತೆ........ನೋಡಿರೀ! (ಹೆಜ್ಜೆ ಯಿಡುತ್ತಾ) ಒಂದೂ; ಎರಡೂ, ಮೂರು; ನಾಲ್ಕು; ಐದು; ಆರು; ಏಳು; ಎಂಟು; ಒಂಭತ್ತು;........(ಬೀಳುವಂತೆ ನಟಿಸಿ) ಟಪ್ !........ನೋಡಿದಿರಾ' ಕಡೆಗೂ ಹತ್ತನೇ ಹೆಜ್ಜೆ ಇಡೋಕೇ ಬರಲಿಲ್ಲಾ !!........ಶಶೀ ಹೇಳಿದ್ದಿದ್ದು ಗೊತ್ತೇನು ನಿಮಗೇ ?........ಇನ್ನು ಸ್ವಲ್ಪ ದಿವಸದಲ್ಲೇ ನಿನಗೇ ಚೆನ್ನಾಗಿ ನಡೆಯೋದಕ್ಕೆ ಬಂದುಬಿಡುತ್ತೆ; ಆ ಮೇಲೆ ನಿನ್ನ ಕರೆಕೊಂಡು ಹೊರಟು ಹೋಗುತೀನೀಂತ !!........ಇನ್ನೂ ಬರಲೇ ಇಲ್ಲ ಯಾರೋ ಹೇಳಿದರು– ಸತ್ತುಹೋದಾಂತ...... ನಿಮಗೇನಾದರೂ ಗೊತ್ತೇನ್ರಿ ??

**ಗೋಪೀನಾಥರಾವ್** :—(ದುಃಖದಿಂದ ಶಶಿಯ ತಲೆಯನ್ನು ನೇವ ರಿಸುತಾ) ಶಶಿಕುಮಾರ್ !

**ಶಶಿ** :—(ಕೈಕೊಡವಿ) ಛೀ! ಛೀ! ನಾನು ಉಮಾಕಾಣ್ರಿ !! ನನ್ನ ಮುಟ್ಟಬೇಡಿ !! ಮುಟ್ಟಬೇಡೀ!........ನೀವು ಯಾರ್‍ರೀ ?

**ಗೋಪೀನಾಥರಾವ್** :—ನಾನೇ ಉಮನ ತಂದೆ ಗೋಪೀನಾಥ ರಾವ್ !

**ಶಶಿ** :—(ನಕ್ಕು) ಹ ಹ್ಹ ಹ್ಹಾ !! ನಂಗೆ ತಂದೆಯಾರ್‍ರೀ ?........ ಹ ಹ್ಹ ಹ್ಹ ಹ್ಹಾ !!........ಚೆನ್ನಾಗಿದೆ. ನಾನು ಶಶಿ ಇಬ್ಬರಿದ್ದೆವು........ ನಾಲ್ಕು ದಿವಸದಲ್ಲೇ ಬಂದುಬಿಡುತೀನೀಂತ ಶಶೀ ಹೇಳಿಹೋದ........ಬರಲೇ ಇಲ್ಲ........ಶಶಿ ನಿಮಗೆಲ್ಲಾದರೂ ಸಿಕ್ಕಿದರೆ ಬೇಗ ಕಳಿಸಿಬಿಡುತೀರಾ ?........ ಅಲ್ಲರೀ! ಸತ್ತುಹೋಗೋದೂಂದರೇನ್ರೀ ?........ಸತ್ತುಹೋದರೆ ಆಕಾಶ ದಲ್ಲೆಲ್ಲಾ ಹಾರಾಡಬಹುದಂತೆ; ಎಲ್ಲಿಗೆ ಬೇಕಾದರೂ ನೆನಸಿಕೊಂಡಿದ್ದ ಹಾಗೇ ಜಾರಿಬಿಡಬಹುದಂತೆ............ಹೌದೇನ್ರೀ ?..........ಹ ಹ್ಹ ಹ್ಹಾ ನಾನೊಬ್ಬಳು ಹುಚ್ಚೀ!............ಪಾಪ! ನೀವು ಸತ್ತಿಲ್ಲಾ ಮಾಡಿಲ್ಲಾ ! ನಿಮ್ಮನ್ನ ಕೇಳುತಾ ಇದೀನೀ ?........ನಿಮಗೇನುಗೊತ್ತು ಪಾಪ !!........ಶಶಿ ಸಿಕ್ಕಿದರೆ ಕೇಳಬಹುದು !.............ಅವನಿಗೆ ಗೊತ್ತಿರುತ್ತೇ!............ಅವನು

ಬರೋ ವೇಳೆಗೆ ಹತ್ತು ಹೆಜ್ಜೆ ಇಡೋದನ್ನ ಕಲೀಲೇಬೇಕು ......(ಊರು ಗೋಲುಗಳನ್ನು ಹಿಡಿದು ಹಿಂದಿರುಗಿ) ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು, ಒಂಭತ್ತು........ಶಶೀ! ಬಿದ್ದೇ!!

(ಬೀಳಲು ಹೋಗುವನು, ಒಳಗಿಂದ ಈಶ್ವರಯ್ಯ, ಭಾಗಮ್ಮ ಓಡಿಬಂದು ಹಿಡಿದುಕೊಳ್ಳುವರು. ಗೋಪೀನಾಥರಾಯನು ಹಿಂಬದಿಯಲ್ಲೇ ಕೈಚಾಚಿ ನಿಂತಿರುವನು.)

**ಈಶ್ವರಯ್ಯ**:—ಶಶೀ! ಅಲ್ಲಿ ನೋಡು ಮಗೂ ಯಾರು ಬಂದಿರೋರು!!

**ಶಶಿ**:—(ಮೈ ಕೊಡವಿ ದೂರ ಸರಿದು) ಥೂ! ಎಲ್ಲೋ ಶುದ್ಧ ಹುಚ್ಚರ ಸಹವಾಸ ಬಂತು. ಶಶಿ ಸತ್ತುಹೋದಾಂತ ಗೊತ್ತಿದ್ದರೂ ನನ್ನೇ 'ಶಶೀ! ಶಶೀ!'ಂತ ಕೂಗಿಕೊಂಡುಬಂದು ಮುಟ್ಟಿಬಿಡುತಾರೇ!! (ಭಾಗಮ್ಮನ ಕಡೆಗೆ ತಿರುಗಿ) ಏನಮ್ಮಾ ನಂಜಮ್ಮನೋರೇ' ಸುಮಾ ಚೆನ್ನಾಗಿದಾಳೆಯೇ!.... ಪಾಪ! ಆ ಹಾಳು ಶಶಿ ಅವಳಿಗೂ ಮೋಸಮಾಡಿ ಸತ್ತುಹೋದ!........ ನೀವು ಯಾಕೆ ನೆಲಬಾವೀಗೆ ಬಿದ್ದುಬಿಟ್ಟು ಸತ್ತುಹೋದರಂತೇ!........ ಅಂದಹಾಗೇ; ನಂಜಮ್ಮನೋರೇ! ಸತ್ತುಹೋದೋರು ಎಲ್ಲಿಗೇಂದರೆ ಅಲ್ಲಿಗೆ ಹಾರಿಕೊಂಡು ಹೊರಟುಹೋಗಬಹುದಂತೇ; ನೀವು ಈಗ ಹಾರಿಕೊಂಡು ಬಂದರಾ?

(ಭಾಗಮ್ಮನು ಕಂಬನಿದುಂಬಿ ಕಣ್ಣೊರಸಿಕೊಳ್ಳುವಳು.)

ಯಾಕ್ರೀ? ಅಳುತಿದೀರೀ?....ಸತ್ತೋರು ಅಳುತಾರೇನ್ರೀ?....ಅಯ್ಯೋ ಪಾಪ! ಶಶೀನೂ ತುಂಬಾ ಅಳುತಿರಬಹುದು! (ಬಲಭಾಗದ ರೂಮಿನ ಕಡೆಗೆ ತಿರುಗಿ)....ಶಶೀ! ಶಶೀೀ!! ಶಶೀೀ!! (ಎಂದು ಕೂಗುತ್ತಾ ಊರುಗೋಲಿನ ಮೇಲೆ ಕುಂಟುತ್ತಾ ಧಾವಿಸುವನು.)

**ಗೋಪೀನಾಥರಾವ್**:—(ಕಣ್ಣೊರಸಿಕೊಂಡು) ಬಹು ತಪ್ಪು ಕೆಲಸ ಮಾಡಿಬಿಡಿತು ಉಮಾ!!

**ಭಾಗಮ್ಮ**:—ನಮ್ಮ ಪಾಪಕ್ಕೆ ಪ್ರಾಯಶ್ಚಿತ್ತ ಅನುಭವಿಸಲೀಂತ ಕಣ್ಮರೆಯಾಗಿ ಹೋಯ್ತು.

(ಕಣ್ಣೊರಸಿಕೊಂಡು ಒಳಕ್ಕೆ ಹೋಗುವಳು.)

**ಈಶ್ವರಯ್ಯ** :—ಗೋಪೀನಾಥರಾವ್ ! ನಾನು ಪಾಪೀ !! ನೀವು ಧರ್ಮಾತ್ಮರು !!. ..ಬನ್ನೀ ! ಊಟಕ್ಕೆ ಬಡಿಸಿದೆ.

**ಗೋಪೀನಾಥರಾವ್** :—ನಿಮ್ಮ ಮಗನನ್ನು ನೋಡಿದರೆ, ನನ್ನ ಮಗಳು ಹೋದ ದುಃಖದ ನೂರರಷ್ಟು ಸಂಕಟವಾಗಿಬಿಡುತ್ತೆ.........ಈಗ ಅವರಿಗೆ ಹೊಟ್ಟೆಗೇನು ?

**ಈಶ್ವರಯ್ಯ** :—ಹೊಟ್ಟೆ ಹಸಿದಾಗ ಅವನೇ ಬಡಿಸಿಕೊಂಡು ಊಟ ಮಾಡಬೇಕು. ಯಾರೂ ಹತ್ತಿರ ಸೇರೋಹಾಗಿಲ್ಲ. ರೂಮಿನಲ್ಲಿ ಮೇಜಿನ ಮೇಲೆ ತಿಂಡಿ ಇಟ್ಟಿದ್ದರೆ ಯಾವಾಗಲೋ ತಿಂದು ಮುಗಿಸಿರುತಾನೇ......... ಒಂದೊಂದು ದಿನ ಸುಮ್ಮನೆ ಹಾಡು ಹೇಳುತಾ ಕೈಗೆ ಸಿಕ್ಕಿದ ಸೀರೆ ಸುತ್ತಿಕೊಳ್ಳುತಾ ಇದ್ದುಬಿಡುತಾನೇ....ಒಂದೊಂದು ಸಲ ಗಟ್ಟಿಯಾಗಿ ಬಿಕ್ಕಿ ಬಿಕ್ಕಿ ಅತ್ತು ಮಲಗಿಬಿಡುತಾನೇ .... ಗೋಪೀನಾಥರಾವ್ ! ವಂಶಕ್ಕಿರೋ ಒಬ್ಬ ಹುಡುಗ ಹೀಗಾಗಿರೋದನ್ನ ನೋಡಿ, ಇಪ್ಪತ್ತುನಾಲ್ಕು ಘಂಟೆಗಳೂ ಹೊಟ್ಟೆ ಬೇಯುತಾ ಇದೆ....ನಿಮ್ಮ ಮಗಳ ಮೇಲೆ ಅವನ ಅಂತಃಕರಣದಲ್ಲಿನ್ನೆಷ್ಟು ಮಮತೆ ಇತ್ತೋ! ದೇವರೇ ಬಲ್ಲ !!....ಮುಖ್ಯವಾಗಿ ನಾವು ಪಾಪಿಷ್ಟರು.... ಬನ್ನೀ !!

**ಗೋಪೀನಾಥರಾವ್**:—ಪಾಪ ಭಾಗಮ್ಮನೋರು ತುಂಬಾ ತೇಯ್ದು ಹೋಗಿಬಿಟ್ಟಿದಾರೆ.

**ಈಶ್ವರಯ್ಯ** :—ಹೊಟ್ಟೆಗೆ ಅನ್ನವಿಲ್ಲ. ಕಣ್ಣಿಗೆ ನಿದ್ದೆ ಇಲ್ಲ.... ಹೊಟ್ಟೇಗೇನಾದರೂ ತಿಂದರೆ, ಅರ್ಧ ಘಂಟೇಲಿ ಹಿಂಸೆಯಾಗಿ ಎಲ್ಲಾ ಹೊರಟುಹೋಗುತ್ತೆ. ಡಾಕ್ಟರು ಔಷಧಿ ಏನೋ ಕೊಡುತಿದಾರೆ ಹುಷಾರಿಗೆ ನೋಡಿಕೊಳ್ಳೀಂತ ಹೇಳುತಿದಾರೆ. ಆದರೆ ಅವಳನ್ನ ಔಷಧಿ ತಗೊಳ್ಳೋ ಹಾಗೆ ಮಾಡೋದೆ ಕಷ್ಟವಾಗಿದೆ. ನನ್ನ ಮನಸ್ಥಿತಿ ಭಗವಂತನಿಗೇ ತಿಳೀಬೇಕು....ಬನ್ನೀ ! ಬನ್ನೀ !!

(ನಿಟ್ಟುಸಿರುಬಿಟ್ಟು ಗೋಪೀನಾಥರಾಯನನ್ನು ಕರೆದುಕೊಂಡು ಈಶ್ವರಯ್ಯನು ಒಳಕ್ಕೆ ಹೋಗುವನು.)

---

# ಅಂಕ ೩ - ದೃಶ್ಯ ೩

[ಪಾರ್ಕಿನ ಒಂದು ಮೂಲೆ; ಕಲ್ಲು ಬೆಂಚಿನ ಮೇಲೆ ವಿಷಕಂಠಯ್ಯನೂ, ಸೂಟ್ ಧರಿಸಿ, ಕೈಲಿ ವಾಕಿಂಗ್‌ಸ್ಟಿಕ್ ಹಿಡಿದಿರುವ ನಾಗೇಂದ್ರರಾಯನೂ ಕುಳಿತು ಮಾತನಾಡುತ್ತಿರುವರು. ಸಂಜೆ ಐದು ಘಂಟೆಯ ಸಮಯ.]

**ವಿಷಕಂಠಯ್ಯ** :—ಹುಡುಗನಿಗಾಗಲೇ ನಾಲ್ಕಾರು ಕಡೆಯಿಂದ ಹೆಣ್ಣುಗಳು ಬರುತಾ ಇವೆ. ಗೋಪೀನಾಥರಾಯನ ಮಗಳು ಆ ಕುಂಟಿ ಹುಡುಗಿ ಹೋಯಿತೂಂತ ಪೇಪರಿನಲ್ಲಿ ಬಂದ ಮಾರನೇ ದಿವಸವೇ ಸೆಕ್ರೆಟೇರಿಯೆಟ್ ಸೆಕ್ಷನ್‌ಸೂಪರಿಂಟೆಂಡೆಂಟ್ ಸೋಮಶೇಖರರಾಯರು, ಜೊತೇಲಿ ಇನ್ನು ಯಾರನ್ನೋ ಕರಕೊಂಡು ಈಶ್ವರಯ್ಯನ ಮನೆಗೆ ಹೋಗಿ;ಅಲ್ಲಿ ಅವರು ಮಗನ ಸಂಗಡ ತುಂಕೂರಿಗೆ ಹೋಗಿದಾರೆ ಅನ್ನೋ ಸಮಾಚಾರ ಕೇಳಿ ನನ್ನ ಮನೆಗೆ ಬಂದರು "ಎಂ ಎ. ಮಾಡಿದ ಹುಡುಗ, ಮನ್ಮಥ ಇದ್ದ ಹಾಗೆ ಇದಾನೆ ನನ್ನ ಹುಡುಗೀನೂ ಬಿ ಎ. ಮಾಡಿದೆ. ವರಸಾಮ್ಯ ಚೆನ್ನಾಗುತ್ತೆ. ವರದಕ್ಷಿಣೆ ಕೇಳೋಪಕ್ಷಕ್ಕೆ ಎಷ್ಟಾದರೂ ಸರಿ ಕೊಡೋಣ ಅಲ್ಲದೆ ದಿವಾನರನ್ನ ಕಂಡು ಅವನಿಗೆ ಕಾಲೇಜಿನಲ್ಲಿ ಸೊಗಸಾದ ಕೆಲಸ ಕೂಡ ಕೊಡಿಸುತೀನೀ''ಂತ ಬಲವಂತ ಮಾಡುತಾ ಕೂತುಕೊಂಡರು. ಆದರೆ ನಾನು 'ನಾಗೇಂದ್ರರಾಯರಿಗೆ ಮಾತುಕೊಟ್ಟುಬಿಟ್ಟಿದೀನಿ'ಂತ ಸಮಾಧಾನಮಾಡಿ ಕಳುಹಿಸಿದೆ.

**ನಾಗೇಂದ್ರರಾವ್** :—ನೋಡೀ ಮಿಸ್ಟರ್ ವಿಷಕಂಠರಾವ್ ! ನೀವು ಮೊದಲು ಹೇಳುತಿದ್ದುದು—"ಹುಡುಗನ ರಿಜಲ್ಟ್ ಬರುತಿದ್ದಹಾಗೇ ಪ್ರಸ್ತಾಪ ನಡೆಸಿ ಲಗ್ನ ಸೆಟಲ್ ಮಾಡಿಸುತೀನೀ''ಂತ ಪ್ರಾಮಿಸ್ ಮಾಡಿಹೋಗಿದ್ದಿರಿ ಆ ಕಂಡೀಷನ್ ಮೇಲೆ, ನಾನು ನಿಮಗೆ ಒಂದು ಸಾವಿರ ರೂಪಾಯಿ ಕಮಿಷನ್, ಹುಡುಗನ ತಂದೆಗೆ ನಾಲ್ಕು ನಾವಿರ ರೂಪಾಯಿ ವರದಕ್ಷಿಣೆ ಕೊಡ ತೀನೀಂತ ಪ್ರಾಮಿಸ್ ಮಾಡಿದ್ದದ್ದು. ಈಗ ನಿಮ್ಮ ಕಂಡೀಷನ್ ನೀವೆ ಬ್ರೇಕ್ ಮಾಡಿದಿರಿ. ಆ ನನ್ನ ಕಂಡಿಷನ್ ತಾನೇ ಆ ಟೋ ಮ್ಯಾ ಟಿ ಕ್ಕಾ ಬ್ರೇಕಾಗಿ ಹೋಯಿತು.

ವಿಷಕಂಠಯ್ಯ :—ನನಗೆ ಕೊಡೋ ಒಂದು ಸಾವಿರ ರೂಪಾಯಿ ಕಮೀಷನ್ ಅಲ್ಲದೇ ಅವರಿಗೆ ಐದು ಸಾವಿರ ರೂಪಾಯಿ ಕೊಡುತೇನೇಂತ ಅಲ್ಲವೆ ತಾವು ..

ನಾಗೇಂದ್ರರಾವ್ ·—ನಾನು ಕುಬೇರನ ಮೊಮ್ಮಗನೇನ್ರೀ? ಇಲ್ಲಾ ಆ ಗೋಪೀನಾಥರಾಯನ ಹಾಗೆ ಬಡ್ಡಿಮಗನೋ? ...ನಾನೂ ತಿಂಗಳೆಲ್ಲಾ ಕಛೇರೀಲಿ ಕೆಲಸಮಾಡಿದರೆ ನಾನ್ನೂರು ಚಿಲ್ಲರೆ ರೂಪಾಯಿ ಬರುತ್ತೆ.

ವಿಷಕಂಠಯ್ಯ .—ಹಾಗಾದರೆ ಈಗ . ?

ನಾಗೇಂದ್ರರಾವ್ ·—ಹಾಗಾದರೆ ಈ ಗಾ ೦ ದ ರೆ ೀ?.... ...ಈಗ ಆ ಸಂತೋಷ ಇಲ್ಲರೀ!........ಹುಡುಗ ಎಷ್ಟಾದರೂ ಸೆಕೆಂಡ್ ಹ್ಯಾಂಡ್ ಬ್ರೈಡ್‌ಗ್ರೂಮ್ !!

ವಿಷಕಂಠಯ್ಯ :—(ಅಚ್ಚರಿಯಿಂದ) ರಾಯರೇ?

ನಾಗೇಂದ್ರರಾವ್ ·—ಹೌ ದ ರಿ ೀ ! ವಿಡೋಯರ್ !! ಹೆಣ್ಣು ಹುಡುಗಿ ಗಂಡನ್ನ ಕಳಕೊಂಡಿದ್ದಿದ್ದರೆ ಅವಳ ಹಣೆ ಕುಂಕುಮ ಅಳಿಸಿ, ಕತ್ತಿನ ತಾಳೀಕಿತ್ತುಕೊಂಡು, ತಲೇಮೇಲೆ ಬೂದಿ ಸುರಿದು, ಮೂಲೇಲಿ ಕೂಡಿಸಿಬಿಡುತಿದ್ದೆವು, ಆದರೆ ಇವನು ಗಂಡು ಹುಡುಗ, ಅಳಿಸೋದಕ್ಕೆ ಕುಂಕುಮ ಇಲ್ಲ; ಕೀಳೋಕೆ ತಾಳಿ ಇಲ್ಲ; ಆದರೂ ವಿಡೋಯರ್ ವಿಡೋಯರ್ರೀ !! ಸೆಕೆಂಡ್ ಹ್ಯಾಂಡ್ ಬ್ರೈಡ್‌ಗ್ರೂಮೇ !!

ವಿಷಕಂಠಯ್ಯ :—ಹಾಗಾದರೆ ಈಗ........

ನಾಗೇಂದ್ರರಾವ್ :—ಹಾಗಾದರೆ ಈಗಾಂದರೆ ಇಷ್ಟೇ! .... ಫಸ್ಟ್ ಹ್ಯಾಂಡ್ ಬ್ರೈಡ್‌ನ ಬೆಲೇಲಿ ಅರ್ಧ ಬೆಲೆ.

ವಿಷಕಂಠಯ್ಯ :—ಅಂದರೇ ?

ನಾಗೇಂದ್ರರಾವ್ :—ಅಂದರೇ, ನಿಮಗೆ ಐನೂರು ರೂಪಾಯಿ ಕಮೀಷನ್, ಹುಡುಗನ ತಂದೆಗೆ ಎರಡು ಸಾವಿರ ರೂಪಾಯಿ ವರದಕ್ಷಿಣೇ. ಅಷ್ಟೇ! ತೀಳೀತೇ !!

ವಿಷಕಂಠಯ್ಯ :—ಎಲ್ಲಾದರೂ ಉಂಟೇ ರಾಯರೇ?

**ನಾಗೇಂದ್ರರಾವ್ :**—ರೀ ! ಮಿಸ್ಟರ್ ವಿಷಕಂಠರಾವ್ ! ನಿಮ್ಮ ಕತೆ ನಾನೂ ಕೇಳಿದೀನಿ. ನೀವು ಶಾನೆ ಬೂಟಾಟಿಕೆ ಆಡಬೇಡಿ ...ಅಲ್ಲರೀ ! ಆ ಗೋಪೀನಾಥರಾಯನ ಮನೆಹಾಳು ದುಡ್ಡಿನಲ್ಲಿ ನೀವು ಒಂದು ಸಾವಿರ, ಆ ಹುಡುಗನ ತಂದೆ ಐದು ಸಾವಿರ ಮೇದು, ಕಡೆಗೆ ಇಬ್ಬರೂ ಪಿತೂರಿಮಾಡಿ ಆ ಹುಡುಗೀಗೆ ಫೋರ್ಜರಿ ಕಾಗದ ಬರೆದ -ಆ ಹುಡುಗೀನ ತಿಂದು ತೇಗಿದಿರೀಂತ ಊರು ಊರೇ ಕೂಗುತಾ ಇದೆ.

**ವಿಷಕಂಠಯ್ಯ** —ಏನನ್ಯಾಯರಾಯರೇ ! ಹಾಳು ಜನ ಒಬ್ಬರು ಬದಕೋದನ್ನ ನೋಡಿ ಒಬ್ಬರು ಸಹಿಸಲಾರರು.

**ನಾಗೇಂದ್ರರಾವ್** —ನಾನೂ ಅದೇ ಹೇಳಿದ್ದು.

**ವಿಷಕಂಠಯ್ಯ :**—ಹಾಗಲ್ಲಾರಾಯರೇ ! ನಿಜವಾದ ವಿಚಾರವೆಲ್ಲಾ ಪೇಪರ್‌ನಲ್ಲಿ ಪ್ರಿಂಟಾಗಿಹೋಗಿದೆ; ಅಷ್ಟಾದ ಮೇಲೂ ಈ ಸುಳ್ಳುಪಳ್ಳು ಎಲ್ಲಾ ಹುಟ್ಟಿಸಿ ನಮ್ಮ ತಲೇಮೇಲೆ ಹೇರುತಾರಲ್ಲ ಈ ಹಾಳು ಜನ. ನೋಡೀ ರಾಯರೇ ! ಗೋಪೀನಾಥರಾಯರು ತಾವೇ ಸಂತೋಷವಾಗಿ ನನ್ನ ಮಗಳ ಲಗ್ನಕ್ಕೇಂತ ಎಂಟುನೂರು ರೂಪಾಯಿ ಕೊಟ್ಟರು ಅದೂ ಏನೂ :—ಐನೂರು ರೂಪಾಯಿ ನಗದು—ಮುನ್ನೂರು ರೂಪಾಯಿನದು ಸೀರೆ, ದೋತ್ರ ಇವೆಲ್ಲಾ. ಆ. ಈಶ್ವರಯ್ಯನೋರಿಗೇನೋ ಐದುಸಾವಿರ ರೂಪಾಯಿ ಕೊಟ್ಟರು ; ಆದರೆ ಒಂದು ವಾರದ ಹಿಂದೆ, ಅಂದರೆ ಆ ಹುಡುಗೀ ಹೋದ ಹದಿನೈದು ದಿವಸದೊಳಗೇನೇ ಆ ಐದು ಸಾವಿರ ರೂಪಾಯನ್ನೂ ಇನ್‌ಷೂರ್ ರಿಜಿಸ್ಟ್ರೇಷನ್ ಮಾಡ್ಸಿ – ಗೋಪೀನಾಥರಾಯರಿಗೆ ವಾಪಸ್ ಕಳಿಸಿಬಿಟ್ಟರು. ನಾನೂ ಕೂಡ ಆ ನಗದು ಹಣಾನ ವಾಪಸ್ ಮಾಡೋಣಾಂತಿದ್ದೆ ; ಆದರೆ ನನ್ನ ಹೆಂಡತಿ ಹೆಸರಿನಲ್ಲಿ ಪೋಸ್ಟಾಫೀಸಿನಲ್ಲಿಟ್ಟುಬಿಟ್ಟೆ; ಅವಳು ಈಗ ಅದನ್ನ ತೆಗೆಯೋದಕ್ಕೆ ಒಪ್ಪಲ್ಲ.

**ನಾಗೇಂದ್ರರಾವ್ :**—ಈಶ್ವರಯ್ಯ ಹಣಾನ ವಾಪಸ್ ಮಾಡಿದರೇ?! ಆಶ್ಚರ್ಯ....ಇರಲಿ. ವಿಚಾರಿಸಿ ತಿಳಿದರಾಯಿತು. ಆದರೆ ನಿಮ್ಮ ಗಂಟಂತೂ ಭದ್ರವಾಗಿದೆ.

**ವಿಷಕಂಠಯ್ಯ :**—ನಾನೇನುಮಾಡಲೀ ರಾಯರೇ !

**ನಾಗೇಂದ್ರರಾವ್:**— ಹಾಗಾದರೆ ಆ ಹೆಳವಿ ಹುಡುಗಿ ಯಾಕರೀ ಭಾವೀಗೆ ಬಿತ್ತು ?

**ವಿಷಕಂಠಯ್ಯ:**— ಎಲ್ಲಾ ಆ ಗೋಪೀನಾಥರಾವ್‌ನ ಶತ್ರುಗಳ ಕೆಲಸ. ಅವರಿಗೇನು ಒಬ್ಬರೇ ಇಬ್ಬರೇ ... ಹಾಳು ಲೇವಾದೇವಿ ಜಗಳ-ಕೋರ್ಟು ಕಛೇರಿಗಳ ವ್ಯವಹಾರದ ಜಿದ್ದಾಜಿದ್ದಿಗಳಲ್ಲಿ....ಮಕ್ಕಳೇ ಆಗದ ಹಾಗೆ ಯಾರೋ ತಡೇ ಹಾಕಿಸಿದ್ದರಂತೆ, ಆಮೇಲೆ ಹೆಣ್ಣು ಹುಟ್ಟಿಬಿಡುತ್ತಲೂ ಅದಕ್ಕೆ ಕಾಲುಗಳೇ ಸೇದಿಹೋಗೋಹಾಗೆ ಮಾಟಮಾಡಿಸಿದರಂತೆ. ಆಮೇಲೆ ನಾನೇನೋ ಆಕಾಶ ಭೂಮಿಯೆಲ್ಲಾ ತಿರುಗಿ, ಹರತರದೂದಿಮಾಡಿ ಒಳ್ಳೇ ಕಡೇಗೇ ಮದುವೇನೂ ಮಾಡಿಸಿದೆ. ಅದಕ್ಕೆ ಹೊಟ್ಟೆ ಉರಿದು ಯಾರೇನುಮಾಡಿದರೋ ?!!

**ನಾಗೇಂದ್ರರಾವ್ :**— ಆ ಹುಡುಗ ಬರೆದ ಹಾಗೇ ಫೋರ್ಜ್‌ಮಾಡಿ ಕಾಗದ ಬರೆದಿದ್ದರಂತಲ್ಲರೀ ?

**ವಿಷಕಂಠಯ್ಯ :**— ಹೌದಂತೆ

**ನಾಗೇಂದ್ರರಾವ್ :**— ಏನು ಬರೆದಿದ್ದರೋ ?

**ವಿಷಕಂಠಯ್ಯ:**— ಆ ಉರಿಯೋ ಸೂರ್ಯನಾರಾಯಣನಿಗೇ ಗೊತ್ತು.

**ನಾಗೇಂದ್ರರಾವ್ :**— ನೀವಾದರೂ ಪತ್ತೇಮಾಡೋಕಿಲ್ಲವೇ ?

**ವಿಷಕಂಠಯ್ಯ** ·— ಹ್ಯಾಗೆ ಪತ್ತೇಮಾಡೋದು, ಕಾಗದಾನೇ ಸುಟ್ಟು ಬೂದೀನ ಕೆಳಕ್ಕೆ ತಳ್ಳಿಬಿಟ್ಟಿತ್ತಂತೆ.

**ನಾಗೇಂದ್ರರಾವ್:**— ಆ ಹುಡುಗಿ ಹೋಯಿತೂಂತ ಪೇಪರ್‌ನಲ್ಲೋದಿ, ಅವನ ಋಣಾ ತಿಂದ ಗೃಹಸ್ಥರು ನೀವು ಅಲ್ಲಿಗೆ ಒಂದು ಸಲ ಕೂಡಾ ಹೋಗಬೇಡವೇನ್ರೀ ?

**ವಿಷಕಂಠಯ್ಯ :**— ಅಯ್ಯೋ! ಆಗ ಮನೇಲಿ ನನ್ನ ಹೆಂಗಸಿಗೆ ಒಂದೇಸಮ ಹೊಟ್ಟೆನೋವು; ನನಗೆ ಕಾಲೇ ಹಿಡಿದುಬಿಟ್ಟಿತ್ತು.

**ನಾಗೇಂದ್ರರಾವ್ :**— ಅಂಥ ಟೈಮ್‌ನಲ್ಲಿ ಆಬ್ಸೆಂಟಾದರೆ, ನಿಮ್ಮ ಮೇಲೆ ಅನುಮಾನ ಬರೊಲ್ಲವೇ ?

**ವಿಷಕಂಠಯ್ಯ :**— (ಗಾಬರಿಯಾಗಿ) ನನ್ನ ಮೇಲೇ ?

**ನಾಗೇಂದ್ರರಾವ್ :**—ನಿಮ್ಮ ಮೇಲೇಂದರೇ, ಅಬ್ಸೆಂಟಾದೋರ ಮೇಲೆ. ನೋಡೀ, ಕಳ್ಳತನಮಾಡಿದರೂ, ಪೋಲೀಸ್‌ನೋರು ಬಂದಾಗ ಆ ಸ್ಥಳದಲ್ಲೇ ಇದ್ದು ಸಾಕ್ಷಿಯಾಗಬೇಕು; ಅದು ಜಾಣತನ.

**ವಿಷಕಂಠಯ್ಯ :**—(ಬೇಸರಗೊಂಡು) ಆ ಮಾತು ಹೋಗಲೀ ರಾಯರೇ!........ಈಗ ಏನು ಹೇಳುತೀರೀ?

**ನಾಗೇಂದ್ರರಾವ್ :**—ಏನು ಹೇಳೋದು! ಆಗಲೇ ಹೇಳಿದನಲ್ಲಾ.

**ವಿಷಕಂಠಯ್ಯ :**—(ಯೋಚಿಸಿ) ನನಗೇನು ಕಮೀಷನ್ನೇ ಬೇಡ ಸ್ವಾಮೀ! ಇನ್ನು ಮೇಲೆ ಈ ಕಸುಬೇ ಬಿಟ್ಟುಬಿಡುತೀನಿ ಏನೋ ಆ ಹುಡುಗೀ ಲಗ್ನ ಒಂದಾಗಲೀಂತ ದುಡ್ಡು ಸೇರಿಸುತಾ ಇದೀನಷ್ಟೆ. ಇದೆಲ್ಲೀ ಚಂಡಾಲ ಕಸುಬು.

**ನಾಗೇಂದ್ರರಾವ್** —ಅಲ್ಲರೀ! ನೀವು ನೆಮ್ಮದಿಯಾಗಿ ನಮ್ಮ ಹೆಣ್ಣುಮಕ್ಕಳಿಗೆ ಲಗ್ನಮಾಡಿಸಿ, ಆಮೇಲೆ ನಿಮ್ಮ ಮಗಳ ಲಗ್ನಾಂದರೆ ನಾವೇ ಮುಂದೆ ಬಂದು ಸಹಾಯ ಮಾಡೋಲ್ಲವೇ?

**ವಿಷಕಂಠಯ್ಯ** —ಅದೆಲ್ಲಾ ನಿಮ್ಮ ಹೆಣ್ಣುಮಕ್ಕಳ ಲಗ್ನಕ್ಕೆ ಮುಂಚಿನ ಮಾತು—ಆಮೇಲೆ ಒಂದು ತೊಟ್ಟು ಗಂಗೋದಕ ಕೂಡಾ ಕೊಡೋಲ್ಲಾ ಸ್ವಾಮೀ!........ಮೊದಲು ಮೊದಲು ಹಾಗೇ ಖಾಲೀ ಪುಣ್ಯ ಕ್ಕೋಸ್ಕರವೇ ಪ್ರಾರಂಭಿಸಿದೆ ಇದನ್ನ.

**ನಾಗೇಂದ್ರರಾವ್ :**—ಆ ಪುಣ್ಯಾ ಕಣ್ಣಿಗೆ ಕಾಣಿಸಲಿಲ್ಲಾಂತ ಈಗ ಪಾಪಕ್ಕೆ ತಿರುಗಿದಿರಾ?

**ವಿಷಕಂಠಯ್ಯ :**—(ಕಿವಿಮುಚ್ಚಿ ಮೇಲೆದ್ದು) ರಾಮರಾಮಾ!!

**ನಾಗೇಂದ್ರರಾವ್ :**—(ತಾನೂ ಮೇಲೆದ್ದು) ಹೋಗಲೀ! ಹೀಗೆ ಮಾಡಿ! ಸೆಕೆಂಡ್‌ಹ್ಯಾಂಡ್ ಬ್ರೈಡ್‌ಗ್ರೂಮ್ ಆದ್ದರಿಂದ ನಿಮ್ಮ ಸಂಭಾವನೆ ಐನೂರು; ವರನ ತಂದೆಗೆ ಎರಡು ಸಾವಿರ. ಆದರೆ ಹುಡುಗನ ಬುದ್ಧಿ ನೆಟ್ಟಗಾದ ದಿವಸ, ನಿಮಗೆ ಸಂಭಾವನೆಯು ಎರಡನೇ ಅರ್ಧ; ವರನ ತಂದೆಗೆ ವರದಕ್ಷಿಣೆ ಎರಡನೇ ಅರ್ಧ.

**ವಿಷಕಂಠಯ್ಯ :**—ಅಂದರೇ?

**ನಾಗೇಂದ್ರರಾವ್.**—ಅಂದರೇ, ಲಗ್ನದ ಟೈಮ್‌ನಲ್ಲಿ ನಿಮಗೆ ಇನ್ನೂರೈವತ್ತು; ವರನ ತಂದೆಗೆ ಒಂದು ಸಾವಿರ ನೀವು ಹೇಳೋ ಪ್ರಕಾರ ಮದುವೆಯಾಗುತಿದ್ದಹಾಗೇ ಹುಡುಗನ ಬುದ್ಧಿ ಸರಿಹೋಗಿಬಿಟ್ಟರೆ ಆಗ ನಿಮಗೆ ಮಿಕ್ಕ ಇನ್ನೂರೈವತ್ತು, ಬೀಗರಿಗೆ ಇನ್ನೊಂದುಸಾವಿರ.

**ವಿಷಕಂಠಯ್ಯ**—ನನಗೇನೂ ಕೊಡಲೇಬೇಡಿ; ಬಿಡಿ.

**ನಾಗೇಂದ್ರರಾವ್**—ನಾವು ಕೊಡಲೇಬೇಕು; ನೀವು ತಗೊಳ್ಳೇಬೇಕು. ಇದು ಬಿಸಿನೆಸ್......ಆಮೇಲೆ ಇನ್ನೊಂದು ಕಂಡಿಷನ್. ನನ್ನ ಮಗಳು ರಮಾ ಹುಡುಗನ್ನ ಒಪ್ಪಬೇಕು; ಅಲ್ಲದೇ ಡಾಕ್ಟರು ಹುಡುಗನ್ನ ನೋಡಿ ಬುದ್ಧಿ ಸರಿಹೋಗುತ್ತೇಂತ ಹೇಳಬೇಕು.

**ವಿಷಕಂಠಯ್ಯ**:—ನೋಡೀ ರಾಯರೇ! ಡಾಕ್ಟರು ಯಾಕೇ! ನೀವೇ ಬಂದು ನೋಡಿ! ಆ ಹುಡುಗ ಪುದುಗೀಲಿ ಇಟ್ಟಿದ್ದ ಪ್ರೀತಿಯಿಂದ ಹಾಗೆ ತಾನೇ ಆ ಹುಡುಗೀಂತ ಭ್ರಮೆಪಟ್ಟು, ಏನೋ ಮಾತಾಡುತಿರುತಾನೆ. ಅದೇನು ಹುಚ್ಚಲ್ಲ–ಪೆಪ್ಪಲ್ಲ, ರಾಜನ ಹಾಗಿದ್ದ ಹುಡುಗ ಮದುವೆಯಾಗಿ ನಿಮ್ಮ ಮಗಳು ಅವನೆದುರಿಗೆ ನಿಂತರೆ, ಆ ವಿಕಲ್ಪವಾಗಿರೋ ಬುದ್ಧಿ ಸರಿ ಹೋಗೇಹೋಗುತ್ತೆ, ಇನ್ನು ನಿಮ್ಮ ಮಗಳಿಗೆ ನೀವೇ ಸಮಾಧಾನ ಹೇಳಬೇಕು.

**ನಾಗೇಂದ್ರರಾವ್**:—ಬನ್ನೀ ಮನೇಗೆ ಹೋಗಿ ಡಾಕ್ಟರನ್ನೂ, ನನ್ನ ಮಗಳನ್ನೂ ಇಬ್ಬರನ್ನೂ ಕನ್‌ಸಲ್ಟ್ ಮಾಡೋಣ.

(ಇಬ್ಬರೂ ನಿಷ್ಕ್ರಮಿಸುವರು.)

## ಅಂಕ ೩-ದೃಶ್ಯ ೪

[ನಾಗೇಂದ್ರರಾಯನ ಮನೆಯ ಡ್ರಾಯಿಂಗರೂಮ್; ನಾಗೇಂದ್ರರಾಯನೂ, ವಿಷಕಂಠಯ್ಯನೂ ಊಟಮಾಡಿ ಬಂದು ಕೂಡುವರು. ಒಳಗಿನಿಂದ ಹದಿನೇಳು ವರುಷದ ರಮಾ ಬೆಳ್ಳಿಯ ತಟ್ಟೆಯಲ್ಲಿ ಅಡಕೆಲೆ ಸುಣ್ಣಗಳನ್ನಿಟ್ಟು ತಂದು ಮೇಜಿನ ಮೇಲಿಡುವಳು.]

**ನಾಗೇಂದ್ರರಾವ್ :—** ಕೂತುಕೋ ರಮಾ !........ಸುಬ್ಬನ್ನ ಊಟ ಮಾಡೂಂತ ಹೇಳಬೇಕಾಗಿತ್ತು.

**ರಮಾ :—** (ಕುರ್ಚಿಯಲ್ಲಿ ಕುಳಿತು) ಮಾಡುತಾ ಇದಾನೆ.

**ನಾಗೇಂದ್ರರಾವ್ :—** ಮಿಸ್ಟರ್ ವಿಷಕಂಠರಾವ್ ! ಹ್ಯಾಗಿತ್ತು ನಮ್ಮ ಸುಬ್ಬನಡಿಗೇ ?

**ವಿಷಕಂಠಯ್ಯ —**ದಿವ್ಯವಾಗಿತ್ತು.

**ನಾಗೇಂದ್ರರಾವ್ :—** ನೋಡಿ, ನರಸೀಪುರದಿಂದ ಕರೆಸಿದೇನೆ ಅವನನ್ನ ... ಹಂ. ತಗೊಳ್ಳೀ ಅಡಕೆಲೇ, ಹಾಕ್ಕೊಳ್ಳಿ.

(ಇಬ್ಬರೂ ಅಡಕೆಲೆ ಹಾಕಿಕೊಳ್ಳತೊಡಗುವರು.)

**ವಿಷಕಂಠಯ್ಯ :—** ನಿಮ್ಮ ಮಗಳಿಗೆ ಅಡಿಗೆ ಕೆಲಸ ಕಲಿಯೋ ಅವಶ್ಯಕವೇ ಇಲ್ಲ.

**ನಾಗೇಂದ್ರರಾವ್ :—** ಇಲ್ಲದೇ ಏನ್ರೀ ! ನನ್ನ ವೈಫ್ ಇರೋ ವರಿಗೂ ಅಡಿಗೆಯೋನ ಕೈಲಿ ಅಡುಗೆಮಾಡಿಸುತ್ತಿದ್ದಳೇ ! ಛೇ ಛೇ ! ಬರಿಯ ಪರಿಚಾರಿಕೇಗಿದ್ದ ಅಷ್ಟೇ....ಆಗ ರಮಾ ಅಮ್ಮನ ಜೊತೇಲಿ ಕೆಲಸ ಮಾಡುತಾ ಸೊಗಸಾಗಿ ಅಡುಗೆ ಮಾಡೋದನ್ನ ಕಲಿತುಕೊಂಡಳು. ಆದರೆ, ನಾನೇ ಅವಳನ್ನ ಕೆಲಸಮಾಡಬೇಡಾಂತ ಹೇಳುತಿರುತೀನಿ ಯಾಕೇಂದರೆ ಮುಂದಿದ್ದೇ ಇದೆ—ಎಂಥಾ ಗಂಡ ಬರುತಾನೋ ; ಕಾಲೇಜ್ ಮೇಷ್ಟ್ರೇ, ಅಮಲ್ದಾರನೋ, ಜಮೀಂದಾರನೊ....ಯಾರೋ ಏನೋ ! ನೋಡೋಣ.

**ವಿಷಕಂಠಯ್ಯ :—** ನೀವು ಮೊದಲು ಹೇಳಿದ್ದೆ ನೆಮ್ಮದಿಯಾದ ಕಡೆ. ವರುಷಕ್ಕೆ ಆರು ತಿಂಗಳು ರಜ. ಮಿಕ್ಕ ದಿವಸಗಳಲ್ಲೂ ದಿನಕ್ಕೆರಡು ಘಂಟೆ

ಕೆಲಸ. ೧೧೨೮ ಹಂಡಿತಿರೂ ಸದಾ ಒಂದಿಗೇನೇ ಇರಬಹುದು. ಕಣ್ಣಿಗೆ ಬೇಕಾದ ಕಡೆ ಓಡಾಡಿಕೊಂಡು ಹಾಯಾಗಿರಬಹುದು.

**ನಾಗೇಂದ್ರರಾವ್** —ಅಂಥಾವನು ಯಾವನಾದರೂ ಇದಾನೇನೂ ನಿಮ್ಮ ಲಿಸ್ಟಿನಲ್ಲಿ?

**ವಿಷಕಂಠಯ್ಯ** — ಓಹೋ! ಸೊಗಸಾದ ವರ ಇದಾನೆ. (ಪಕ್ಕದಲ್ಲಿದ್ದ ಕೋಟಿನ ಜೇಬಿನಿಂದ ಕಟ್ಟಿದ ಫೋಟೋವನ್ನು ತೆಗೆದು) ನೋಡಿ ಫಸ್ಟ್‌ಕ್ಲಾಸ್ ವರ. ಸುಮಾರು ಇಪ್ಪತ್ತೊಂರು ವಯಸ್ಸು ಎಂ ಎ ಪ್ಯಾಸ್ ಮಾಡಿದಾನೆ (ಫೋಟೋವನ್ನು ನಾಗೇಂದ್ರರಾವ್ ಮತ್ತು ರಮಾಗೆ ಕಾಣುವಂತೆ ಮೇಜಿನ ಮೇಲಿಟ್ಟು) ಪ್ಯಾಸು ಅಂದರೆ ಫಸ್ಟ್ ಕ್ಲಾಸ್‌ನಲ್ಲಿ – ಸ್ಟೇಟ್‌ಗೇ ಎರಡನೇ ರ್‍ಯಾಂಕ್ ಜೊತೆಗೆ ಮೊದಲನೆ ಪಾರ್ಟ್‌ನಲ್ಲಿ ಚಿನ್ನದ ಮೆಡಲ್ ಬೇರೆ ಬಂದಿದೆ

**ನಾಗೇಂದ್ರರಾವ್** — ಈಶ್ವರಯ್ಯನಮಗ ಶಶಿಕುಮಾರ್ ಅಲ್ಲವೇನ್ರಿ? (ರಮಾ ಮುಖವನ್ನು ನೋಡುವನು. ಅವಳು ಫೋಟೋವನ್ನು ಓರೆಗಣ್ಣುಗಳಲ್ಲಿ ನೋಡುತ್ತಿರುವಳು. ವಿಷಕಂಠಯ್ಯನನ್ನು ಮುಗುಳು ನಗೆಯಿಂದ ನೋಡಿ) ನಾನು ಹುಡುಗನ್ನ ಎಷ್ಟೋ ಸಲ ನೋಡಿದೇನೆ ಲಕ್ಷಣವಾಗಿದಾನೆ. ಒಳ್ಳೆಯ ವಂಶ. ಗೋತ್ರ ಆಗುತ್ತೆ ಎಲ್ಲಾ ಸರಿಯೇ ಆದರೆ....

**ವಿಷಕಂಠಯ್ಯ** — ಆದರೇನು ರಾಯರೇ?

**ನಾಗೇಂದ್ರರಾವ್** —ನಮ್ಮ ರಮಾ ಮನಃಪೂರ್ವಕವಾಗಿ ಒಪ್ಪಿದಲ್ಲದೇ ನಾನು ಮದುವೆ ಯೋಚನೆ ಮಾಡೋಹಾಗೇ ಇಲ್ಲ

**ರಮಾ:**—ನಾನು ಒಪ್ಪೋದೇನಣ್ಣ ಮುಖ್ಯವಾಗಿ ಅವರೆಲ್ಲರೂ ನಮ್ಮ ಸಂಬಂದಕ್ಕೆ ಒಪ್ಪಬೇಕಲ್ಲ.

(ನಾಗೇಂದ್ರರಾಯನು ವಿಷಕಂಠಯ್ಯನ ಕಡೆ ನೋಡಿ ಮುಗುಳ್ನಗೆ ನಗುವನು.)

**ವಿಷಕಂಠಯ್ಯ** —ಅವರೆಲ್ಲಾ ಎಂದೋ ಒಪ್ಪಿದಾರಮ್ಮ ನೀನು ಒಪ್ಪೋದೊಂದೇ.

**ರಮಾ.** — ನೋಡದೆ ಮಾಡದೇ ಎಂದು ಒಪ್ಪಿಬಿಟ್ಟರು?

ವಿಷಕಂಠಯ್ಯ:—ಹಿಂದೇನೇ ನಾನು ನಿಮ್ಮ ತಂದೆಯಿಂದ ನಿನ್ನ ಫೋಟೋ ತಗೊಂಡು ಹೋಗಿ, ಅವರಿಗೆಲ್ಲಾ ತೋರಿಸಿ, ಅವರೂ ಎಲ್ಲಾ ಒಪ್ಪಿ, ಇನ್ನು ಒಬ್ಬರನ್ನೊಬ್ಬರು ಭೇಟಿ ಮಾಡಿ ಲಗ್ನ ಪತ್ರಿಕೆ ಮಾಡಿಕೊಳ್ಳೋ ಸ್ಟೇಜ್‌ನಲ್ಲಿರೋವಾಗ, ಆ ತುಂಕೂರಿನ ಸಾವುಕಾರ್ ಗೋಪೀನಾಥರಾವ್ ಇದ್ದಕ್ಕಿದ್ದ ಹಾಗೇ ಮಧ್ಯೆ ಬಂದು ಈಶ್ವರಯ್ಯನೋರ ಕಾಲು ಹಿಡಿದು ಕೊಂಡು ''ಸ್ವಾಮೀ! ನನಗೊಬ್ಬಳೇ ಮಗಳು ಅವಳಿಗೆ ಈ ವರುಷವೇನೇ ಗಂಡವಿದೆಯಂತೆ ಆದರೆ ಮದುವೆಯಾಗಿಬಿಟ್ಟರೆ ಬದುಕಿಕೊಳ್ಳುತ್ತಾಳಂತೆ ನೀವು ದೊಡ್ಡಮನಸ್ಸು ಮಾಡಿ ನನಗೆ ಮಗಳನ್ನ ಉಳಿಸಿಕೊಡೀ"ಂತ ಕಣ್ಣೀರು ಸುರಿಸುತಾ, ಗಂಡ ಹೆಂಡಿರಿಬ್ಬರೂ ಅನ್ನ ತಿನ್ನದೆ ಕೂತುಬಿಟ್ಟರು. ಕಡೆಗೆ ವಿಧಿಯಿಲ್ಲದೆ ಪಾಪ ದಯಾಳು ಈಶ್ವರಯ್ಯ—ಈ ಚಿನ್ನದಂಥ ಹುಡುಗ ಅಪ್ಪನ ಮಾತು ತೆಗೆದುಹಾಕೋನಲ್ಲ—ಆರ್ಡರ್ ಮಾಡಿದ್ದೇ ತಾಳಿ ಕಟ್ಟಿಸೇ ಬಿಟ್ಟರು (ಉಮಾ ಗಲ್ಲಕ್ಕೆ ಕೈಕೊಟ್ಟು ಕುತೂಹಲದಿಂದ ಕೇಳುತ್ತಿರುವಳು.)

ವಿಷಕಂಠಯ್ಯ·—ಏನು ಮಾಡಿದರೇನು ಪ್ರಯೋಜನ ವಿಧಿ ನಿಯಮ ಆ ಹುಡುಗಿ ಹೊಟ್ಟೇ ನೋವು ತಡೆಯಲಾರದೆ ಮದುವೆಯಾದ ಐದಾರು ತಿಂಗಳಲ್ಲೇ ಇದ್ದಕ್ಕಿದ್ದ ಹಾಗೇ ಬಾವಿಗೆ ಬಿದ್ದುಬಿಟ್ಟಿತು. ಸರಿ! ಆ ಮದುವೆಯ ನಾಟಕ ನಾಟಕವಾಗಿಯೇ ಹೋಯಿತು

ರಮಾ.—ಅಯ್ಯೋ ಪಾಪ! .......ಏನಣ್ಣಾ! ಈ ಜಾತಕ, ಗಂಡಾಂತರ, ಅನಿಷ್ಟ ಇವೆಲ್ಲಾ ನಿಜಾನೇ?

ನಾಗೇಂದ್ರರಾವ್ —ಯಾರಿಗೆ ಗೊತ್ತು ರಮಾ! ನಿಮ್ಮಮ್ಮನ ಜಾತಕ ನೋಡಿದೋರು ಈಗಲೂ ಎಂಭತ್ತು ವರುಷ ಆಯುಸ್ಸೇ ಹೇಳು ತಾರಲ್ಲ; ಅದಕ್ಕೇನು ಹೇಳೋದು ... ...ಇದು ನಿಜವೂ ಇರಬಹುದು— ಸುಳ್ಳೂ ಇರಬಹುದು ಮುಖ್ಯವಾಗಿ ಮನುಷ್ಯನಿಗೆ ಅವನ ಭವಿಷ್ಯ ಸರಿ ಯಾಗಿ ತಿಳೀದೇ ಇದ್ದರೇನೇ, ನಿತ್ಯ ಹೊಸ ಹುರುಪಿನಿಂದ ಕೆಲಸ ಮಾಡು ತ್ತಿರುತಾನೇಂತ ನನಗನಿಸುತ್ತೆ.

ವಿಷಕಂಠಯ್ಯ:—ಇಗೋ ಈ ಮದುವೆ ನಾಟಕದಿಂದ ನಿಜವಾದ ನಿಮ್ಮ ಮದುವೆ ತಡವಾಯ್ತು ಅಷ್ಟೆ

**ನಾಗೇಂದ್ರರಾವ್** — ಕೇಳಿದೆಯಾ ರಮಾ ಕಥೇನಾ ?

**ರಮಾ** — ಕೇಳಿದೆ ಕಾಣಣ್ಣಾ !....ಆದರೂ ಇನ್ನೊಬ್ಬರ ಸುಖಕ್ಕೋಸ್ಕರ ಹೀಗೆ ಬಲಿಯಾಗೋರೂ ಇದಾರೆಯೇಂತನಿಸುತ್ತೆ.

**ವಿಷಕಂಠಯ್ಯ**:— ಯಾರ ಕಣ್ಣಲ್ಲಾದರೂ ನೀರು ಕಂಡರೆ ಕರಗಿ ಹೋಗೋ ಅಂಥ ಹೆಂಗರಳು ಹುಡುಗ ಶಶಿಕುಮಾರ್. ನಿಮಗೆ ಗೊತ್ತಿಲ್ಲವೇ ರಾಯರೇ— ಎರಡು ವರುಷದ ಹಿಂದೆ ಅವನ ಸ್ನೇಹಿತ ಅನಂತೂನ್ನೋ ಹುಡುಗನ ಹಳ್ಳಿಗೆ ಹೋಗಿದ್ದೋನು, ಅವನ ತಬ್ಬಲಿ ತಂಗೀನ ಮದುವೆಯಾಗೋರು ಯಾರೂ ಇಲ್ಲ— ಬಡತನದ ಹಳ್ಳೀ ಹುಡುಗಿಯಾದ್ದರಿಂದ— ಅಂತ ಕೇಳಿದ್ದೇನೆ. ನಾನೇ ಮದುವೆಯಾಗುತೀನಿಂತ ಕುಳಿತುಬಿಟ್ಟಿದ್ದ

**ರಮಾ**. — ಹಾಗಾದರೆ ಇನ್ನೂ ಎಷ್ಟು ಮದುವೆಗಳಾಗಬೇಕೂಂತಿದಾರೋ ?

**ವಿಷಕಂಠಯ್ಯ** — ಎಷ್ಟು ಮದುವೆಯೇನು ಬಂತು ? ಆ ಹುಡುಗನ ಸ್ವಭಾವಕ್ಕೆ ಹೇಳಿದೆ ಆಮೇಲೆ ನಾನು ಚೆನ್ನಾಗಿ ಬುದ್ಧಿ ಹೇಳಿ, "ಅಪ್ಪಾ' ಪ್ರಪಂಚದಲ್ಲಿ ಅವರವರ ಕಷ್ಟಕ್ಕೆ ಅವರವರೇ ಗುರಿ ಎಲ್ಲಾರ ಕಷ್ಟಕ್ಕೂ ನೀನು ಆಗುತೀನಿಂತ ಹೋಗೋದು ಹುಚ್ಚುತನ ನಿನ್ನ ವಿದ್ಯಾಬುದ್ಧಿ ಅಂತಸ್ತಿಗೆ ಸರಿಯಾದ ಹೆಣ್ಣನ್ನ ನೀನು ನೋಡಿ ಮಾಡಿಕೋಬೇಕೂಂ''ತ ಹೇಳಿ ನಿನ್ನ ಫೋಟೋ ತೋರಿಸಿ ಒಪ್ಪಿಸಿದ್ದೆ

(ರಮಾ ತಂದೆಯ ಕಡೆಗೆ ನೋಡುವಳು.)

**ರಮಾ**:— ಈ ಫೋಟೋಗಳನ್ನೋಡಿ, ವರ್ಣನೆಗಳನ್ನ ಕೇಳಿ, ಮದುವೆಯಾಗೋದು ಸರಿಯಲ್ಲಾಂತ ಕಾಣುತ್ತಣ್ಣ

**ನಾಗೇಂದ್ರರಾವ್**. — ಹಾಗಾದರೆ ನಾವೇ ಅವರ ಮನೆಗೆ ಹೋಗಿ ಬಂದುಬಿಡೋಣ ಒಪ್ಪೊತ್ತು ! ಏನು ಮಿಸ್ಟರ್ ವಿಷಕಂಠರಾವ್ ?

**ವಿಷಕಂಠಯ್ಯ** — ಆಗಬಹುದು ಅಗತ್ಯವಾಗಿ ಆಗಬಹುದು. ಆದರೆ....

**ರಮಾ**:— ರವೀಂದ್ರನೂ ಬೊಂಬಾಯಿಂದ ಬರಲೇಳಣ್ಣ ; ಇಷ್ಟು ಅವಸರವೇನು ?

**ನಾಗೇಂದ್ರರಾವ್:**—ಏನು ಮಿಸ್ಟರ್ ವಿಷಕಂಠರಾವ್ ? ನನ್ನ ಮಗನೂ ಬೊಂಬಾಯಿಂದ ಬರಲೀಂತ ರಮಾ ಉದ್ದೇಶ ಆದರೆ ಅವನು ಬರೋದು ಕ್ರಿಸ್‌ಮಿಸ್ ರಜಕ್ಕೇನೇ, ಇನ್ನೂ ಒಂದೂವರೆ ಎರಡು ತಿಂಗಳ ವಿಚಾರ.

**ವಿಷಕಂಠರಾವ್** —ಅವರು ಅಷ್ಟು ದಿವಸ ತಡೆದಿರಲಾರರು. ಯಾಕೇಂದರೆ .. ವಿಚಾರ ತಮಗೆ ಗೊತ್ತೇ ಇದೆ

**ನಾಗೇಂದ್ರರಾವ್:**—ಆ ವಿಚಾರಾನ ನೀವೇ ರಮಾಗೆ ಹೇಳಿಬಿಡಿ.

**ರಮಾ:**—ಏನು ವಿಚಾರಾಣ್ಣಾ ಅದೂ ?

**ನಾಗೇಂದ್ರರಾವ್** —ಅವರು ಹೇಳುತಾರೆ , ಕೇಳು

**ರಮಾ** — ನೀನೇ ಹೇಳಿಬಿಡಣ್ಣಾ

**ನಾಗೇಂದ್ರರಾವ್** —ಅವರು ಪ್ರತ್ಯಕ್ಷವಾಗಿ ನೋಡಿದೋರು , ಕೋಜಂಟಾಗಿ, ಸರಿಯಾಗಿ ಹೇಳುತ್ತಾರೆ ಹೇಳಿ ಮಿಸ್ಟರ್ ವಿಷಕಂಠರಾವ್.

**ವಿಷಕಂಠರಾವ್** —ಏನೂ ಇಲ್ಲ ಆ ಹುಡುಗಿ ಬಾವಿಗೆ ಬಿದ್ದದ್ದನ್ನು ಕೇಳಿ 'ಶಶೀ'ಗೆ ಷಾಕ್ ಆದ ಹಾಗೆ ಆಗಿಬಿಟ್ಟು, ಆವತ್ತಿನಿಂದ ಅವನು ತನ್ನ ರೂಮು ಬಿಟ್ಟು ಹೊರಕ್ಕೆ ಬರೊಲ್ಲ ಸದಾ ಆ ಹುಡುಗಿಯ ಹೆಸರು ಹಿಡಿದು 'ಉಮಾ, ಉಮಾ'ಂತಿರುತ್ತಾನೆ , ಅಷ್ಟೇ.

**ನಾಗೇಂದ್ರರಾವ್** —ಅಲ್ಲರೀ ; ಅವನು ತಾನೇ ಉಮಾಂತ ಅಂದು ಕೊಂಡಿದಾನೇಂತ ನನ್ನ ಕೈಲಿ ಹೇಳಿದಿರೀ ?

**ವಿಷಕಂಠರಾವ್** —ಅದೇ ರಾಯರೇ ! ಆ ಹುಡುಗನಿಗೆ ಆ ಹುಡುಗಿ ಹೋದ ಷಾಕ್‌ನಿಂದ ಭ್ರಮೆಯಾಗಿಬಿಟ್ಟಿದೆ ಅದಕ್ಕೆ ಡಾಕ್ಟರು ಬೇಗ ಸರಿಯಾದ ಹೆಣ್ಣು ನೋಡಿ ಮದುವೆ ಮಾಡಿಬಿಟ್ಟರೆ ಸರಿಹೋಗುತಾನೇಂದಿದಾರೆ. ಆದ್ದರಿಂದ ಅವರು ಆತರವಾಗಿದಾರೆ.

**ರಮಾ** —ಅಣ್ಣಾ ! ಏನೋ ವಿಚಿತ್ರವಾಗಿದೆಯೆಲ್ಲಾ ವಿಚಾರ ?

**ನಾಗೇಂದ್ರರಾವ್** —ನಾನೂ ಡಾಕ್ಟರ್ ಶಿವರಾಂನ ಕನ್‌ಸಲ್ಟ್ ಮಾಡಿದೆ. ಷಾಕ್‌ಇಂದ ಹಾಗಾಗಿದ್ದರೆ ಮುಂದೆ ಸರಿಹೋಗಬಹುದೂಂದರು.

**ರಮಾ**—ಈ ಬಹುದುಗಳನ್ನ ನಂಬಿಕೊಂಡು ಅಣ್ಣಾ! ರವೀಂದ್ರ ಬರಲಣ್ಣಾ, ಆಮೇಲೆ ನೋಡೋಣ.

**ನಾಗೇಂದ್ರರಾವ್**—ಅದುವರೆಗೂ ಅವರು ಕಾದಿರಬೇಕಲ್ಲಮ್ಮಾ, ಪಾಪ! ಈ ತರುಣದಲ್ಲೇ ಮದುವೆ ಮಾಡಿದರೆ, ಅವರಿಗೂ ಒಬ್ಬನೇ ಮಗ ಸರಿಹೋದಾನೂಂತ ಆವರಾತುರ

**ವಿಷಕಂಠಯ್ಯ.**—ಆ ಹುಡುಗಿ ಹೋಯ್ತೂಂತ ಪೇಪರಿನಲ್ಲಿ ಬಂದ ವಾರನೇ ದಿವಸದಿಂದ, ಆಗಲೇ ಏಳೆಂಟು ಹೆಣ್ಣುಗಳು ಬಂದಿವೆ ಆ ತಂದೆ ಗಳೋ ಹಿಂಸೆ ಮಾಡುತಿವಾರೆ. ಈಶ್ವರಯ್ಯನೋರು ಎಲ್ಲಾರಿಗೂ ನನ್ನನ್ನ ತೋರಿಸಿ ಛೂಬಿಟ್ಟಿದಾರೆ ನಾನು ಹಿಂದೆ ನಾಗೇಂದ್ರರಾಯರಿಗೆ ಮಾತು ಕೊಟ್ಟಿದ್ದರಿಂದ ಈಗ ಓಡಿ ಬಂದೆ ಅಷ್ಟೆ ಅವರು ಕಾಯೋಸ್ಕಿತೀಲಿಲ್ಲ

**ನಾಗೇಂದ್ರರಾವ್**—ಅಲ್ಲದೆ ರಮಾ, ನಾನು ನೀನು ಒಪ್ಪಿದ ಮೇಲೆ ರವೀಂದ್ರನೂ ಒಪ್ಪೇ ಒಪ್ಪುತ್ತಾನೆ! ಅದರಲ್ಲಿ ಅನುಮಾನವೇನು?

**ರಮಾ**—ಏನೋ ನನ್ನ ಮನಸ್ಸಿಗೆ ನೆಮ್ಮದಿ ಇಲ್ಲಣ್ಣಾ!

**ನಾಗೇಂದ್ರರಾವ್**—ಹುಡುಗನ್ನೇನೋ ನಾನು ಹಿಂದೆ ನೋಡಿದ್ದೆ ಲಕ್ಷಣವಾಗಿದ್ದಾನೆ ಒಳ್ಳೇ ಹುಡುಗಾಂತ ಕಾಲೇಜ್ ಪ್ರೊಫೆಸರ್ಸ್ ಇಂದ ಕೇಳಿದ್ದೆ. ಎಲ್ಲಾ ಸರಿಯೇ ಬೇಕಾದರೆ ನಾನೂ ನೀನೂ ಹೋಗಿ ನೋಡಿಕೊಂಡು ಬಂದುಬಿಡೋಣ ರಮಾ!

**ರಮಾ**—ಅಣ್ಣಾ! ಎಲ್ಲಾ ಸರೀಂತ ಹೇಳಿ ಬುದ್ಧಿ ಭ್ರಮಣೆಯಾಗಿ ರೋರ ಕೈಲಿ ತಾಳಿ ಕಟ್ಟಿಸಿಕೊಂಡಮೇಲೆ, ಅವರು ಹುಚ್ಚಾಗೇ ಇದ್ದರೆ ಆ ತಾಳೀನ ಅವರಿಗೆ ಹಿಂತಿರುಗಿಸಿ ಕೊಟ್ಟು ಬರೋಕಾಗುತ್ತೆಯೇ?

**ನಾಗೇಂದ್ರರಾವ್**—ಆದರೆ ಮದುವೆಯಾಗುತ್ತಿದ್ದ ಹಾಗೇ ಬುದ್ಧಿ ಸರಿಹೋಗುತ್ತೆ ಅಂತ ತಾನೇ ಡಾಕ್ಟರು ಹೇಳಿರೋದು

**ರಮಾ**—ಒಂದು ಸಮಯ ಸರಿಹೋಗದೆ ಇದ್ದರೆ ಗತಿಯೇನಣ್ಣಾ?

**ವಿಷಕಂಠಯ್ಯ:**—ಅಂಥಾ ಹುಡುಗನಲ್ಲಮ್ಮಾ! ಹಾಗೆ ನಂಬಿದ ಹೆಂಡತೀನ ಕೈಬಿಡೋನೇ ಅಲ್ಲಾ ಒಳ್ಳೇ ಪ್ರೇಮಿ

**ರಮಾ** — ಇದೇನಣ್ಣಾ ಇವರ ಮಾತು ?

**ನಾಗೇಂದ್ರರಾವ್** — ಅವರು ಹೇಳೋದೂ, ಆ ಹುಡುಗಿ ನೆನೆಸಿಕೊಂಡು ಹಾಗಾಗಿದಾನೆ ಹುಡುಗ. ಈಗ ನಿನ್ನ ಸಂಗಡ ಮದುವೆಯಾಗಿಬಿಟ್ಟರೆ ಆ ಪ್ರೇಮ ನಿನ್ನ ಕಡೆಗೇ ತಿರುಗಿ ಸರಿಹೋಗುತಾನೇಂತ—ಹೌದೇನ್ರಿ ಮಿಸ್ಟರ್ ವಿಷಕಂಠರಾವ್ ?

**ವಿಷಕಂಠಯ್ಯ** —ಹೌದು ರಾಯರೇ ! ಅದೇ !

**ರಮಾ** —ಏನೋ ಅಣ್ಣಾ ! ಈ ರಿಸ್ಕ್ ತಗೊಳ್ಳೋದು ನನಗೆ ಸರಿಯಾಗಿ ಕಾಣಿಸಲಿಲ್ಲಾ ಣ್ಣಾ (ಮೇಲೇಳುವಳು)

**ನಾಗೇಂದ್ರರಾವ್:**—ನೋಡು ರಮಾ ! ನಮ್ಮ ಕಂಡೀಷನ್ಸೂ ನಾವು ಸ್ವಲ್ಪ ನೋಡಬೇಕು ಅಲ್ಲದೇ ಈಗ ವಿಚಾರ ಹ್ಯಾಗಾಯ್ತೂಂತಿ "ಮದುವೆಯಾಗದೇ ಹುಚ್ಚು ಬಿಡದೂ, ಹುಚ್ಚು ಬಿಡದೆ ಮದುವೆ ಯಾಗದೂ" ಅನ್ನೋಹಾಗಿದೆ-ದಿ ನೇಮ್ ಆಫ್ ದಟ್ ಕರ್ಸೆಡ್ ಡಿಸೀಸ್ ಈಸ್ ಹಾಂಟಿಂಗ್ ಅವರ್ ಫ್ಯಾಮಿಲಿ. ಈವರ್ ದಟ್ ಸುಬ್ರಹ್ಮಣ್ಯಂಸ್ ಸರ್ ಸೀಮ್ಸ್ಟು ಹ್ಯಾವ್ ರೆಫ್ಯೂಸ್ಡ್ ಕನೆಕ್ಷನ್ ಆನ್ ದಿ ಸೇಮ್ ಅಕೌಂಟ್

**ವಿಷಕಂಠಯ್ಯ** —ಏನು ರಾಯರೇ ನೀವು ಹೇಳುತಿರೋದು ? ಸುಬ್ರಹ್ಮಣ್ಯಂ ಅಂದರೆ ಮಂಡ್ಯ ಸ್ಟೇಷನ್ ಮೇಷ್ಟ್ರಿದಾರಲ್ಲ ನಿಮ್ಮ ಜನ ಅವರೇ ?

**ನಾಗೇಂದ್ರರಾವ್.**—ಅವರೂ ನಿಮಗೆ ಗೊತ್ತೇನ್ರೀ ?

**ವಿಷಕಂಠಯ್ಯ** —ನಿಮ್ಮ ಜನ ಯಾರು ಗೊತ್ತಿಲ್ಲ ನನಗೆ ರಾಯರೇ ? ಅವರಿಗೂ ಈಶ್ವರಯ್ಯನೋರಿಗೂ ಯಾವ ಕನೆಕ್ಷನ್ನೂ ಇಲ್ಲವಲ್ಲಾ

**ನಾಗೇಂದ್ರರಾವ್.**—ಕನೆಕ್ಷನ್ ವಿಚಾರವಲ್ಲ ನಾವೇನೋ ಮಾತಾಡಿಕೊಳ್ಳುತ್ತಾ ಇದ್ದೆವು

**ವಿಷಕಂಠಯ್ಯ** —ಆ ಸುಬ್ರಹ್ಮಣ್ಯಂ ಮಗಿದಾನೆ-ಬಿ. ಎಸ್‌ಗೆ ಓದುತಿರೋನೂಂತಲೇ ?

**ನಾಗೇಂದ್ರರಾವ್.**—ಏನವನ ಸಮಾಚಾರ ?

**ವಿಷಕಂಠಯ್ಯ:**—ಒಂದೊಂದು ಹೆಣ್ಣಿಗೆ ಒಂದೊಂದು ಕೊಂಕು

ಹಚ್ಚಿ ಒಲ್ಲೇಂತಾಂತಿದಾರೆ ರಾಯರೇ ಅಂದ ಹಾಗೆ ನಿಮ್ಮ ಮಗಳನ್ನೂ ನೋಡಿದ್ದರಂತೆ ?

**ನಾಗೇಂದ್ರರಾವ್.**— ಹಂ ಆಮೇಲೆ ?

**ವಿಷಕಂಠಯ್ಯ** — ಆಮೇಲೆ 'ಹುಡುಗಿ ಶಾನೆ ಓದಿಬಿಟ್ಟಿದೆ ಅಲ್ಲದೆ ಅವರ ತಾಯಿ ಕ್ಷಯದಲ್ಲಿ ಹೋಗಿಬಿಟ್ಟರಂತೆ ಆ ಹುಡುಗೀನ ಯಾರು ಮದುವೆಯಾಗುತಾರೇ'ಂತಂದುಬಿಟ್ಟರಂತೆ ?

**ನಾಗೇಂದ್ರರಾವ್** —(ರಮಾ ತಲೆ ತಗ್ಗಿಸಿರುವುದನ್ನು ಕಂಡು) ರೆಚಡ್ ನೊನ್ಸೈಟ! ಈ ಹಾಳು ಜನ ಬಾಯಿಗೆ ಬಂದಹಾಗಿ ಬೊಗಳೋದು; ಬಾಯಿಗೆ ಬಂದಹಾಗೆ ಇನ್ನೊಬ್ಬರನ್ನು ದೂರೋದು ಮಿಸ್ಟರ್ ವಿಷಕಂಠ ರಾವ್! ಯಾರು ಹೇಳುತಾರ್ರೀ ಇವರಿಗೆಲ್ಲಾ ಈ ಸುಳ್ಳುಪೊಳ್ಳು ಪುರಾಣಾನೆಲ್ಲಾ ?

**ವಿಷಕಂಠಯ್ಯ** —ಹೀಗೆ ಅಪಪ್ರಚಾರ ಮಾಡಿಬಿಡುತಾರೆ ರಾಯರೇ! ಆಮೇಲೆ ಆ ಹೆಣ್ಣು ಮಕ್ಕಳು ಮದುವೆಯೇ ಇಲ್ಲದೇ ಇರಬೇಕು ಇಲ್ಲದೆ ಹೋದರೇ ಆ ಸೂರ್ಯನಾರಾಯಣರ ಮಗಳ ಹಾಗೆ ಮೂವತ್ತನೇ ವಯಸ್ಸಿಗೆ ಯಾವನೋ ನಾಯರ್‌ನ ಮದುವೆಯಾಗಿ ಪಂಜಾಬ್‌ಗೆ ಹೊರಟು ಹೋಗ ಬೇಕಾಗುತ್ತೆ ಅಷ್ಟೆ

**ನಾಗೇಂದ್ರರಾವ್** — ಈ ಹಾಳು ಅನಿಷ್ಟ ಮಾತುಕತೆಗಳನ್ನೆಲ್ಲಾ ಕೇಳಿಕೊಂಡು ವ್ಯಥ ಪಡೋದಕ್ಕೆ ಬದಲು, ಐ ಥಿಂಕ್ ವಿ ಬೆಟರ್ ಟೇಕ್ ದಿಸ್ ರಿಸ್ಕ್ ಏನು ರಮಾ ?

**ರಮಾ.**— ನನಗೊಂದೂ ತೋಚದಣ್ಣಾ! ನಿನ್ನಿಷ್ಟ ಬಂದ ಹಾಗೆ ಮಾಡು

(ಒಳಕ್ಕೆ ಹೊರಟುಹೋಗುವಳು)

**ನಾಗೇಂದ್ರರಾವ್** — ಈ ಹಳ್ಳಿ ಪುರಾಣದ ಸುಳ್ಳುಪೊಳ್ಳೆಲ್ಲಾ ಹ್ಯಾಗರೀ ಊರಿಂದೂರಿಗೆ ಹೋಗುತ್ತೆ ?

**ವಿಷಕಂಠಯ್ಯ** —ಜನ ಸೇರಿದರೆ, ಅದರಲ್ಲೂ ಹೆಂಗಸರು, ಒಬ್ಬರಿ ಗೊಬ್ಬರು ಕಂಡ ಮನೆ ಕಿಂವದಂತಿಗಳನ್ನ ಮಾತಾಡಿತಾನೇ ಹೊಟ್ಟೆ

ತುಂಬಿಕೊಳ್ಳೋದು. ಅಂತೂ ಸ್ಟೇರ್ಷ ಮೇಷ್ಟ್ರರ ಮನೆಯೋರ ಮಾತು ಕೇಳಿದಾರಭ್ಯವಂತೂ ನನಗೆ 'ರಮಾ' ಮದುವೇದು ತುಂಬಾ ಯೋಚನೆ ಯಾಗಿಬಿಟ್ಟಿದೆ ರಾಯರೇ! ನೀವು ನನಗೇನೂ ಕೊಡದಿದ್ದರೂ ಚಿಂತೆಯಿಲ್ಲ— ಪಾಪ ಬೆಳೆದ ಹುಡುಗಿ—ತಾಯಿ ಇಲ್ಲದೆ ಮನೇಲಿ ಒಂಟಿಯಾಗಿರೋದು— ಬೇಗೊಂದುಕಡೆ ಮದುವೆಯಾಗಿಬಿಟ್ಟರೆ ಸಾಕು. ಇಲ್ಲದಿದ್ದರೆ ಮುಂದಕ್ಕೆ ಇನ್ನೂ ಏನೇನು ಅಪವಾದಗಳು ತಂದುಬಿಟ್ಟಾರೋ ತಾಯಿಲ್ಲದ ಹುಡುಗೀಂತ ನನ್ನ ಮನಸ್ಸು ಕುದೀತಿದೆ ರಾಯರೇ!

**ನಾಗೇಂದ್ರರಾವ್** —ಅಪವಾದಾ? ಏನ್ರೀ ಅದು?

**ವಿಷಕಂಠಯ್ಯ** —ಜನದ ಬಾಯಿ ಕಟ್ಟೋರು ಯಾರು ರಾಯರೇ? ಮನೇಲಿ ಬೆಳೆದ ಹುಡುಗಿ ಒಂಟಿಯಾಗಿ, ನೀವು ಸರ್ಕೀಟು ಹೋಗು ತಿರುತೀರಾ.... ...

**ನಾಗೇಂದ್ರರಾವ್** — ಬಿಡಿಬಿಡಿ—ಪಾಪಿ ಜನದ ಮಾತು ಬೇಡ. ನಡೀರಿ ಆಫೀಸ್ ರೂಮಿಗೆ ಹೋಗಿ, ನಾಳೇನೇ ರಮಾ ಸಂಗಡ ಹುಡುಗನ್ನ ನೋಡೋಕೇರ್ಪಾಟು ಮಾಡೋಣ

**ವಿಷಕಂಠಯ್ಯ**—ಹುಡುಗನ್ನ ಈಗಿನ ಸ್ಥಿತೀಲಿ ನೋಡಿದರೆ ನಿಮ್ಮ ಮಗಳು ಒಪ್ಪಿಯಾಳೇಂತ

**ನಾಗೇಂದ್ರರಾವ್**:—ನನ್ನ ಮಾತು ತೆಗೆದು ಹಾಕೋ ಮಗಳಲ್ಲರೀ ಅವಳೂ ಅಲ್ಲದೆ ಅದು ಸರಿಹೋಗೋ ಅಂಥ ಬುದ್ಧಿ ಭ್ರಮಣೇನ್ನೋದು ನನ್ನ ಮನಸ್ಸಿಗೂ ನಂಬಿಕೆಯಾಗಬೇಕ್ರೀ.

**ವಿಷಕಂಠಯ್ಯ**.— (ಮೇಲೆದ್ದು) ಆಗಲಿ ರಾಯರೇ! ನಡೀರಿ! ನಾಳೇನೇ ಹೋಗಿ ನೋಡಿಕೊಂಡು ಬಂದುಬಿಡೋಣ. ನೀವಂತು ನಿಮ್ಮ ಮಗಳ ಮದುವೇನ ಬೇಗ ಮಾಡೋ ಪ್ರಯತ್ನ ಮಾಡಬೇಕು. ಕಾಲಸ್ಥಿತಿ ತುಂಬಾ ಹೊಲಸಾಗುತ್ತಾ ಇದೆ

**ನಾಗೇಂದ್ರರಾವ್**.—ಕಾಲವಲ್ಲರೀ ಹೊಲಸಾಗುತ್ತಾ ಇರೋದು. (ಎದ್ದು ಹೊರಡುತ್ತಾ) ನಮ್ಮ ಜನ ಹೊಲಸಾಗುತ್ತಾ ಇದಾರೇನ್ರಿ

**(ಒಳಕ್ಕೆ ಹೋಗುವನು. ವಿಷಕಂಠಯ್ಯನು ಕೋಟು ಹಿಡಿದು ಹಿಂಬಾಲಿಸುವನು.)**

## ಅಂಕ ೩ - ದೃಶ್ಯ ೫

[ಈಶ್ವರಯ್ಯನ ಮನೆಯಿಂದ ಸ್ವಲ್ಪ ದೂರದ ಮಾವಿನ ತೋಪು. ಈಶ್ವ ರಯ್ಯ ಮತ್ತು ವಿಷಕಂಠಯ್ಯ ಇಬ್ಬರೂ ಮಾತನಾಡುತ್ತಿದ್ದಾರೆ]

**ವಿಷಕಂಠಯ್ಯ**—ಇಲ್ಲಾ ಸ್ವಾಮಿ! ನನ್ನ ಮಾತು ನಂಬೀ, ನಾನು ನೂರು ಸಲ ಹೇಳಿದೆ. ಅವರ ಪಟ್ಟು ಅವರು ಬಿಡಲಿಲ್ಲ. "ನಾನು ಫಸ್ಟ್ ಹ್ಯಾಂಡ್ ವರನಿಗೆ ವರದಕ್ಷಿಣೆ ಕೊಡುತೇನೇಂತ ಹೇಳಿದ್ದೆನೇ ಹೊರತು, ಸೆಕೆಂಡ್ ಹ್ಯಾಂಡ್ ವರನಿಗಲ್ಲ ಹೋಗ್ಲೀ, ಸೆಕೆಂಡ್ ಹ್ಯಾಂಡ್ ವರನಿಗೇ ಸ್ವಲ್ಪನಾದರೂ ಕೊಡೋಣಾಂದರೆ ಅವನಿಗೆ ಬುದ್ಧಿ ವಿಕಲ್ಪವಾಗಿದೆ ನಮ್ಮ ರಮಾನ ಮದುವೆ ಮಾಡಿಕೊಡೋದೇ ಹೆಚ್ಚೂ''ಂದಬಿಟ್ಟರಲ್ಲಾ ಸ್ವಾಮೀ ಹಾಗೂ ಆ ಹುಡುಗಿ ಮನಃಪೂರ್ವಕ ಒಪ್ಪಿರಲಿಲ್ಲ. ಏನೋ ತಂದೆ ಬಲ ವಂತಕ್ಕೆ ಸುಮ್ಮನಿದೆ ಅಷ್ಟೆ

**ಈಶ್ವರಯ್ಯ**—ಅಲ್ಲಯ್ಯಾ! ನಿನ್ನ ಪ್ಲಾನು ಬರುಬರುತ್ತಾ ಎಲ್ಲಿಗೆ ಬಂದುಬಿಟ್ಟಿತು. "ಇಲ್ಲೈದು ಸಾವಿರ ರೂಪಾಯಿ ತಗೊಳ್ಳೀ—ಅಲ್ಲೈದು ಸಾವಿರ ರೂಪಾಯಿ ತಗೊಳ್ಳೀ ನಿಮ್ಮ ಮಗನಿಗೆ ಹೊಲ, ಗದ್ದೆ, ಮನೆ ಎಲ್ಲಾ ಆಸ್ತಿ ಮಾಡಿಟ್ಟುಬಿಡೀ"ಂತ ಬಾಯಿ ತುಂಬಾ ಹೇಳಿದೋನು ನೋಡಿದೆಯಾ ಈಗ ಯಾವ ಗತೀಗೆ ತಂದುಬಿಟ್ಟೆ!

**ವಿಷಕಂಠಯ್ಯ**—ನನಗೇನು ಗೊತ್ತು ಸ್ವಾಮಿ, ಒಂದು ಮದುವೇ ಗೇನೇ ನಿಮ್ಮ ಹುಡುಗನಿಗೆ ಬುದ್ಧಿ ಕೆಟ್ಟು ಹೋಗುತ್ತೇಂತ?

**ಈಶ್ವರಯ್ಯ**—ಅದಕ್ಕೋಸ್ಕರ ನಾಗೇಂದ್ರರಾವ್ ವರದಕ್ಷಿಣೆ ಅರ್ಧ ಮಾಡಲಿಲ್ಲವಲ್ಲ, ಎರಡನೇಯ ಮದುವೇಂತ ತಾನೇ ಮಾಡಿದ್ದು?

**ವಿಷಕಂಠಯ್ಯ:**—ಹೌದು ಸ್ವಾಮೀ! ಎರಡನೇ ಮದುವೇಂತಾನೇ ಅವರು ಮಾತು ಮಾತಿಗೂ "ಸೆಕೆಂಡ್ ಹ್ಯಾಂಡ್ ವರ—ಸೆಕೆಂಡ್ ಹ್ಯಾಂಡ್ ವರ" ಅಂತ ಅಂತಿದ್ದದ್ದು.

**ಈಶ್ವರಯ್ಯ:**—ಮತ್ತೆ ನೀನಿವರ ಪ್ರಸ್ತಾಪ ಮಾಡಿದ ಮೊದಲನೇ ದಿನದ ಮಾತು ಸುಳ್ಳೇ?

ವಿಷಕಂಠಯ್ಯ:—ಹೀಗೆ ಮಾಡುತಾರೇಂತ ನನಗೇನು ಗೊತ್ತು ಸ್ವಾಮೀ. ಏನೋ ನಿಮಗೆ ಅನುಕೂಲವಾಗಲೀನ್ನೋ ಬುದ್ಧಿಯಿಂದ ಮಾಡಿದೆ. ಆದರೆ ನಮ್ಮಿಷ್ಟದಂತೇನೇ ಎಲ್ಲಾ ಜರುಗಿಬಿಟ್ಟರೆ ಪ್ರಪಂಚದಲ್ಲಿ ದೇವರು ಯಾಕೆ ಸ್ವಾಮೀ ಇನ್ನು!

ಈಶ್ವರಯ್ಯ:—ನಿನ್ನ ಭಾಗಕ್ಕವನು ಇದಾನೇಂತ ತಿಳಿದಿದೀಯಾ?

ವಿಷಕಂಠಯ್ಯ:—ಅಂದರೇ?

ಈಶ್ವರಯ್ಯ:—ನಮ್ಮಂಥ ಪಾಪಿಗಳ ಭಾಗಕ್ಕೆ ದೇವರೆಲ್ಲಯ್ಯಾಬಂತು?

ವಿಷಕಂಠಯ್ಯ—ಅದು ಯಾಕೆ ಸಲಸಲಕ್ಕೂ ನಿಮ್ಮನ್ನ 'ಪಾಪೀ! ಪಾಪೀ!' ಅಂದುಕೋತೀರಾ!!

ಈಶ್ವರಯ್ಯ—ನೀನು ಪಾಪಿ, ನಿನ್ನ ಮಾತು ಕೇಳಿ ಮನೆ ಹಾಳು ಮಾಡಿಕೊಳ್ಳುತಿರೋನು ನಾನೂ ಪಾಪಿಯೇ.

ವಿಷಕಂಠಯ್ಯ—ನೀವು ಹೀಗೆ ಹಗಲೆಲ್ಲಾ ಬೈಯ್ಯುತಾ ಇದ್ದರೆ ನಾನು ನಿಮ್ಮ ವ್ಯವಹಾರ ನಿಮಗೇ ಬಿಟ್ಟು ಹೋಗುತೇನೆ ಅಷ್ಟೆ

ಈಶ್ವರಯ್ಯ—ನೀನೀ ಅರ್ಧಾಂತಕದಲ್ಲಿ ನರಕಕ್ಕೆ ಹೋದರೂ ನುಗ್ಗಿ ಬಂದು ಹಿಡಿದುಕೊಂಡು ಬರುತೀನೀ, ಆ ಮಾತು ಬಿಡು. ನೀನು ಮೊದಲಿಂದ ನಿನ್ನ ಕಮೀಷನ್ ಬಾಬತ್ತಿಗೋಸ್ಕರ ಪ್ಲಾನ್ ಹಾಕುತಾ ಇದೀಯೋ;' ಇಲ್ಲ ನನ್ನ ಮನೇ ಬೆಳೀಲೀಂತಲೋ?

ವಿಷಕಂಠಯ್ಯ:—ನಿಮ್ಮ ಹತ್ತಿರ ಮುಚ್ಚು ಮರೆಯೇನು ಸ್ವಾಮೀ—ಎರಡು ದೃಷ್ಟಿಯಿಂದಲೂ ಕೆಲಸ ಮಾಡುತಾ ಇದೀನಿ. ಇಲ್ಲಿದಿದ್ದರೆ ಈ ಕಾರ್ಪಣ್ಯ ಪಟ್ಟುಕೊಂಡು, ಎಲ್ಲರ ಕೈಲೂ ಅನ್ನಿಸಿಕೊಂಡು ಈ ಪಾಪಿಷ್ಟ ಕಸಬು ಯಾಕೆ ಮಾಡುತಿದ್ದೆ—ಏನು ಗ್ರಹಚಾರವೇ?

ಈಶ್ವರಯ್ಯ.—ನೋಡಿದೆಯಾ ಮೂಲ ಎಲ್ಲಿದೇಂತ, ಆವತ್ತು ನನ್ನ ಹೆಂಡತಿ ಹೇಳಿದಾಗ ನಾನು ಅವಳನ್ನೇ ಅಂದುಬಿಟ್ಟೆ. 'ವಿಷಕಂಠಯ್ಯ ನಿಸ್ವಾರ್ಥ ದೇವರೂ'ಂತ ಹೊಗಳಿದೆ. ಆ ಪಾಪಕ್ಕೆ ಈ ಪ್ರಾಯಶ್ಚಿತ್ತ ಅನುಭವಿಸಬೇಕಾಗಿ ಬಂತು. ಕಡೆಗೇನಾಯಿತು? ವೃಥಾ ಒಂದು ಹುಡುಗಿ

ಕೊಲೆ–ಮಗನಿಗೆ ಬುದ್ಧಿ ವಿಕಲ್ಪ–ಎರಡು ಕಡ ವರದಕ್ಷಿಣೆಗೂ ಸೊನ್ನೆ

**ವಿಷಕಂಠಯ್ಯ.**—ನಾನು ಹೇಳಲಿಲ್ಲವೇ ಸ್ವಾಮೀ ಮೊದಲೇ ?

**ಈಶ್ವರಯ್ಯ** —ಏನು ನೀನು ಹೇಳಿದ್ದು ನಿನ್ನ ತಲೇ ?

**ವಿಷಕಂಠಯ್ಯ** —ಆ ಗೋಪೀನಾಥರಾಯನ ಹತ್ತಿರ ಅನ್ಯಾಯದ ಹಣ ಹುಳಿತುಹೋಗುತಾ ಇದೆ. ತಗೊಂಡ ವರದಕ್ಷಿಣೆ ಯಾಕೆ ಹಿಂದಿರುಗಿಸುತ್ತೀರಾಂತ ?

**ಈಶ್ವರಯ್ಯ:**—ನಾನಿನ್ನೂ ನಿನ್ನಷ್ಟು ಪಾಪಿಷ್ಟನಾಗಿಲ್ಲ

**ವಿಷಕಂಠಯ್ಯ** —ಹುಡುಗಿ ಹೋದರೆ ವರದಕ್ಷಿಣೆ ವಾಪಸ್ ಮಾಡುತ್ತಾರೆಯೇ ಯಾರಾದರೂ ? ಅಲ್ಲದೇ ನಮ್ಮ ಷರತ್ತು ಇದ್ದದ್ದೇನು ?

**ಈಶ್ವರಯ್ಯ**·— ಷರತ್ತಿದ್ದದ್ದು, ಮೊದಲನೆ ಸಂಬಂಧದ್ದು ವಿಚಾರ ಬಿಟ್ಟು, ಎರಡನೇ ಸಂಬಂಧದಿಂದ ಐದು ಸಾವಿರ ರೂಪಾಯಿ ಕೊಡಿಸಿ ಕೊಡುತೀನೀಂತ. ಈಗೆಲ್ಲಿ ಆ ಷರತ್ತು ? ಜವಾಬು ಕೊಡು

**ವಿಷಕಂಠಯ್ಯ** —ಹುಡುಗನಿಗೆ ಬುದ್ಧಿ ನೆಟ್ಟಗಾದರೆ ಅದರಲ್ಲಿ ಅರ್ಧ ಕೊಡುತೀನೀಂತ ಹೇಳಿದಾರಲ್ಲ.

**ಈಶ್ವರಯ್ಯ** —ಅದು ಯಾಕೆ ಅರ್ಧ ?

**ವಿಷಕಂಠಯ್ಯ** —ಸ್ವಾಮೀ ! ಅವರು ಸರ್ಕಾರೀ ಅಧಿಕಾರಿಗಳು. ಅವರ ಮಾತನ್ನು ಅವರೇ ಮರೆತರೆ ನಾನೇನು ಮಾಡಲೀ ?

**ಈಶ್ವರಯ್ಯ** —"ಹೀಗೆ ಮಾಡಬೇಕೂಂತಿದೀವಿ ಒಂದನೇ ಮದುವೆ ಆದಮೇಲೆ ಪಾಪಿಷ್ಟರಾದ ನಾವು ಆ ಹುಡುಗೀನ ಪ್ರಪಂಚದಿಂದ ತೊಲಗಿಸಿ, ಅವಳ ತಾಯಿ ತಂದೇ ಹೊಟ್ಟೆಗೆ ಹಾಲು ಹೊಯ್ದು, ಆಮೇಲೆ ನಿಮ್ಮ ಮಗಳನ್ನ ತಂದುಕೊಳ್ಳುತೀವಿ . ಆಗ ಐದು ಸಾವಿರ ರೂಪಾಯಿ ಕೊಡುತೀರಾ'ಂತ ನೀನು ಮೊದಲೇ ಕೇಳಿದ್ದೆಯೇನಯ್ಯಾ ನಾಗೇಂದ್ರರಾವ್‌ನ ?

**ವಿಷಕಠಯ್ಯ**·—ಯಾರಾದರೂ ಹಾಗೆ ಕೇಳುತಾರೆಯೇ ಸ್ವಾಮೀ ?

**ಈಶ್ವರಯ್ಯ**·—ಕೇಳದೇ, ವಿಚಾರಿಸದೇ, ಖಂಡಿತ ಮಾಡಿಕೊಳ್ಳದೇ

ನೀನು ಪ್ಲಾನ್ ಹ್ಯಾಗೆ ಹಾಕಿ ನನ್ನನ್ನ ಒಪ್ಪು ಒಪ್ಪೂಂತ ಕತ್ತಿನಮೇಲೆ ಹತ್ತಿ ಕೂತುಯಿದ್ದೇ?

**ವಿಷಕಂಠಯ್ಯ.**—ಏನೋ, ಎಲ್ಲಾ ಹಾಗಾದೀತೂಂತ.

**ಈಶ್ವರಯ್ಯ.**—ಹ್ಯಾಗಾದೀತೂಂತಾ? ನಿನಗೆ ನಾಲ್ಕು ಸಲ ಕಮೀಷನ್ ಸಿಕ್ಕಿ ನಾಲ್ಕು ಮನೆ ಮುಳುಗಿಸಬಹುದೂಂತಲೇ!

**ವಿಷಕಂಠಯ್ಯ.**—ಯಾವ ಚಂಡಾಲನಿಗೆ ಬೇಕು ಸ್ವಾಮೀ ಹಾಳು ಕಮೀಷನ್ನೂ? ನೀವು ಅದನ್ನೇ ಹಿಡಿದು ಕಡೀತಾ ಇದೀರಿ ....ನೋಡೀ ನಾಗೇಂದ್ರರಾವ್ ಹತ್ತಿರ ನನಗೇನೂ ಕೊಡಬೇಡಿ ಸ್ವಾಮೀ! ಅವರ ವರ ದಕ್ಷಿಣೇನಾದರೂ ಅವರಿಗೆ ಕೊಟ್ಟುಬಿಡೀಂದದ್ದಕ್ಕೆ "ಸೆಕೆಂಡ್ ಹ್ಯಾಂಡ್ ವರನಿಗೆ ಅರ್ಧ ವರದಕ್ಷಿಣೇನೇ, ಅದೂ ಅವನ ಬುದ್ಧಿ ಸರಿಹೋಗಿ ಸರಿಯಾದ ವರನಾದ ದಿವಸವೇ!" ಅಂದುಬಿಟ್ಟರು.

**ಈಶ್ವರಯ್ಯ**—ಹಾಗಾದರೆ ನೀನೇನು ಅಲ್ಲಿ ಕಮೀಷನ್ ಗಿಟ್ಟಿಸಿಲ್ಲವೋ?

**ವಿಷಕಂಠಯ್ಯ.**—ಪ್ರಮಾಣವಾಗೂ ಇಲ್ಲ ಸ್ವಾಮೀ!

**ಈಶ್ವರಯ್ಯ**—ಅದೇಸಿಂಥ ನಿಸ್ಪೃಹ ಸೇವೆಗೆ ಪ್ರಾರಂಭಿಸಿದ್ದೀಯಲ್ಲಾ?

**ವಿಷಕಂಠಯ್ಯ**—ಪ್ರಾರಂಭಿಸಿಲ್ಲ ಸ್ವಾಮೀ, ನಿಮ್ಮ ಬಲವಂತಕ್ಕೆ ಇದೊಂದು ಕೆಲಸ ಮಾಡಿ ಕೊಟ್ಟುಬಿಟ್ಟರೆ ಸಾಕೂಂತ ತರದೂದು ಮಾಡಿದೆ ಅಷ್ಟೇ. ಪಾಪಿ ನಾನು; ನಾನೇನು ಸೇವೆ ಮಾಡೇನು? (ಕತ್ತು ತಗ್ಗಿಸುವನು)

**ಈಶ್ವರಯ್ಯ:**—ಹೋಗಲಿ ಆ ಮಾತು ಬಿಡು. ಈಗ ಲಗ್ನಕ್ಕೆ ನಾವೇ ಅವರ ಮನೆಗೆ ಹೋಗೋದೂಂತ ಮಾತಾಡಿಬಿಟ್ಟೆವು. ಆದರೆ ನನ್ನ ಹೆಂಡತಿ, 'ನನ್ನೀ ದೇಹಸ್ಥಿತೀಲಿ ನಾನು ಮನೆ ಬಿಟ್ಟು ಜರುಗಲಾರೆ. ಈ ಲಗ್ನವೊಂದು ಇದ್ದಲ್ಲೇ ಕಣ್ಣಿಂದ ನೋಡಿಬಿಟ್ಟರೆ ಸಾಕೂ'ಂತಾಳೆ. ಈಗೇನು ಮಾಡೋದು?

**ವಿಷಕಂಠಯ್ಯ:**—ನೋಡೀ ಸ್ವಾಮಿ! ಈ ಮುಜಗರದ ಮಧ್ಯಸ್ಥಿಕೆ

ನಮ್ಮ ಶತೃಗಳಿಗೂ ಬೇಡ. ನಾವು ಅವರ ಮುಂದೆ ಅವರು ಹೇಳಿದ ಸ್ಥಳ ಸಮಯ ಎಲ್ಲಾತಕ್ಕೂ ಒಪ್ಪಿಬಿಟ್ಟಿವು. ಈಗ ಮತ್ತೆ ಹೀಗಂದರೆ ಏನು ಮಾಡೋದು. ದೊಡ್ಡಮನುಷ್ಯರು ಅವರು—ಅವರ ಹತ್ತಿರ ನಾನು ತಾನೇ ಯಾವುಯಾವುದಕ್ಕೇಂತ ಎಷ್ಟು ಸಲ ಹಲ್ಲುಗಿರೀಲಿ ಸ್ವಾಮೀ?

**ಈಶ್ವರಯ್ಯ**:—ನೋಡೂ ವಿಷಕಂಠಯ್ಯ! ಗೋಪೀನಾಥರಾಯರ ಹತ್ತಿರ ತಗೊಂಡ ಎಂಟುನೂರು ಮೊದಲನೇ ಮದುವೇಲಿ ಓಡಾಡಿದ್ದಕ್ಕೆ ದಳ್ಳಾಳಿ ನನ್ನ ಹತ್ತಿರ ಹಿರಿದ ಐನೂರು ಈ ಮದುವೆ ಓಡಾಟದ ದಳ್ಳಾಳೀಂತ ತಿಳಿಕೋ.

**ವಿಷಕಂಠಯ್ಯ**:—ಅಲ್ಲಾ ಸ್ವಾಮೀ! ಈಗ ನಮಗೇಂತ ಪ್ರತ್ಯೇಕವಾಗಿ ಬಂಗಲೇ ನೋಡಿರುತಾರೆ ಈಗ ಶಶೀ ಸ್ವಲ್ಪ ಸಮಾಧಾನವಾಗೂ ಕೂತಿರುತಾನೆ. ಸ್ವಲ್ಪ ಸ್ಥಳ ಬದಲಾಯಿಸೋದರಿಂದ ಅವನು ಇನ್ನೂ ಸರಿ ಹೋಗಬಹುದು ಅಲ್ಲದೆ ನಿಮ್ಮ ಕುಟುಂಬಕ್ಕೂ ಸ್ವಲ್ಪ ಆರೋಗ್ಯವಾಗಬಹುದು ಎಲ್ಲಾ ಎರಡು ಟ್ಯಾಕ್ಸಿ ಮಾಡಿಕೊಂಡು ಮೆಲ್ಲಗೆ ಜರುಗಿ ಹೋದರಾಯಿತು. ಅಲ್ಲದೆ ನಾವು ಅಲ್ಲಿಗೆ ಹೋಗೋದರಲ್ಲಿ ನಮ್ಮ ಜವಾಬ್ದಾರಿ ಏನೂ ಇರೊಲ್ಲ.

**ಈಶ್ವರಯ್ಯ**—ಸ್ವಲ್ಪ ನಮ್ಮನೆ ಪಕ್ಕದಲ್ಲಿ ನಿಂತಿರು ಬಾ ನನ್ನ ಹೆಂಡತೀಗೆ ಈ ಮಾತು ಹೇಳಿ ನೋಡುತೀನೀ (ಮುಂದೆ ಹೊರಡುವನು)

**ವಿಷಕಂಠಯ್ಯ**:—(ರೋಸಿ) ನಡೀರಿ ಸ್ವಾಮಿ ಬಂದೇ! (ಈಶ್ವರಯ್ಯನು ಕಣ್ಮರೆಯಾದ ನಂತರ) ಒಳ್ಳೇ ಕರಡಿಯು ಕೈಗೆ ಸಿಕ್ಕಿಕೊಂಡ ಹಾಗಾಯಿತಲ್ಲಪ್ಪಾ! ಆದರೂ ನಾನೇ ಬುದ್ಧಿವಂತ. ಸೇವೆಯಂತೇ, ಪುಣ್ಯವಂತೇ! ಹೆಂಡತೀಗೆ ಹೆದರೋ ಗಂಡಸು!! ನನಗೆ ಉಪದೇಶ!!

(ನಿಧಾನವಾಗಿ ನಿಷ್ಕ್ರಮಿಸುವನು).

ಗಸ್ನ ಬೆರಗು ಮಾಡಿ ಆ ಹೆಳವಿ ಹುಡುಗೀಗೆ ತಾಳಿ ಕಟ್ಸಿಸಿದೆ. ಅಲ್ಲಿಂದ ನನಗೇನೋ ಐದು ಸಾವಿರ ರೂಪಾಯಿ ಬಂತು. ಅವನು ಬೇರೆ ದಳ್ಳಾಳೀಲಿ ಎಂಟು ನೂರು ರೂಪಾಯಿ ಹಿರಿದ. ಮತ್ತೆ ನನ್ನ ಹತ್ತಿರ ಬೇರೇ ಐನೂರು ರೂಪಾಯಿ ಸುಲಿಗೆ ಮಾಡಿದ....ಆದರೆ ಆ ಹುಡುಗಿ ಹೋದಮೇಲೆ ಆ ಹಣಾ ನೆಲ್ಲಾ ಗೋಪೀನಾಥರಾಯರಿಗೆ ವಾಪಸ್ಸು ಮಾಡಿಬಿಟ್ಟೆ ಅಯ್ಯೋ ಪಾಪ, ಆತ ಆ ಹುಡುಗೀ ಒಡವೆ ವಸ್ತ್ರಾನೆಲ್ಲಾ ಹೊತ್ತುಕೊಂಡು ಬಂದಿದ್ದರು. ಇದೆಲ್ಲಾ ನಿಮ್ಮನೇಲೇ ಇರಬೇಕಾದ್ದೂಂತ. ಎಲ್ಲಾ ಹಿಂದಿರುಗಿಸಿಬಿಟ್ಟೆ ನನಗೀ ವರದಕ್ಷಿಣೆ ಪಿಶಾಚಿ ಬಿಟ್ಟುಹೋಯಿತು ಅದಕ್ಕೇ ತಮ್ಮಿಂದ ಒಂದು ಕಾಸೂ ನಿರೀಕ್ಷಿಸದೆ ಲಗ್ನವಾದರೆ ಸಾಕೂಂತ ಸಂಕಲ್ಪಿಸಿದ್ದು ಆ ವಿಷ ಕಂಠಯ್ಯನ್ನ ಕೂಡ ನಿಮ್ಮಿಂದ ಒಂದು ಕಾಸು ದಳ್ಳಾಳಿ ತಗೋಕೂಡದೂಂತ ನಿಗದಿ ಮಾಡಿದ್ದೆ ಇದರಿಂದ ಅವಳು ದೇಹ ಬಿಟ್ಟದಿನ ಹತ್ತಿರೊಂದು ಕಾಸೂ ಇರಲಿಲ್ಲ. ಅವಳ ಕೈಲಿದ್ದ ಬಳೆಗಳೆರಡನ್ನ ಮಾರಿ ಮುಂದಿನ ಕರ್ಮಾಂತರಗಳನ್ನು ಮಾಡಿದ್ದಾಯಿತು ರೆಡಿಕ್ಯಾಷ್ ಇದ್ದಿದ್ದರೆ ಮೊದಲು ತಂತಿ ಕೊಟ್ಟುಬಿಡುತ್ತಿದ್ದೆ ಈಗ ಆ ಹುಡುಗನಿಗೆ ಅವನ ವಿದ್ಯವೇ ಆಸ್ತಿ. ನಿಮ್ಮ, ಆ ಪುಣ್ಯಾತ್ಮ ಗೋಪೀನಾಥರಾಯರ ಆಸರೆಯೇ ಆಧಾರ. ನಾನು ಪಾಪರಾಗಿಬಿಟ್ಟೆ. ನನ್ನ ಬಾಳು ಬೆಂಗಾಡಾಗಿ ಹೋಯಿತು

**ನಾಗೇಂದ್ರರಾವ್.**—(ಆಶ್ಚರ್ಯದಿಂದ ಈಶ್ವರಯ್ಯನನ್ನೊಮ್ಮೆ ರಮಾ ಕಡೆಗೊಮ್ಮೆ ನೋಡುತ್ತಾ)....ಅಲ್ಲಾ ಈಶ್ವರಯ್ಯನೋರೇ! ನೀವೇನೂ ತಿಳಿಕೋ ಬೇಡೀ, ....ಆ ವಿಷಕಂಠಯ್ಯ ರೋಗ್ ಅಂತ ನನಗೆ ಗೊತ್ತು. "ಶಶಿಕುಮಾರ್‌ಗೆ ಏಳೆಂಟು ಹೆಣ್ಣು ಬಂದ್ಬಿಟ್ಟವೆ ನೀವು ಕನಿಷ್ಟಪಕ್ಷ ಎರಡು ಸಾವಿರ ರೂಪಾಯಿ ಕೊಟ್ಟರೇನೇ ಅವರು ಒಪ್ಪೋದೂ"ಂತ ಬಲ ವಂತ ಮಾಡಿ, ನಿಮಗೇಂತ ಒಂದು ಸಾವಿರ ರೂಪಾಯಿ, ತನಗೇಂತ ಇನ್ನೂ ರೈವತ್ತು ತಗೊಂಡು, "ಹುಡುಗನಿಗೆ ಬುದ್ಧಿ ಸರಿಹೋದಮೇಲೆ ಮಿಕ್ಕೊಂದು ಸಾವಿರ ನಿಮಗೆ, ಇನ್ನೂರೈವತ್ತು ತನಗ ಕೊಡಬೇಕೂಂತ ಕರಾರ್ರು ಮಾಡಿಕೊಂಡು ಹೋಗಿದಾನೇ."

**ಈಶ್ವರಯ್ಯ.**—(ಕಣ್ಣು ಕೆಂಪಾಗಿ ಮೇಲೆದ್ದು) ಎಲಾ ಚಂಡಾಲಾ!! ಕಡೇಗಿಷ್ಟೊಂದು ದ್ರೋಹವೇ!! ....ನರರಾಕ್ಷಸಾ!!!

ನಾಗೇಂದ್ರರಾವ್:—ನಾನದಕ್ಕೆಲ್ಲಾ ಸರಿಯಾದ ದಾಖಲೇ ತಗೊಂಡಿದೀನಿ ಅವನ ಹತ್ತಿರ. ಇವತ್ತಲ್ಲ ನಾಳೆ ಹಿಡಿದು ಅರೆಸ್ಟ್ ಮಾಡಿಸಿ ಜೈಲಿಗಿಡಿಸಬಹುದು. ತಾವು ಕೂತುಕೊಳ್ಳಿ. (ಈಶ್ವರಯ್ಯನು ಕೂಡುವನು. ಆದರೆ ಕಣ್ಣುಗಳು ಕೆಂಪೇರಿ, ದೃಷ್ಟಿಯು ತೀವ್ರವಾಗಿ ತುಟಿಗಳು ಅದುರುವುವು.)

ರಮಾ.—ಎಂಥಾ ರಾಕ್ಷಸ ಅವನು! ಅವನ ಮಾತು ಕೇಳುತಿದ್ದರೆ ಗೊತ್ತಾಗುತ್ತೇ! ಅಣ್ಣಾ!! ....ಅಂಥಾವರಿಗೆ ಸರಿಯಾಗಿ ಶಿಕ್ಷೆಯಾಗೋಹಾಗೆ ಮಾಡಬೇಕು ಎಷ್ಟು ಜನಗಳನ್ನ ಎಷ್ಟು ಸಂಕಟಕ್ಕೆ ಗುರಿ ಮಾಡಿದಾನೇ!'

ಈಶ್ವರಯ್ಯ—(ಮೇಲೆದ್ದು)ನಾನು ಬರುತೀನಿ ನಾಗೇಂದ್ರರಾಯರೇ'

ನಾಗೇಂದ್ರರಾವ್.—ಕಾಫಿ ಆರೇ ಹೋಯಿತೇನೋ; ತಗೊಳ್ಳಿ.

(ಈಶ್ವರಯ್ಯನು [illegible] ಕುಡಿದು ಲೋಟವನ್ನು ಕೆಳಗಿಡುವನು)

ನಾಗೇಂದ್ರರಾವ್:—ನಾನು ಈಗಲೇ ಹೊರಟುಬರೋದಕ್ಕೆ ಸಾಧವಿಲ್ಲವಾಗಿದೆ ಈವತ್ತು, ನಾಳೆ ಆಫೀಸಿಗೆ ಹೋಗಿ ಕೆಲಸ ಕಾರ್ಯಗಳಿಗೆ ಏರ್ಪಾಟು ಮಾಡಿ, ಆಚೆ ನಾಳಿದ್ದು ನಿಮ್ಮ ಮನೇಲಿರುತೇನೆ. ಈ ಮಧ್ಯೆ ರಮಾನ ನೀವು ಈಗ ನಿಮ್ಮ ಸಂಗಡ ಕರೆಕೊಂಡ ಹೋಗಬಹುದು

ಈಶ್ವರಯ್ಯ—(ಅನ್ಯಮನಸ್ಕನಾಗಿಯೇ) ಹಾಗೇ ಆಗಲಿ,

ನಾಗೇಂದ್ರರಾವ್.—ರಮಾ! ನೀನು ನಿಮ್ಮ ಮಾವನವರ ಸಂಗಡ ಹೊರಡುತೀಯಾ?

ರಮಾ.—ಹುಂ.

ನಾಗೇಂದ್ರರಾವ್:—ನೀನು ಹಾಗಾದರೆ ನಿನ್ನ ಬಟ್ಟೆಬರೆ ತೆಗೆದಿಟ್ಟುಕೋ ನಾನು ಸ್ಟೇಷನ್ನಿಗೆ ಟ್ಯಾಕ್ಸಿ ತರಿಸುತ್ತೇನೆ ಬನ್ನೀ ಈಶ್ವರಯ್ಯನೋರೆ, ರೂಮಿಗೆ ಹೋಗೋಣ

(ರಮಾ ಒಳಕ್ಕೆ ಹೋಗುವಳು ನಾಗೇಂದ್ರರಾಯನು ಎಡಬದಿಯ ಕೊಠಡಿಗೆ ಪ್ರವೇಶಿಸುವನು. ಈಶ್ವರಯ್ಯನು ಯಂತ್ರವಂತೆ ಅವನನ್ನು ಹಿಂಬಾಲಿಸುವನು)

—೦—

# ಅಂಕ ೩ - ದೃಶ್ಯ ೭

[ಊರಾಚೆಯ ಹನುಮಾನ್ ಗುಡ್ಡದ ಪಕ್ಕ. ಈಶ್ವರಯ್ಯನು ನುಗ್ಗಿ ಬರುವ ರೋಷಾವೇಶವನ್ನು ಬಚ್ಚಿಡಲು ಯತ್ನಿಸುತ್ತಾ ವಿಷಕಂಠಯ್ಯನನ್ನು ಕರೆದುಕೊಂಡು ಬರುವನು. ವಿಷಕಂಠಯ್ಯನು ಗಾಬರಿಗೊಂಡಿದ್ದರೂ ತೋರ್ಪಡಿಸದೇ ಹಿಂದೆ ಬರುತ್ತಿರುವನು. ಸಂಜೆ ಮುಗಿದು ಕತ್ತಲೆಯಾತ್ತಾ ಬಂದಿದೆ. ಸುತ್ತ ನಿರ್ಜನವಾಗಿದೆ.]

**ಈಶ್ವರಯ್ಯ:**— ಕೃತ್ರಿಮದ ನಗುವನ್ನು ನಕ್ಕು) ನೋಡಿದೆಯಾ ವಿಷಕಂಠಯ್ಯಾ! ಪ್ರಪಂಚದಲ್ಲಿ ಎಂತೆಂಥಾ ಜನ ಇರುತ್ತಾರೆ ನಾನೇನು ಅವನ ಹತ್ತಿರ ಭಿಕ್ಷಕ್ಕೆ ಹೋಗಿರಲಿಲ್ಲ. ಸುಮ್ಮನೆ ಹುಡುಗೀನ ಈಗಲಾದರೂ ಕಳಿಸುತಾನೆಯೋ ಇಲ್ಲವೋ ಕೇಳ್ಹೋಣಾಂತ ಹೋಗಿದ್ದೆ. ಮದುವೆಯಾದಮೇಲೆ ಸೊಸೆ ಮನೇಲೆರಡು ದಿನ ಓಡಾಡಿಕೊಂಡಿರೋದನ್ನ ನೋಡಬೇಕೂಂತ ಅಷ್ಟೆ ಒದ್ದಾಡಿದಳು ಅವಳು—ಆಗ ದಿನ ಚನ್ನಾಗಿಲ್ಲ ಅಂತ ನೆಪ ಹೇಳಿಬಿಟ್ಟ—ಅಲ್ಲಾ ನಾನಾಗಿ ನಾನು ಸಮಾಚಾರ ತಿಳಿಸಬೇಕ್ಕೂಂತ ಹೋಗಿದ್ದರೆ ಟೆಲಿಗ್ರಾಂ ಕೊಡಲಿಲ್ಲಾಂತ ಅವಮಾನ ಮಾಡೋದೇ!?

**ವಿಷಕಂಠಯ್ಯ** — ಮನುಷ್ಯನೇನೋ ಸ್ವಲ್ಪ ದುರಹಂಕಾರಿಯೇ!

**ಈಶ್ವರಯ್ಯ:**— ಸ್ವಲ್ಪವೇನಯ್ಯಾ ಬಂತು — ಹದಿನಾರಾಣೆ ದುರಹಂಕಾರಿ. ನಿನ್ನ ಏನೇನೂಂತ ಬೈದಾಂತಿದೀಯಾ?.... ನನಗೆ ಹೇಳೋದಕ್ಕೆ ಬಾಯಿ ಬರದು.

**ವಿಷಕಂಠಯ್ಯ**· — ನನ್ನನ್ನ ಯಾಕಂದ ಸ್ವಾಮೀ?

**ಈಶ್ವರಯ್ಯ**· — ಯಾಕೇಂದ್ರೇನು ಹೇಳಲಿ. "ಚಂಡಾಲ, ಪಾಪಿ, ದ್ರೋಹಿ, ಕಳ್ಳ, ಮನೆಹಾಳಾ, 'ಅಂಥಾವನು ಪ್ರಪಂಚದ ಮೇಲಿದ್ದಷ್ಟೂ ಇನ್ನೂ ಎಷ್ಟೆಷ್ಟು ಸಂಸಾರಗಳು ಹಾಳಾಗುತ್ತವೋ" ಅಂತ ಬಾಯಿಗೆ ಬಂದ ಹಾಗೆ ಬೈತಾ ಇದ್ದ.

(ವಿಷಕಂಠಯ್ಯನ ಕಡೆಗೆ ರೋಷಪೂರ್ಣ ದೃಷ್ಟಿಯಿಂದ ನೋಡುವನು. ವಿಷಕಂಠಯ್ಯನು ಗಾಬರಿಗೊಳ್ಳುವನು.)

**ವಿಷಕಂಠಯ್ಯ:**—ನಾನೇನು ಅವರಪ್ಪನ ಗಂಟನ್ನ ತಿಂದಿದ್ದೆ ಸ್ವಾಮೀ ಹೀಗೆಲ್ಲಾ ಬಯ್ಯೋಕೇ! ನೀವು ಕಂಡಹಾಗೇ

**ಈಶ್ವರಯ್ಯ:**—ನಾನು ಕಂಡಹಾಗೇ ಏನೂ ತಿಂದಿದ್ದಿಲ್ಲ ಅಲ್ಲಿ. ನಾನು ಕಾಣದ ಹಾಗೆ ನಿನ್ನ ಕಮಿಷರ್ಷ ಇನ್ನೂರೈವತ್ತು ರೂಪಾಯಿ, ನನಗೇಂತ ವರದಕ್ಷಿಣೆ ಬಾಬ್ತು ಒಂದು ಸಾವಿರ ರೂಪಾಯಿ ತಿಂದಿದ್ದೀಯಂತೆ.

**ವಿಷಕಂಠಯ್ಯ** —(ಬೆದರಿ) ಎಂಥ ಮೋಸ ನೋಡಿ ಈಶ್ವರಯ್ಯನೋರೆ! ನನ್ನ ನಿಮ್ಮ ಸ್ನೇಹಕ್ಕೆ ಭಂಗ ತಂದು ಹಾಕಬೇಕೂಂತ ಹೊಟ್ಟೆಕಿಚ್ಚಿಗೆ ಮಾಡಿರೋ ಸಂಚು! ಎಲಾ ಚಂಡಾಲ ನಾಗೇಂದ್ರ

**ಈಶ್ವರಯ್ಯ:**—(ಹತ್ತಿರ ಬಂದು ಅವನ ಮುಖವನ್ನು ನೋಡುತ್ತಾ) ಅವನ ಹತ್ತಿರ ನಿನ್ನ ರುಜುವಾದ ಪತ್ರಗಳಿವೆಯಲ್ಲ ಒಂದುಸಾವಿರದ್ದೊಂದು, ಇನ್ನೂರೈವತ್ತು ರೂಪಾಯಿಗೊಂದೂ!

**ವಿಷಕಂಠಯ್ಯ.**—ಇದನ್ನ ಬೇರೆ ತಯಾರು ಮಾಡಿದಾನೇ ಅವನು! ಎಂಥ ಮೋಸ! ಎಂಥ ಕುಯುಕ್ತಿ!! ಈಶ್ವರಯ್ಯನೋರೇ! ನಾಳೆಯ ದಿನ ಬೆಳಿಗ್ಗೇನೆ ಬೆಳಿಗ್ಗೆ ಪ್ಯಾಸಂಜರ್ ಗಾಡಿಯಲ್ಲಿ ಹೊರಟು, ಈ ವಿಚಾರ ಅವನೆದುರಿಗೇ ತೀರ್ಮಾನ ಮಾಡೋಣ. ಈಗ ಬನ್ನಿ. ನಾಳೆ ಅಲ್ಲಿ ನಿಮಗೇ ಗೊತ್ತಾಗುತ್ತೆ ಈ ಮೋಸವೆಲ್ಲಾ. (ಹೊರಡಲಿರುವನು. ಈಶ್ವರಯ್ಯನು ಹಟಾತ್ತನೆ ಅವನ ಕತ್ತಿನ ಶಲ್ಯವನ್ನು ಸುತ್ತಿ ಹಿಡಿದೆಳೆದು ತಡೆಯುವನು. ವಿಷಕಂಠಯ್ಯನು ಹೆದರಿಬಿಡುವನು.)

**ಈಶ್ವರಯ್ಯ:**—(ನುಂಗಿಬಿಡುವನಂತೆ ಅವನನ್ನೇ ರೋಷದಿಂದ ದುರುಗುಟ್ಟಿಕೊಂಡು ನೋಡುತ್ತಾ ಹಲ್ಲು ಕಡಿಯುತ್ತಾ) ಲೇ! ಮನೆಹಾಳಾ! ನಿಲ್ಲೋ! ನಾಳೆಯೇನೋ ತೀರ್ಮಾನ ಮಾಡೋದು. ಈವತ್ತೇ ತೀರ್ಮಾನವಾಗಿಬಿಡಬೇಕು. ಬೊಗಳೋ! ನೀನು ನಾಗೇಂದ್ರರಾಯನಿಂದ ಸಾವಿರದಿನ್ನೂರೈವತ್ತು ರೂಪಾಯಿ ತಗೊಂಡಿಲ್ಲವೇನೋ?

(ವಿಷಕಂಠಯ್ಯನು ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಾ ಇರುವನು)

**ಈಶ್ವರಯ್ಯ:**—[ಅವನನ್ನೆ ಕೊಡವಿ] ಬೊಗಳೋ! ಪಾಪಿ ಷ್ಟಾ!!
(ಅರಚುವನು)

**ವಿಷಕಂಠಯ್ಯ**:—(ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಾ) ಸ್ವಾಮಿೀ! ಈಶ್ವರಯ್ಯನೋರೇ! ಎಲ್ಲಾ ಅವನ ಕೃತ್ರಿಮವೇ. ನೋಡೀ ದುಡ್ಡು ಕೊಟ್ಟು, "ಹುಡುಗನಿಗೆ ಹುಚ್ಚು ಬಿಟ್ಟು ಸರಿಹೋದಮೇಲೆ ಆ ಸಾವಿರ' ರೂಪಾಯಿ ಅವರಿಗೆ ಕೊಡೂ"ಂತ ನನಗೆ ಆರ್ಡರ್ ಮಾಡಿಬಿಟ್ಟು ನಿಮಗೆ ಹೀಗೆ ಚುಚ್ಚು ಕೊಟ್ಟಿದ್ದಾನೇ! ಎಂಥ ದ್ರೋಹೀ!!

(ಬಿಡಿಸಿಕೊಳ್ಳಲು ಯತ್ನಿಸುವನು.)

**ಈಶ್ವರಯ್ಯ**:—(ತನ್ನ ಕಪಿಮುಷ್ಟಿಯನ್ನು ಬಲಪಡಿಸಿ) ಹಾಗಾದರೆ ನನ್ನ ಕೈಲೀಮಾತನಾದರೂ ಹೇಳಬಹುದಾಗಿತ್ತಲ್ಲಾ ?

(ವಿಷಕಂಠಯ್ಯನು ಸುಮ್ಮನೆ ಕಣ್ಣು ಬಿಡುತ್ತಿರುವುದನ್ನು ಕಂಡು)

ಬೊಗಳೋ! ಯಾಕೆ ಹೇಳಿಲಿಲ್ಲ!! [ಕೂಡವುವನು]

**ವಿಷಕಂಠಯ್ಯ**:—ಈಗಲೇ ಅವರ ಕೈಲಿ ಯಾವ ಮಾತನ್ನೂ ಹೇಳ ಬೇಡಾಂತ ಹೇಳಿದಾನಲ್ಲಾ ಸ್ವಾಮೀ ಅವನೇ!!

**ಈಶ್ವರಯ್ಯ**:—ಹುಡುಗನಿಗೆ ಬುದ್ಧಿ ಸರಿಹೋದರೆ ಇನ್ನೊಂದ್ಸ ಸಾವಿರದಿನ್ನೂರೈವತ್ತು ನಿನ್ನ ಪಾಪಿ ಹೊಟ್ಟೆಗೆ ಬೀಳುತ್ತಲ್ಲವೇನೋ ?

**ವಿಷಕಂಠಯ್ಯ**:—ಯಾರಿಗೆ ಬೇಕು ಸ್ವಾಮೀ ಹಾಳು ದುಡ್ಡು, ನಡೀರಿ. ನಾಳೆ ಬೆಳಿಗ್ಗೇನೇ ತಂದು ಅವನ ಮುಂದೆ ಸುರೀತೀನಿ. ಏನು ಮಾಡುತಾನೋ ಮಾಡಿಕೊಳ್ಳೀ!

**ಈಶ್ವರಯ್ಯ**:—ನಾಳೆವರೆಗೂ ಬದುಕಿರೋರು ಯಾರೋ!! ಅಲ್ಲವೋ! ಹೆಂಡತೀನಾ ಮಗಳನೂ ಊರಿಗೆ ಕಳಿಸಿಬಿಟ್ಟು ಸಾಮಾನು ಸರಂಜಾಮೆಲ್ಲಾ ಕಟ್ಟಿ ರೈಲಿನಲ್ಲಿ ಬುಕ್ ಮಾಡಿಬಿಟ್ಟು, ಊರು ಬಿಡೋದಕ್ಕೆ ಹೊಂಚು ಹಾಕುತ್ತಿದ್ದೋನು ನಾಳೆ ಸಿಕ್ಕುತೀಯಾ ?

**ವಿಷಕಂಠಯ್ಯ**:—ಪ್ರಮಾಣವಾಗಿಯೂ ನಿಮ್ಮ ಜೊತೇಲೇ ಇರು ತೀನೆ ಬೇಕಾದರೆ. ಮನೆಯೋರು ಮನೆ ಬಿಡೂಂತ ಬಲವಂತ ಮಾಡಿ ದರು. ಅದಕ್ಕೆ ಬೇರೆ ಮನೆಯಿಲ್ಲದೆ ಎಲ್ಲರನ್ನೂ ಊರಿಗೆ ಕಳುಹಿಸಿದೆ ಅಷ್ಟೇ. ನಿಮ್ಮನ್ನು ಬಿಟ್ಟು ನಾನೆಲ್ಲಿಗೆ ಹೋಗುತೀನಿ ಸ್ವಾಮೀ!

**ಈಶ್ವರಯ್ಯ:**—ನೀನು ಬಿಟ್ಟರೂ ನಾನು ಬಿಡುತೇನೇನೋ; (ಬಲಗೈಲಿ ಅವನ ಕತ್ತಿನ ಸುತ್ತಣ ಶಲ್ಯವನ್ನು ಬಲವಾಗಿ ಹಿಡಿದು, ಎಡಗೈಯಿಂದ ಜೇಬಿನೊಳಗಿದ್ದ ಸಣ್ಣ ಶೀಶೆಯೊಂದನ್ನು ತೆರೆದು) ನೋಡೋ! ಇಲ್ಲಿ ನೋಡೋ ಮನೆಹಾಳಾ! ಇದು ನಮ್ಮಿಬ್ಬರಿಗೂ ಸರಿಯಾಗಿದೆ. ಅಳತೆ ಮಾಡಿದ ಹಾಗೆ ತಂದಿದೇನೆ ನಿನ್ನ ಬಾಯಿಗೆ ಅರ್ಧ ಹಾಕೋದು; ನೀನು ತಣ್ಣಗಾದ ಮೇಲೆ, ಮಿಕ್ಕರ್ಧ ನಾನು ನುಂಗಿಬಿಡೋದು. ತಿಳೀತೇ!

**ವಿಷಕಂಠಯ್ಯ:**—(ತಪ್ಪಿಸಿಕೊಳ್ಳಲು ಒದ್ದಾಡುತ್ತಾ) ಈಶ್ವರಯ್ಯನೋರೇ ಇದೇನು ನಿಮ್ಮ ಹುಚ್ಚು! ನಿಮಗೂ ಬುದ್ಧಿ ಕೆಟ್ಟುಹೋಗಿರಬೇಕು. ನಿಮಗೆ ಬೇಕಾದರೆ ನಿಮ್ಮ ಸಾವಿರ ರೂಪಾಯಿನ ಈಗಲೇ ಬೇಕಾದರೂ ಕೊಟ್ಟು ಬಿಡುತೇನೆ. ಅವನೇನು ಮಾಡಿಕೊಳ್ಳುತ್ತಾನೋ ಮಾಡಿಕೊಳ್ಳಲೀ!!!

**ಈಶ್ವರಯ್ಯ:**—ಇನ್ನು ರೂಪಾಯಿ, ಮನೆ ಮಠ, ಹೆಂಡತಿ ಮಕ್ಕಳು ಎಲ್ಲಾ ಮರೆತುಬಿಡು. ನನ್ನ ಮನೆ ಹಾಳುಮಾಡಿ ನನ್ನೂ ತಬ್ಬಲಿ ಮಾಡಿ ಹಾಕಿಬಿಟ್ಟೆ. ಕಡೆಗೆ ನಾಗೇಂದ್ರರಾಯನ ಮುಂದೆ ನನ್ನನ್ನೇ ಕಳ್ಳನ್ನ-ಸುಳ್ಳನ್ನ ಮಾಡಿದೆ. ಪಾಪ ಆ ಬಡಪಾಯಿ ಹೆಣ್ಣು ಮಗೂ ಉಮನ್ನ ಕೊಂದು ಅವಳ ಅಪ್ಪ ಅಮ್ಮನ ಹೊಟ್ಟೆ ಉರಿಸಿದೆ.

(ವಿಷಕಂಠಯ್ಯನು ಕೊಡುವುತ್ತಿರುವುದನ್ನು ತಡೆದು) ಕೇಳೋ! ಪಾಪಿ ಚಂಡಾಲ!! ನನಗಂತೂ ಇನ್ನು ಭವಿಷ್ಯವಿಲ್ಲ. ನೀನಿನ್ನೂ ಬದುಕಿದ್ದರೆ ಇನ್ನೆಷ್ಟು ಮನೆಗಳನ್ನ ಹಾಳುಮಾಡುತ್ತೀಯೋ........ಹೇಳು! ಒಳ್ಳೆ ಮಾತಿನಲ್ಲಿ ಈ ಪುಡಿ ನುಂಗುತೀಯಾ ಇಲ್ಲವೇ!

**ವಿಷಕಂಠಯ್ಯ.**—(ಸಿಟ್ಟಿನಿಂದ ಕೊಡವಿಕೊಂಡು) ಕತ್ತು ಬಿಡೋ ಬೋಳೀಮಗನೇ!! (ಕಳಚಿಕೊಂಡು ಓಡುವನು)

**ಈಶ್ವರಯ್ಯ:**—(ರೋಷದಿಂದ ಬನ್ನಟ್ಟಿ) ಬೋಳೀಮಗನೇನೋ ನಾನೂ!! ಮನೆಹಾಳ ಸೂಳೇಮಗನೇ!!

(ಕ್ಷಣಕಾಲಾನಂತರ ದರದರನೆ ಕತ್ತನ್ನು ಹಿಡಿದು ಎಳೆತರುವನು; ವಿಷಕಂಠಯ್ಯನು ಒದ್ದಾಡುತ್ತಿರುವನು. ಬಲಶಾಲಿಯಾದ ಈಶ್ವರಯ್ಯನು ಅವನ ಎದೆಯ ಮೇಲೆ ಕುಳಿತು ಶಲ್ಯವನ್ನು ಜೀರುವನು. ವಿಷಕಂಠಯ್ಯನು ಒದ್ದಾಡಿ, ಕಾಲುಗಳನ್ನು

ಬಡಿದು ತಣ್ಣಗಾಗುವನು. ಆಗ ಈಶ್ವರಯ್ಯನು ಜೇಬಿನಿಂದ ಶೀಶೆಯನ್ನು ತೆಗೆದು "ಹಿಡೀ! ಬಾಯಿ ತೆರೀ!" ಎಂದು ಘಟ್ಟಿಯಾಗಿ ಅರಚುತ್ತಾ ಅವನ ದವಡೆಯನ್ನು ಹಿಚುಕಿ ಅರ್ಧವನ್ನು ಅವನ ಬಾಯಿಗೆ ಸುರಿದು, "ನುಂಗೂ! ನುಂಗೂ!" ಎಂದು ಬಾಯಿ ಮೇಲೆ ಬಡಿದು, ಅವನು ತೆಪ್ಪಗಿರುವುದನ್ನು ನೋಡಿ, ಎದೆಗೆ ಕಿವಿ ಗೊಟ್ಟು ಹುಚ್ಚು ನಗುವನ್ನು ನಗುತ್ತಾ "ಸತ್ತ!! ಸತ್ತ!!..... ಭಾಗ್ಯಾ!! ನಿನ್ನಿಚ್ಛೆಯಂತೇ ಈ ಮನೆಹಾಳ ಸತ್ತ!! ಇಗೋ ನಾನೂ ಬಂದೆ!!" ಎನ್ನುತ್ತಾ ಮಿಕ್ಕ ಪುಡಿಯನ್ನು ಬಾಯಲ್ಲಿ ಹಾಕಿಕೊಂಡು ಶೀಶೆಯನ್ನೆಸೆದು, ಮೆಲ್ಲಗೆ ತಲೆಯನ್ನು ಹಿಡಿದುಕೊಂಡು ಮೇಲೆದ್ದು ತೂರಾಡುತ್ತಾ ನಾಲ್ಕು ಹೆಜ್ಜೆ ನಡೆದು, ಧೊಪ್ಪನೆ ನೆಲಕ್ಕೆ ಬಿದ್ದು ಹೊರಳಾಡಿ ಸುಮ್ಮನಾಗುವನು.)

—o—

# ಅಂಕ ೩ - ದೃಶ್ಯ ೮

[ಈಶ್ವರಯ್ಯನ ಮನೆಯ ಕೈಸಾಲೆ. ಎಲ್ಲ ಹಿಂದಿನಂತೆಯೇ; ಬತ್ತಿದ ಮುಖದ ಶಶಿಯು ಕುರ್ಚಿಯೊಂದರಲ್ಲಿ ಕುಳಿತಿರುವನು. ಪಕ್ಕದಲ್ಲಿ ರಮಾ ತಟ್ಟೆಯಲ್ಲಿ ಉಪ್ಪಿಟ್ಟನ್ನು ಹಿಡಿದು ನಿಂತಿರುವಳು. ಶಶಿಯ ದೃಷ್ಟಿಯು ಎಲ್ಲೋ ನೆಟ್ಟಿರುವುದು. ರಮಾ ಅಂಗಲಾಚುತ್ತಿರುವಳು. ಬೆಳಿಗ್ಗೆ.]

ರಮಾ:—ರಾತ್ರಿಯೆಲ್ಲಾ ಹೊಟ್ಟೆಗೇನೂ ಇಲ್ಲ. ಈಗ ಸ್ವಲ್ಪ ಉಪ್ಪಿಟ್ಟನ್ನಾದರೂ ತಗೊಳ್ಳೀ !

ಶಶಿ:—(ಇತ್ತ ತಿರುಗಿ) ನೀನು ಭಾವಿಗೆ ಬಿದ್ದುಹೋಗಿದ್ದೆ-ಅಲ್ಲವೇ ಉಮಾ ?

ರಮಾ:—ಹೌದು.

ಶಶಿ:—ನೀನು ಸತ್ತು ಹೋಗಿದ್ದರಿಂದ ಈಗ ಕಾಲು ಬಂದು ಬಿಡುತು. ಅಲ್ಲವೇ ?

ರಮಾ:—ಹೌದು.

ಶಶಿ.—ಎಲ್ಲಿ ಕಾಲು ?....(ರಮಾ ಕಾಲುಗಳನ್ನು ನೋಡಿ) ಹಂ ! ಹಂ ! ಈಗೆರಡು ಕಾಲೂ ನೆಟ್ಟಗಿವೆ. ಮನೇಲೆಲ್ಲಾ ನೀನೇ ಓಡಾಡಿಕೊಂಡಿದೀಯಾ ....ಅಮ್ಮಾನೂ ಸತ್ತು ಹೋಗಿಬಿಟ್ಟಳಂತೆ—ಹೊಟ್ಟೆನೋವು ಬಂದು ! ಈಗ ಅವಳು ತಿರುಗಿ ಬಂದು ಬಿಟ್ಟರೆ ಅವಳಿಗೆ ಹೊಟ್ಟೇ ನೋವೇ ಇರೊಲ್ಲ. ಅಲ್ಲವೇ ಉಮಾ ?

ರಮಾ:—ಹೌದೂ. ಈ ಉಪ್ಪಿಟ್ಟು ಸ್ವಲ್ಪ ತಗೋಳ್ಳೀ ! ನೆನ್ನೆ ರಾತ್ರಿಯಿಂದ ಹೊಟ್ಟೆಗಿಲ್ಲವಲ್ಲಾ !!

(ತಟ್ಟೆಯನ್ನು ಮುಂದೆ ಮೇಜಿನಮೇಲಿಡುವಳು.)

ಶಶಿ:—ಈಗ ನಮ್ಮ ತಂದೇನೂ ಸತ್ತುಹೋದರಂತೆ. ಅವರು ಕಪ್ಪಗಿದ್ದರು. ಈಗ ಬಂದರೆ ನಿನ್ನ ಹಾಗೇ ಬೆಳ್ಳಗಿರುತಾರಲ್ಲವೇ ಉಮಾ ?

ರಮಾ:—ಹೌದು.

**ಶಶಿ.**— ಈಗ ನನಗೆ 'ಬುದ್ಧಿ ಸರಿಯಾಗಿಲ್ಲಾ-ಬುದ್ಧಿ ಸರಿಯಾಗಿಲ್ಲಾ' ಅಂತಾರೆ. ನಾನೂ ಸತ್ತುಹೋಗಿಬಿಟ್ಟರೆ, ಆಮೇಲೆ ಬುದ್ಧಿ ಸರಿಯಾಗಿ ಬಿಡುತ್ತಲ್ಲವೇ ಉಮಾ?

**ರಮಾ:**—(ಕಿವಿಗಳನ್ನು ಮುಚ್ಚಿಕೊಂಡಿದ್ದವಳು) ರಾ ಮ ರಾ ಮ ! ! (ಎಂದು ಒಳಕ್ಕೆ ಹೊರಟುಹೋಗುವಳು)

**ಶಶಿ:**— (ನೆಟ್ಟ ದೃಷ್ಟಿಯಲ್ಲಿ ನೋಡುತ್ತಿದ್ದು) ಉಮಾ ಸಾಯೋಕೆ ಮುಂಚೆ ನನ್ನ ಬಿಟ್ಟು ಒಂದು ಕ್ಷಣಾ ಕೂಡ ಹೋಗುತಿರಲಿಲ್ಲ. ಈಗ ಇವಳಿಗೆ ಕಾಲು ಬಂದುಬಿಟ್ಟರೋದು, ಒಂದು ನಿಮಿಷ ಕೂಡ ನಿಲ್ಲುಗೊಡಿಸೊಲ್ಲ. ಮಾತಾಡುತಾ ಮಾತಾಡುತಾ ಹಾಗೆ ಹೊರಟುಹೋಗಿಬಿಡುತಾಳೆ ಜಂಬಾ ಕಾಲು ಬಂತಲ್ಲಾಂತ!! ಪಾಪ !! ಜಂಬ ಅಲ್ಲ ! ಸಂತೋಷ ಅಪ್ಪ, ಅಮ್ಮ ತಿರುಗಿ ಬಂದು ಇವಳಿಗೆ ಕಾಲು ಬಂದುಬಿಟ್ಟರೋದನ್ನ ನೋಡಿಬಿಟ್ಟರೆ ತುಂಬಾ ಸಂತೋಷಪಟ್ಟುಕೊಳ್ಳುತಾರೇ !! (ಮುಗುಳುನಗೆ ನಗುವನು)

[ಹೊರಗಡೆಯಿಂದ "ರಮಾ ! ರಮಾ !!" ಎಂಬ ನಾಗೇಂದ್ರರಾಯರ ಧ್ವನಿ.]

**ಶಶಿ** —ರಾಮಾ ರಾಮಾಂತಿದ್ದ ಹನುಮಂತ ಅದಕ್ಕೇ ಅವನ್ನೆಲ್ಲಾ ಪೂಜೆ ಮಾಡೋದು.

[ಒಳಗಿನಿಂದ ಬಂದ ರಮಾ ಬಾಗಿಲು ತೆಗೆಯುವಳು. ಹೊರಗಿಂದ ನಾಗೇಂದ್ರರಾಯನು ಪ್ರವೇಶಿಸುವನು.

**ರಮಾ.**— ಬಾರಣ್ಣಾ ಕೂತುಕೋ !

**ನಾಗೇಂದ್ರರಾವ್.**— ಕೂತುಗೀತುಕೊಳ್ಳೋದಕ್ಕೆ ಹೊತ್ತಿಲ್ಲ. ಟ್ಯಾಕ್ಸೀಲಿ ಬಂದಿದೀನಿ ನನಗೆ ನಿನ್ನ ಯೋಚನೆ ಬಲವಾಗಿಬಿಟ್ಟು ಆಫೀಸ್ ಕೆಲಸ ಕೂಡಾ ಸರಿಯಾಗಿ ನಡೀತಿಲ್ಲಾ.

**ರಮಾ.**— ನನ್ನ ಯೋಚನೆ ಏನಣ್ಣಾ ?

**ನಾಗೇಂದ್ರರಾವ್.**—ಏನು ರಮಾ ಹೀಗಂತೀ? ರವೀಂದ್ರನೂ ಬೊಂಬಾಯಿಂದ ಕಾಗದ ಬರೆದಿದ್ದಾನೆ. ಎಂಟು ದಿನ ರಜಾ ತಗೊಂಡು ರಮಾನೂ ಕರಕೊಂಡು ಬನ್ನೀಂತ. ನನಗೂ ಬೇಜಾರಾಗಿದೆ. ನೀನೂ

ಇಲ್ಲಿ ಪಡೋ ಅಷ್ಟು ಸುಖ ಪಟ್ಟ್ಹಾಗಾಯಿತು; ನಡಿ. ಒಂದಷ್ಟು ದಿವಸ ಹಾಯವಾಗಿ ಹೋಗಿಬಿಟ್ಟು ಬರೋಣ.

**ರಮಾ:**— (ಶಶಿಯ ಕಡೆಗೆ ಕೈತೋರಿಸಿ) ಇವರನ್ನ ಹ್ಯಾಗಣ್ಣ ಆಯಾಸ ವಾಗದ ಹಾಗೆ ಅಷ್ಟು ದೂರ ಕರೆದುಕೊಂಡು ಹೋಗೋದು?

**ನಾಗೇಂದ್ರರಾವ್.**— ಈ ಹುಚ್ಚನ್ನ ಕಟ್ಟಿಕೊಂಡೆಲ್ಲಿ ರಮಾ ಹೋಗೋದು?

**ರಮಾ.**—(ನೊಂದು) ಅಣ್ಣಾ!!

**ನಾಗೇಂದ್ರರಾವ್:**— ಇವನನ್ನು ಮೆಂಟಲ್ ಹಾಸ್ಪಿಟಲ್‌ಗೆ ಸೇರಿಸೊ ಏರ್ಪಾಟು ಮಾಡಿ ಬಂದಿದೀನಿ. ಅಲ್ಲಿ ರೆಸಿಡೆಂಟ್ ಮೆಡಿಕಲ್ ಆಫೀಸರ್ ಗುರುತು "ತಂದು ಬಿಡಿ, ನಾನು ಕೈಲಾದ ಮೆಡಿಕಲ್ ಎಯಿಡ್ ಕೊಡು ತೀನೀ"ಂತ ಹೇಳಿದಾರೆ

**ರಮಾ** — (ಕಂಬನಿದುಂಬಿ) ಅಣ್ಣಾ! ನಿನಗೀಮಾತಾಡೋದಕ್ಕಾದರೂ ಹ್ಯಾಗೆ ಬಾಯಿ ಬಂತಣ್ಣಾ

**ನಾಗೇಂದ್ರರಾವ್.**— ಅಯ್ಯೋ ಹುಚ್ಚು ಹುಡುಗೀ! ಅಲ್ಲವೇಮ್ಮಾ....

**ರಮಾ.**— ಸಾಕಣ್ಣ ನಿನ್ನ ಏರ್ಪಾಟು!! ಕೈ ಹಿಡಿದ ಗಂಡನ್ನ ಆಸ್ಪತ್ರೇಲಿ ಬಿಟ್ಟು ಬಿಟ್ಟು, ನಿನ್ನ ಸಂಗಡ ಟ್ರಿಪ್‌ಗೆ ಬಾಂತ ಕರೆಯೋದಕ್ಕೆ ನಿನಗೆ ಮನಸ್ಸು ಬಂತಲ್ಲಾ!!

**ನಾಗೇಂದ್ರರಾವ್:**— ಅಲ್ಲವೇ ರಮಾ : ಈ ಹುಚ್ಚನ್ನ ಕಟ್ಟಿಕೊಂಡು ಬೊಂಬಾಯಿಗೆ ಹೋಗೋದು ಹ್ಯಾಗೇ? ಇರೋದು ಹ್ಯಾಗೇ?

**ರಮಾ.**—'ಹೋಗಬೇಕು–ಇರಬೇಕೂ'ಂತ ನಾನು ಕೇಳಿದೆನೇನಣ್ಣಾ ಈಗ?

**ನಾಗೇಂದ್ರರಾವ್:**— ಅಲ್ಲವೇ ರಮಾ! ನಾವೂ ಒಂದೇ ಸಮನೆ ಮೂರು ತಿಂಗಳಿಂದ ಕಾದು ನೋಡಿದ್ದಾಯಿತು — ಈವತ್ತು ಬುದ್ಧಿ ಸರಿ ಹೋಗುತ್ತೆ — ನಾಳೆ ಬುದ್ಧಿ ಸರಿಹೋಗುತ್ತೇಂತ. ಕೈಲಾದ್ದೆಲ್ಲಾ ಮಾಡಾ

ಯಿತು. ಒಂದೂ ಪ್ರಯೋಜನವಿಲ್ಲದ ಹಾಗಾಯಿತು! ನಾವಿನ್ನೇನು ಮಾಡೋಕಾಗುತ್ತೇ?

ರಮಾ:—(ಕುಪಿತಳಾಗಿ) ಆದಕ್ಕೇ?

ನಾಗೇಂದ್ರರಾವ್:—ಅದಕ್ಕೆ ಆ ಹುಡುಗನ್ನ ಆಸ್ಪತ್ರೇಲಿ ಬಿಟ್ಟು ಒಂದು ತಿಂಗಳು ಹೊರಗಡೆ ಹೋಗಿ ಬೇಜಾರು ಕಳಕೊಂಡು ಬರೋಣ.

ರಮಾ:—ನನಗೆ ಬೇಜಾರೂಂತ ನಿನಗೆ ಯಾರಣ್ಣಾ ಹೇಳಿದ್ದು?

ನಾಗೇಂದ್ರರಾವ್:—ನೀನು ಹೇಳಬೇಕೇ ರಮಾ ಬಾಯಿ ಬಿಟ್ಟು? ನಮಗೇನು ಕಣ್ಣು ಕುರುಡೇ? ಮನೇಲಿ ನೀನೇ ಅನ್ನೋರೊಬ್ಬರೂ ದಿಕ್ಕಿಲ್ಲ. ನೀನೂ—ಈ ಹುಚ್ಚು ಹುಡುಗ, ದುಡ್ಡಿಲ್ಲ—ಕಾಸಿಲ್ಲ ಹಿಂದಿಲ್ಲ ಮುಂದಿಲ್ಲ ಮದುವೆ ಮಾಡಿದ ಮನೆಹಾಳಾ, ಮಾಡಿಸಿಕೊಂಡ ಕೊಲೆ ಪಾತಕಾ ಇಬ್ಬರೂ ಸತ್ತು ಸುಣ್ಣವಾಗಿ ಹೋದರು...

ರಮಾ.—(ಸಿಡಿದು) ಅಣ್ಣಾ ಾ ಾ ಾ!!

ನಾಗೇಂದ್ರರಾವ್—ನೆನಸಿಕೊಂಡರೆ ಕರಳು ಬಾಯಿಗೆ ಬರುತ್ತೆ ರಮಾ!

ರಮಾ:—ನೀನು ನಮ್ಮ ಮಾವನೋರನ್ನ ಬೈಯ್ಯಬೇಡ ಇವರನ್ನೇನೂ ಅನ್ನಬೇಡ. ನಿನಗೆ ಯಾರೂ ಕಣ್ಣು ಕಟ್ಟಿ ಮದುವೇಗೆ ಒಪ್ಪಿಸಲಿಲ್ಲ. ನಾನು 'ಒಲ್ಲೇ'ಂದರೂಕೂಡ ನೀನೇ ಬಲವಂತ ಮಾಡಿ ಮದುವೆ ಮಾಡಿದೆ. ಇವರ ಕೈಲಿ ತಾಳಿ ಕಟ್ಟಿಸಿದೆ. ತಾಳಿ ಕಟ್ಟೋಕೆ ಮುಂಚೆ ಇವರಿಗೂ ನನಗೂ ಯಾವ ಸಂಬಂಧವೂ ಇರಲಿಲ್ಲ. ಈಗ ಇವರೇ ನನಗೆ ಪತಿ! ಇವರೇ ನನಗೆ ದೇವರು!! ಇವರೇ ನನಗೆ ಸರ್ವಸ್ವ!! ಇವರು ಹುಚ್ಚರಾಗಿದ್ದರೂ ಏನಾಗಿದ್ದರೂ ಇವರನ್ನ ಬಿಟ್ಟು ನನಗೆ ಬೇರೆ ಗತಿಯಿಲ್ಲ ಮತಿಯಿಲ್ಲ; ಸ್ಥಿತಿಯಿಲ್ಲ; ಬಾಳಿಲ್ಲ.

ನಾಗೇಂದ್ರರಾವ್:—(ಸಿಟ್ಟಾಗಿ) ರಮಾ ಾ!!

ರಮಾ:—ಯಾಕಣ್ಣ ಸಿಟ್ಟು? ಕೇಳಿಬಿಡು ನನ್ನ ಮಾತನ್ನ ಪೂರ್ತಿ. ನಾನು ಒಂದರೆಕ್ಷಣ ಇವರನ್ನು ಬಿಟ್ಟಿರಲಾರೆ. ನಾನು ಇವರ ಸೇವೆಗೆ

ಬಂದೇನ್ನೋ ಧೈರ್ಯದಿಂದ, ಇವರ ತಂದೆ ಆ ಚಂಡಾಲನ ಮೇಲೆ ಸೇಡು ತೀರಿಸಿಕೊಂಡು ತಾವೂ ಪ್ರಾಣ ಕಳಕೊಂಡುಬಿಟ್ಟರು. ಆ ನನ್ನ ಮಾವ ನೋರ ನಂಬಿಕೆಗೆ ದ್ರೋಹ ಮಾಡಿ, ತಾಳೀ ಕಟ್ಟದ ಗಂಡನ್ನ ಕೈಬಿಟ್ಟು, ನಿನ್ನ ಸಂಗಡ ಬಂದು ನಾನು ಅನುಭವಿಸೋದೇನೂ ಇಲ್ಲ.

ನಾಗೇಂದ್ರರಾವ್:—(ಗದರಿಸಿ) ರಮಾ! ನಿನಗೆ ಬುದ್ಧಿ ಕೆಟ್ಟು ಹೋದಹಾಗಿದೆ....

ರಮಾ.—ಇರಬಹುದಣ್ಣಾ! ಆದರೂ ಒಳ್ಳೇದಕ್ಕೆ.

(ಹಿಂಬದಿಯಲ್ಲಿ ಶಶಿ "ಉಮಾ! ಉಮಾ!" ಎಂದು ಕೂಗುವನು. ರಮಾ ಹೋಗಿ ಉಪ್ಪಿಟ್ಟಿನ ತಟ್ಟೆಯನ್ನು ಹತ್ತಿರಿಟ್ಟು ಏನೋ ಹೇಳಿಬರುವಳು. ಶಶಿಯು ಉಪ್ಪಿಟ್ಟು ತಿನ್ನುತ್ತಿರುವನು.)

ರಮಾ:—(ಹಿಂತಿರುಗಿ ಬಂದು) ಇವರೇ ನನ್ನ ಜನ್ಮದ ಸುಖ, ಸಂಪತ್ತು, ಸೌಭಾಗ್ಯ ಎಲ್ಲಾ. ಇವರನ್ನ ಬಿಟ್ಟು ಅರೆಕ್ಷಣ ಸ್ವರ್ಗಕ್ಕೂ ಬರಲಾರೆ.

ನಾಗೇಂದ್ರರಾವ್ —(ಸಿಟ್ಟಾಗಿ) ನೀನು ದುಡುಕಿ ಮನಸ್ಸು ಬಂದ ಹಾಗೆ ಮಾತಾಡುತಿದ್ದೀ ರಮಾ! ನಾನು ಈ ಮನೇಗೆ ನಾಲ್ಕು ಕಾಸು ಕಳಿಸುತಿರೋ ಹೊತ್ತಿಗೆ ಇವನಿಗೂ ಎರಡು ತೊಟ್ಟು ಗಂಜಿ ಸಿಕ್ಕುತಾ ಇದೆ...

ರಮಾ.—(ನೊಂದು) ಅಣ್ಣಾ!! ನಿನ್ನ ಋಣದ ಒಂದು ಕಾಸೂ ಬೇಡ. ಎಲ್ಲಾ ತಗೊಂಡು ಹೊರಟುಹೋಗು ನೀನು ಕೊಟ್ಟಿರೋ ಒಡವೇ ವಸ್ತು ಎಲ್ಲಾ ತೆಕ್ಕೊಟ್ಟುಬಿಡುತೇನೆ. ಎಲ್ಲಾನೂ ತಗೊಂಡು ಹೋಗು. . ನನಗೆ ನಿನ್ನ ಒಂದು ಕುರುಡು ಕಾಸೂ ಬೇಡ.

ನಾಗೇಂದ್ರರಾವ್.— ಆಮೇಲೇನು ಮಾಡುತೀ ಈ ತಿಕ್ಕಲನ್ನ ಕಟ್ಟಿಕೊಂಡು? ಹೊಟ್ಟೆಗಿಲ್ಲದೆ ಅವನನ್ನೂ ಸಾಯಿಸಿ.....

ರಮಾ:—(ಕಿವಿಗಳನ್ನು ಮುಚ್ಚಿಕೊಂಡು) ರಾಮ ರಾಮ!! ಅಣ್ಣಾ ನೀನು ಹೋಗಣ್ಣ. ಸಂಜೆಗೆ ಮತ್ತೆ ಬಾ! ನಿನ್ನ ಒಡವೆ ವಸ್ತು ಎಲ್ಲ ತೆಗೆದಿಟ್ಟಿರುತ್ತೇನೆ. (ರಮಾ ಅತ್ತ ತಿರುಗುವಳು)

ನಾಗೇಂದ್ರರಾವ್:—ರಮಾ! ದುಡುಕಿ ಬಾಯಿಗೆ ಬಂದ ಹಾಗೆ ಮಾತನಾಡಬೇಡ. ಇವನನ್ನ ಸ್ವಲ್ಪ ದಿವಸ ಆಸ್ಪತ್ರೇಲಿ ಬಿಟ್ಟದ್ದು,......

ರಮಾ —ಅವರನ್ನಿಲ್ಲಿಂದ ಕದಲಿಸಿದರೆ ನಾನು ಪ್ರಾಣ ಕಳಕೊಂಡು ಬಿಡುತ್ತೇನೆ.

ನಾಗೇಂದ್ರರಾವ್:—ಹೀಗೇ ಈ ಜನ್ಮ ಎಲ್ಲಾ ಕಳೀಬೇಕಲ್ಲಾ !!

ರಮಾ:—ಕಳೀತೇನೆ. ಅದೇ ನನ್ನ ತಪಸ್ಸು. ಕೂಲಿ ನಾಲಿ ಮಾಡಿ ಹೊಟ್ಟೆ ಹೊರೀತೇನೆ. ಆದರೆ ಭಿಕ್ಷೆ ಬೇಡೊಲ್ಲ. ಅಪ್ಪನ ಹತ್ತಿರವೂ ಬೇಡೊಲ್ಲ.

ನಾಗೇಂದ್ರರಾವ್:—ನೀವು ಎಷ್ಟು ಇಂಗ್ಲಿಷ್ ಓದಿದರೇನು ? ಏನು ಪ್ಯಾಸ್ ಮಾಡಿದರೇನು ? ದಿ ಸೇಮ್ ಓಲ್ಡ್ ಅಡುಗೂಲಜ್ಜಿ ಕನ್ವಿಕ್ಷನ್ಸ್‌ಗೆ ಬಲಿ.

ರಮಾ:—ಹೆಣ್ಣಿಗೆ ಪ್ರಪಂಚದಲ್ಲಿ ಇದೊಂದೇ ಆಸ್ತಿ ಇರೋದು. ಇದೂ ಹೋಗಿಬಿಟ್ಟರೆ ಅವಳು ಹೆಣ್ಣಲ್ಲ—ಹೆಮ್ಮಾರಿ.

ನಾಗೇಂದ್ರರಾವ್:—(ಮಹಾ ಕೋಪದಿಂದ) ಎಲ್ಲಾದರೂ ಹೋಗು! ನಿನ್ನಂಥ ಫೂಲಿಷ್, ಇಂಪಿಷ್ ಗರ್ಲ್‌ಗೆ ಯಾರು ಬುದ್ಧಿ ಕಲಿಸೋದಕ್ಕಾಗುತ್ತೆ. ನಿನ್ನಹಣೇಲಿ ಬರೆದಿದ್ದನ್ನ ಅನುಭವಿಸಿಕೋ....(ಹೊರಟು ಹೋಗುತ್ತಾ) ಸದ್ಯ....ಈ ನರಕ ನೋಡೋಕೆ ಮುಂಚೇನೇ ಅವಳೊಬ್ಬಳು ಕಣ್ಣು ಮುಚ್ಚಿಕೊಂಡುಬಿಟ್ಟಳು. ಅದೊಂದು ಪುಣ್ಯ.

ರಮಾ:—ಅವಳೊಬ್ಬಳು ಬದುಕಿದ್ದರೆ ಈ ನರಕಕ್ಕೆ ನನ್ನ ನೂಕೋದಕ್ಕೆ ಬಿಡುತಾಲೇ ಇರಲಿಲ್ಲ. ನಿಮ್ಮ ಕೈ ತಡದೇ ಇರೋಳು.

ನಾಗೇಂದ್ರರಾವ್:—(ಹಿಂದಕ್ಕೆ ತಿರುಗಿ) ಕಡೆಗೂ ನನ್ನ ಕಣ್ಣನ್ನೇ ಕುಕ್ಕುತೀಯಾ ?

ರಮಾ:—ತಪ್ಪಾಯಿತಣ್ಣಾ! ನೀನೀ ನರಕದಿಂದ ಹೋಗಿಬಾ. ನನ್ನ ಪುಣ್ಯ, ನನ್ನ ತಾಯಿ ಪುಣ್ಯ ಚೆನ್ನಾಗಿದ್ದರೆ, ಇವರ ಬುದ್ಧಿ ಸರಿ ಹೋಗಿ, ಎಲ್ಲರಂತಾದರೆ, ನಿನ್ನ ಅಂತಸ್ತಿಗೆ ತಕ್ಕ ಹಾಗೇ ಏನು, ಇನ್ನೂ ಹೆಚ್ಚಾಗಿ ಬಾಳೋದನ್ನ ನೋಡುವೆ.

**ನಾಗೇಂದ್ರರಾವ್:**—ವ್ಹೈ ಗುಡ್‌ನೆಸ್ ಗ್ರೇಷಸ್ !! ಇಷ್ಟೊಂದು ಅಡಾಸಿಟಿ !! ಆಲ್‌ರೈಟ್ ! ನೋಡೋಣ !!....

(ಹೊರಟು ಹೋಗುವನು. ರಮಾ ಅತ್ತ ಕಡೆಯೇ ನೋಡುತ್ತಿದ್ದು ಕಂಬನಿದುಂಬಿ ಅಳುವಳು.)

**ಶಶಿ.**—ಉಮಾ! ಉಮಾ! ಎಷ್ಟು ಹೊತ್ತೇ ದಾಸನಕ್ಕೈಲಿ ಮಾತೂ? ........ನನಗೊಂದು ಲೋಟ ನೀರು ಬೇಕು.

(ರಮಾ ಕಣ್ಣೊರಸಿಕೊಂಡು ಸರ್ರನೆ ಒಳಕ್ಕೆ ಹೋಗಿ ಒಂದು ಲೋಟ ನೀರು ತಂದು ಶಶಿಗೆ ಕೊಡುವಳು.)

**ಶಶಿ:**—ಏನುಮಾ !........ಅಪ್ಪ ಅಮ್ಮ ಸತ್ತುಹೋಗೋದಕ್ಕೆ ಮುಂಚೇನೆ ನೀನು ಸತ್ತುಹೋದೋಳು ಬಂದು ಬಿಟ್ಟೆ. ಅವರಿನ್ನೂ ಬಂದೇ ಇಲ್ಲ. ನೀನು ಬರದೆಹೋಗಿದ್ದಿದ್ದರೆ ನಾನು ಸತ್ತುಹೋಗಿಬಿಡುತಿದ್ದೆ.

**ರಮಾ:**— (ಶಶಿಯ ಬಾಯಿಮೇಲೆ ಕೈಯಿಟ್ಟು) ರಾಮಾ ರಾಮಾ ; ಮತ್ತೆ ಮತ್ತೆ ಆ ಮಾತಾಡಬೇಡಿ.

**ಶಶಿ**—ಸಾಯೋದು ಕಷ್ಟಾನೇ ಉಮಾ?

**ರಮಾ:**—ಅಯ್ಯೋ ಆ ಮಾತು ಬಿಡಿ. ಏಳಿ ಸ್ನಾನಮಾಡಿಬಿಡಿ. ಈವತ್ತು ಮಧ್ಯಾಹ್ನ ಆ ಸಾಧುಗಳ ಹತ್ತಿರ ಹೋಗಿ ಬರೋಣ.

**ಶಶಿ:**—ಉಮಾ ! ನೀನು ಬಾವಿಗೆ ಬಿದ್ದು ಸತ್ತುಹೋದೇಂತ ಪೇಪರ್‌ನಲ್ಲಿ ಓದಿಬಿಟ್ಟಾಗ ನಾನು ಅತ್ತೂ ಅತ್ತೂ ಮೂರ್ಛೆ ಹೋಗಿಬಿಟ್ಟಿದ್ದನಂತೆ.

**ರಮಾ:**—ಹೌದು ; ಏಳಿ ಸ್ನಾನಮಾಡಿಬಿಡಿ.

**ಶಶಿ.**—ಕಾಲಿಲ್ಲದೆ ಆ ಬಾವೀ ಕಟ್ಟೆಮೇಲೆ ಹ್ಯಾಗೆಹತ್ತಿದೆ ಉಮಾ ?

**ರಮಾ:**—ಹಾಗೇ ತೆವಳಿಕೊಂಡೇ ಹತ್ತಿದೆ. ಏಳಿ ಸ್ನಾನಮಾಡುವಿರಿ.

**ಶಶಿ:**—ನೋಡಿದೆಯಾ ? ಒಂದು ಸಲ ಸತ್ತರೆ ಎಷ್ಟು ಅನುಕೂಲ ವಾಗುತ್ತೇ !

**ರಮಾ:**—ರಾಮ ರಾಮಾ ! ಆ ಮಾತು ಬಿಡಿ. ಏಳಿ.

(ಬೀದಿಯ ಬಾಗಿಲನ್ನು ಹಾಕಲು ಬರುವಳು. ಆದರೆ ಅಲ್ಲೇ ನಿಂತಿದ್ದ ಹತ್ತೊಂಭತ್ತು ವರುಷದ ಸುಮಾ ನರ್ಸ್ ಉಡುಪಿನಲ್ಲಿ ಬರುವಳು.)

**ರಮಾ:**—ನೀವು ಯಾರು ತಾಯಿ ?

**ಸುಮಾ:**—ನಾನು ನಿಮ್ಮಂತೆಯೇ ಈ ಮನೆಗೆ ಸಂಬಂಧಪಟ್ಟವಳು.

ರಮಾ:— ಕ್ಷಮಿಸಬೇಕೂ. ನಿಮ್ಮನ್ನು ನಾನು ಎಂದೂ ನೋಡಿಲ್ಲ ನಿಮ್ಮ ಹೆಸರೇನು ?

ಸುಮಾ:— ನಿರ್ಭಾಗ್ಯಳಿಗೆ ಹೆ ಸ ರೇ ನು ಬಂತು? ಕಂಡವರು "ಸುಮಾ"ಂತ ಕರೀತಾರೇ.

ರಮಾ:—(ಆಶ್ಚರ್ಯದಿಂದ) ನಿಮಗೆ ಈ ಮ ನೆ ಯ ಲ್ಲಿ ಯಾರು ಪರಿಚಯ ?

ಸುಮಾ:— ಪರಿಚಯವಲ್ಲಾ–ಸಂಬಂಧ !!

ರಮಾ :— ಯಾರೂ ?

ಸುಮಾ :—(ಹಾಡಿಕೊಳ್ಳುತ್ತಾ ಕುಳಿತಿರುವ ಶಶಿಯ ಕಡೆಗೆ ಕೈ ತೋರಿಸಿ) ಅಗೋ ಅವರು.

ರಮಾ :—(ಚಕಿತಳಾಗಿ) ಅವರು ನಿಮಗೇನಾಗಬೇಕು ?

ಸುಮಾ :— ನನ್ನ ಜೀವನದ ಆರಾಧ್ಯದೇವತೆ.

ರಮಾ :—ಅಂದರೇ ?

ಸುಮಾ :— ಅಂದರೆ, ನಾನು ಅವರ ಅವಿವಾಹಿತ ಪತ್ನಿ.

ರಮಾ :—ತಾಯೀ ! ನನಗೆ ನಿಮ್ಮ ಮಾತುಗಳು ಅರ್ಥವಾಗದೆ ತಲೆಸುತ್ತುತ್ತಿದೆ. ಬೇಗ ಬಿಡಿಸಿ ಹೇಳಿ. ವಿಚಾರವೇನು ?

ಸುಮಾ :—(ರಮಾ ಕೈಹಿಡಿದು) ತಂಗೀ ! ಇವರು ನನ್ನ ಅಣ್ಣ ಅನಂತುವಿನ ಸ್ನೇಹಿತರು. ಹಿಂದೆ ನಮ್ಮ ಮನೆಗೆ ಕೆಲವು ವರುಷಗಳ ಕೆಳಗೆ ಬಂದಿದ್ದಾಗ ಬಹು ಬಡಸ್ಥಿತಿಯಲ್ಲಿದ್ದ ತಂದೆಯಿಲ್ಲದ ನಮ್ಮ ಕುಟುಂಬದ ಮೇಲೆ ಕನಿಕರಗೊಂಡು ನನ್ನನ್ನೇ ಮದುವೆಯಾಗುವುದಾಗಿ ಹೇಳಿ ಹಿಂದಿರುಗಿದರು. (ತನ್ನ ಕೈ ಚೀಲದಿಂದ ಶಶಿಯ ಹಿಂದಿನ ಫೋಟೋವೊಂದನ್ನು ತೆಗೆದು ತೋರಿಸುತ್ತಾ) ಇಗೋ! ಇದೇ ನನ್ನ ಸ್ವಾಮಿಯು ನನಗೆ ಕಳುಹಿಸಿದ ತನ್ನ ಮೂಲ ಮೂರ್ತಿ. ಆ ದಿನದಿಂದ ನನ್ನ ಹೃದಯಾಂತರಾಳದಲ್ಲಿ ಇವರನ್ನೇ ವರಿಸಿಬಿಟ್ಟೆ. ಆದರೆ ವಿಧಿಯ ನಾಟಕ ಬೇರೆ ರೀತಿಯಾಗಿತ್ತು. ತಂದೆಯ ಬಲವಂತಕ್ಕೆ ಇವರೇನೋ ಬೇರೆ ಮದುವೆಯಾದರು. ಅದನ್ನು ಕೇಳಿ ನನ್ನ ತಾಯಿ ಕಂಗಾಲಾದಳು ! ವಯಸ್ಸಾದ ನನ್ನ ಹಳ್ಳಿಯಲಿಟ್ಟುಕೊಂಡಿರಲಾರದೆ ಬೇರೆ ಊರಿಗೆ ಬಂದು, ಅಲ್ಲಿ ಆಕಸ್ಮಿಕವಾಗಿ ಮೃತಪಟ್ಟಳು. ನಂತರ

ನಮ್ಮಣ್ಣ ಆಫ್ರಿಕಾದ ಬ್ರಿಟಿಷ್ ಸೋಮಾಲಿಲ್ಯಾಂಡಿಗೆ ಕೆಲಸಕ್ಕಾಗಿ ಹೊರಟು ಹೋದ. ನಾನು ಪೂನದ ಅಬಲಾಶಮ್ರವೊಂದರಲ್ಲಿ ಇಷ್ಟು ದಿವಸವೂ ಇದ್ದು ನೊಂದವರ ಸೇವೆಯಲ್ಲಿ ಜೀವನವನ್ನ ಸವೆಸಬೇಕೆಂದು ತೀರ್ಮಾನಿಸಿ ನರ್ಸ್ ಟ್ರೇನಿಂಗ್ ಮುಗಿಸಿಕೊಂಡು, ಸರ್ಕಾರದ ಕೆಲಸಕ್ಕೆ ಸೇರಿದೆ. ಈಗ ಆರುದಿನ ಗಳ ಹಿಂದೆ ಹಾಸನದಿಂದ ಇಲ್ಲಿಯ ಮೆಂಟ್‌ಲ್ ಆಸ್ಪತ್ರೆಗೆ ವರ್ಗಾಯಿಸಿದರು ನಾನು ಇವರ ಮನೆಯನ್ನು ಪತ್ತೆಹಚ್ಚಲು ತರುದೂದು, ನಡೆಸಿ ವ್ಯರ್ಥವಾಗಿ ತ್ತು, ಆದರೆ ಈ ದಿನ ನಿಮ್ಮ ತಂದೆ ಬಂದು ಡಾಕ್ಟರ್ ಬಳಿ ಮಾತನಾಡುತ್ತಿದ್ದಾಗ ಅಲ್ಲೇ ಡೈರಿ ಬರೆಯುತ್ತ ಕುಳಿತಿದ್ದ ನನಗೆ ಇವರ ಕಥೆ ಕೇಳಿ ಕರಳು ಬೆಂದುಹೋಯಿತು. ಕಡೆಗೆ ನಿಮ್ಮ ತಂದೆಗೆ ಪತ್ತೆಕೊಡದೆ, ಅವರ ಟ್ಯಾಕ್ಸಿಯ ಹಿಂದೇ, ನಾನು ಅಲ್ಲಿನ ಪೇಷಂಟೊಬ್ಬರ ಮನೆಯ ಕಾರಿನಲ್ಲಿ ಬಂದು ಇಲ್ಲೇ ಪಕ್ಕದಲ್ಲಿಳಿದು, ಮರೆಯಲ್ಲಿ ನಿಂತು, ನಿಮ್ಮಿಬ್ಬರ ಸಂಭಾಷಣೇನ ಕೇಳುತಾ ಇದ್ದೆ.........ತಂಗೀ! ರಮಾ! ನೀನು ಧನ್ಯಳು. ನಿನ್ನನ್ನ ಹೆತ್ತ ತಾಯಿ ಪುಣ್ಯವಂತರು.

ರಮಾ :—(ಸುಮಾ ಪಾದಗಳನ್ನು ಮುಟ್ಟ ಕಣ್ಣಿಗೊತ್ತಿಕೊಂಡು)ನಂಬಿದವರನ್ನ ಅನಾಥರನ್ನಾಗಿ ಕೈ ಬಿಡೋದಿಲ್ಲಾ ಭಗವಂತಾ! ಆ ನಂಬಿಕೆ ನನಗೆ ಧೃಡವಾಗಿದೆ. ನಾನೇನೋ ಮದುವೆಯಾದನಂತರ ಇವರನ್ನ ಸರ್ವಸ್ವಾಂತಭಾವಿಸಿದೆ ಆದರೆ ನೀವು ಮದುವೆಯಾಗದಿದ್ದರೂ, ಕೇವಲ ಒಂದು ಮಾತಿನಮೇಲೆ ಈ ರೀತಿ ನಿಮ್ಮ ಜೀವಮಾನಾನೇ ಇವರಿಗೆ ಮೀಸಲಾಗಿಟ್ಟುಬಿಟ್ಟಿರೋದು ಮಹಾ ಪುಣ್ಯವಲ್ಲವೇ ?

ಸುಮಾ :— ಇಲ್ಲಾ ತಂಗೀ! ನಿಮ್ಮ ತಂದೆ ಡಾಕ್ಟರರಿಗೆ ಹೇಳಿದ ಕಥೆಯು ನಿಜವಾಗಿದ್ದಲ್ಲಿ ತನ್ನ ಗಂಡನ ವಿರಹದಿಂದ ನೊಂದು, ಅವನ ಭವಿಷ್ಯಕ್ಕಾಗಿ ಪ್ರಾಣ ಬಿಟ್ಟ ಆ ಹೆಳವಿ ಹುಡುಗಿ ಉಮಾ ಬಹು ಪುಣ್ಯವಂತಳು. ಅವಳು ಮಹಾಸತಿ.

ರಮಾ :—ಅಮ್ಮಾ! ನೀವು ಗಂಡನ ಕೈಯಿಂದ ತಾಳಿ ಕಟ್ಟಿಸಿಕೊಳ್ಳದೇ ಬದುಕಿ ಸತಿಯಾಗಿದೀರಿ. ಅವಳು ತಾಳಿ ಕಟ್ಟಿಸಿಕೊಂಡು ಸತ್ತು ಮಹಾಸತಿಯಾಗಿದ್ದಾಳೆ !!

ಸುಮಾ :—ತಂಗೀ! ನೀನಾದರೋ ತಾಳಿ ಕಟ್ಟಿಸಿಕೊಂಡು ಬದುಕಿ

ಸತಿಯಾಗಿರುವೆಯೆಲ್ಲಾ. ನಿಮ್ಮ ತಂದೆಯ ಮಾತಿಗೆ ನೀನು ಕೊಟ್ಟ ಉತ್ತರ ಗಳು ಸಾಮಾನ್ಯ ಹೆಣ್ಣಿನ ಬಾಯಿಂದ ಬರುವ ಮಾತುಗಳಲ್ಲ. ನಿನ್ನ ನಿರ್ಧಾರ, ಪತಿಗಾಗಿ ಸರ್ವತ್ಯಾಗ ಸಾಮಾನ್ಯ ಗುಣಗಳಲ್ಲ ನನ್ನ ಮನಸ್ಸಿಗೆ ಬಹು ನೆಮ್ಮದಿಯಾಯಿತು. ಎಲ್ಲಕ್ಕಿಂತ ಮೇಲಾಗಿ ನೀನು ಇವರನ್ನ ಆಸ್ಪತ್ರೆಗೆ ಬಿಡಲೊಪ್ಪಲಿಲ್ಲವಲ್ಲಾ–ಅದು ಬಹು ದೊಡ್ಡ ಉಪಕಾರವಾಯಿತು. ನಮ್ಮ ದೊಡ್ಡ ಡಾಕ್ಟರರನ್ನು ಕರೆದುಕೊಂಡು ಬಂದು ನಾವೇ ಇಲ್ಲಿ ಕೈಲಾದ ಔಷಧೋಪಚಾರವನ್ನ ಮಾಡೋಣ. ನಿಮಿಬ್ಬರ ಜೀವನಕ್ಕೆ ನಾನು ದುಡಿಯುತ್ತೇನೆ ಈಶ್ವರನು ನನ್ನ ದುಡಿಮೆಗೆ ನನ್ನ ಪೂಜ್ಯ ಪತಿಯನ್ನು ತೋರಿಸಿದಾನೆ. ನೀನು ಇವರ ಸೇವೆಯ ಹೊರೆಯನ್ನು ಪ್ರೇಮದಿಂದ ಹೊತ್ತಿದ್ದೀ! ಇನ್ನು ನನಗೆ ಪರಮಾನಂದವಾಯಿತು. ನಿನ್ನ ಅಪಾರ ಭಕ್ತಿ ಪ್ರೇಮಗಳಿಂದ ಇವರು ಖಂಡಿತವಾಗಿಯೂ ಗುಣಹೊಂದುವರು.

(ಹಿಂಬದಿಯಲ್ಲಿ ಶಶಿಯು 'ಉಮಾ' ಉಮಾ!!' ಎಂದು ಕೂಗುವನು)

ಅವರಿಗೆ ಆ ಹುಡುಗಿಯಮೇಲೆ ಎಷ್ಟೊಂದು ಕನಿಕರವಿರಬೇಕು!!

ರಮಾ :— ನಿಂತೇ ಮಾತಾಡುತಿದೀರಿ, ಬನ್ನಿ ಕೂಡಿ

ಸುಮಾ :— ನಾನೀಗ ಇದ್ದಕ್ಕಿದ್ದಂತೆ ಅವರ ದೃಷ್ಟಿಗೆ ಬಿದ್ದರೆ ಮನಸ್ಸಿನಲ್ಲಿ ಮತ್ತೇನು ವ್ಯತ್ಯಾಸವಾಗಿಬಿಡುವುದೋ? ಅದಕ್ಕಾಗಿ ನಮ್ಮ ಡಾಕ್ಟರ ಸಂಗಡ ನಾಳೆ ಇಲ್ಲಿಗೆ ಬಂದು, ನಂತರ ಇಲ್ಲೇ ಇರುವ ವ್ಯವಸ್ಥೆ ಮಾಡುತೇನೆ. ಈಗ ಹೋಗಗೊಡು; ಹೊರಗಡೆ ಕಾರು ಕಾದಿದೆ.

ರಮಾ ,—(ಕಂಬನಿ ದುಂಬಿ) ನಾನೆಂಥಾ ಪುಣ್ಯವಂತೇ! ನಿಮ್ಮಂಥ ಅಕ್ಕನನ್ನ ದಯಪಾಲಿಸಿರುವ ಆ ದೇವರು ದೊಡ್ಡವನು. ನನಗಿನ್ನು ಯಾವ ಆಂತಕವೂ ಇಲ್ಲ

(ರಮಾ ಆಕೆಯ ಪಾದಗಳನ್ನು ಮುಟ್ಟಿ ಕಣ್ಣಿಗೊತ್ತಿಕೊಳ್ಳುವಳು). ಸುಮಾ ಅವಳನ್ನು ಮೇಲೆಬ್ಬಿಸಿ ಅಪ್ಪುವಳು.

(ಹಿಂಬದಿಯಲ್ಲಿ ಶಶಿಯು ಹಾಡಿಕೊಳ್ಳುತ್ತಿರುವನು)

ಪ್ರೇಮ ಜೀವನ ಶಾಂತಿಯ ಸದನ ಸುಖ ಸಂಪದದನಿದಾನಾ ||
ಪ್ರೇಮವಾಹಿನಿ ಮಂಜುಳ ಮೋಹಿನೀ ಸಿರಿ ಸುಖ ಸ್ವರ್ಗದ ರಾಣೀ ||





ಚಿ ಸದಾಶಿವಯ್ಯನವರು

"ಸಮಕಾಲೀನ ವಿದೇಶೀ ಸಾಹಿತ್ಯದ ಸರ್ವೋತ್ತಮ ಕೃತಿಗಳಿಗೆ ಸರಿ ತೂಗುವಂಥ ಸಾಹಿತ್ಯ ಕೃತಿಗಳನ್ನು ರಚಿಸಿರುವ ಚಿ ಸದಾಶಿವಯ್ಯನವರ ರಚನಗಳನ್ನು ಪರೀಕ್ಷಿಸಿದವರಿಗೆ, ಆಧುನಿಕ ಕನ್ನಡದ ಉತ್ತಮ ಲೇಖಕರಲ್ಲಿ ಸದಾಶಿವಯ್ಯನವರು ಬಹು ಮುಂದಿರುವರೆಂಬುದು ಸ್ಪಷ್ಟವಾಗುವುದು" **(ಇಂಡಿಯನ್ ಎಕ್ಸ್‌ಪ್ರೆಸ್).** "ಸದಾಶಿವಯ್ಯನವರು ಅಭಿನಯ ಕುಶಲರು ನಾಟಕದ ಹಾಗೂ ರಂಗಸ್ಥಳದ ರಹಸ್ಯ ಅರಿತವರು ಆದ್ದರಿಂದ ದೃಶ್ಯಗಳ ಯೋಜನೆಯ ಪಾತ್ರರಚನೆಯ ಯುಕ್ತಾಯುಕ್ತತೆಯನ್ನೂ ತೂಗಿ ಕಲ್ಪನೆಯ ಮಾತುಗಳಲ್ಲಿ ಮುಡಿಸಬಲ್ಲವರು" **(ಕರ್ಮವೀರ-ಹುಬ್ಬಳ್ಳಿ).** 'ಸದಾಶಿವಯ್ಯನವರು ಒಂದೊಂದು ನಾಟಕವನ್ನೂ ವಿಚಾರ ದೃಷ್ಟಿಯಿಂದ ಪರಿಣಾಮಕಾರಿಯಾಗಿ ರಚಿಸುತ್ತಾರೆ" **(ಕಲೆಗಾರ)** "ಶ್ರೀಮಾನ್ ಸದಾಶಿವಯ್ಯನವರು ನಾಟಕದಲ್ಲಿ ನೂತನಪೂರಪ್ರಯೋಗ ಮಾಡಿ, ಪ್ರೇಕ್ಷಕರ ಗಂಟುಮುಖವನ್ನು ಸಡಿಲಮಾಡಿ ನಗೆಯ ಚಿಲುಮೆಯನ್ನೆಬ್ಬಿಸುವ ಕಲೆಯಲ್ಲಿ ಸಿದ್ಧಹಸ್ತರು" **(ವಿಶ್ವಕರ್ಣಾಟಕ)** ಸದಾಶಿವಯ್ಯನವರು ..ಜೀವನವನ್ನೂ, ನೋಡುವ ಕಣ್ಣು ಉತ್ತುಂಗವಾಗಿದೆ" **(ಪ್ರಜಾಮತ)**

ಇಪ್ಪತ್ತುವರುಷಗಳಿಗಿಂತಲೂ ಹೆಚ್ಚಾಗಿ ಸದಾಶಿವಯ್ಯನವರು ರಂಗಭೂಮಿಯ ಸೇವೆ ಮಾಡುತ್ತಾ ಇಪ್ಪತ್ತಕ್ಕೂ ಹೆಚ್ಚು ನಾಟಕಗಳನ್ನೂ, ನೂರಾರು ಕವಿತೆಗಳನ್ನೂ, ಹತ್ತಾರು ಸಣ್ಣ ಕತೆ, ನೀಳ್ಗತೆಗಳನ್ನೂ ಬರೆದಿದ್ದಾರೆ.

Printed by M R Raghunatha Rao, at Chetana Printers, Bangalore-2,